ಅಧ್ಯಾತ್ಮಗ್ರಂಥಾವಳಿ

ಶ್ರೀಸುರೇಶ್ವರಾಚಾರ್ಯವಿರಚಿತ

# ಮಾನಸೋಲ್ಲಾಸ

(ದಕ್ಷಿಣಾಮೂರ್ತಿಸ್ತೋತ್ರದ ಮೇಲಿನ ಪದ್ಯರೂಪವಾದ ವ್ಯಾಖ್ಯಾನ)

ಬರೆದವರು :

ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು

ಕ್ರಮಾಂಕ ೧೫೯

ಪ್ರಕಾಶಕರು :

ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ.

( ಹಾಸನ ಜಿಲ್ಲೆ, ಮೈಸೂರು ಸಂಸ್ಥಾನ )

1972

# ಪ್ರಕಾಶಕರ ಮುನ್ನುಡಿ

---

ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು ಈಗ್ಗೆ ಹತ್ತುವರ್ಷಗಳ ಕೆಳಗೆ ದಕ್ಷಿಣಾಮೂರ್ತಿಸ್ತೋತ್ರಕ್ಕೆ ಒಂದೊಂದು ಪದ್ಯಕ್ಕೂ ವಿಸ್ತಾರವಾದ ಸ್ವತಂತ್ರವಾದ ವಿವರಣೆಯನ್ನು ಬರೆದು ಅನುಗ್ರಹಿಸಿದ್ದನ್ನು ಅಧ್ಯಾತ್ಮಪ್ರಕಾಶ ಮಾಸಪತ್ರಿಕೆಯ ಮೂಲಕ ಪ್ರಕಟಿಸಿ ಗ್ರಂಥರೂಪವಾಗಿಯೂ ಹೊರತರಲಾಗಿತ್ತು. ಈಗಲೂ ಆ ಗ್ರಂಥವು ಕಾರ್ಯಾಲಯದಲ್ಲಿ ದೊರಕುತ್ತಿದೆ.

ಪೂಜ್ಯ ಶ್ರೀಶ್ರೀಗಳವರು ಆ ಗ್ರಂಥದ ಮುನ್ನುಡಿಯಲ್ಲಿ ಸೂಚಿಸಿದ್ದಂತೆ ಈಗ "ಮಾನಸೋಲ್ಲಾಸ"ವೆಂಬ ಹೆಸರಿನ ಶ್ರೀಸುರೇಶ್ವರಾಚಾರ್ಯಕೃತವೆಂದು ಪ್ರಸಿದ್ಧವಾಗಿರುವ ಈ ಪದ್ಯರೂಪವಾದ ಗ್ರಂಥವನ್ನು ಮೂಲ, ಅರ್ಥ, ವಿವೇಚನೆ, ವಿಮರ್ಶಾತ್ಮಕಟೀಕೆ, ಪರಿಶಿಷ್ಟ–ಮುಂತಾದವುಗಳೊಡನೆ ಸಜ್ಜುಗೊಳಿಸಿ ಕಾರ್ಯಾಲಯದ ಮೂಲಕ ಪ್ರಕಟಿಸಲು ಆಜ್ಞೆಮಾಡಿರುತ್ತಾರೆ. ಅದರಂತೆ ಈ ಗ್ರಂಥವನ್ನು ಹೊರತರಲಾಗಿದೆ. ಹಿಂದಿನ ಗ್ರಂಥದಂತೆಯೇ ಇದನ್ನೂ ಅಧ್ಯಾತ್ಮಪ್ರಕಾಶಮಾಸಪತ್ರಿಕೆಯಲ್ಲೂ ಪ್ರಕಟಿಸುವ ಪ್ರಯತ್ನವನ್ನು ಮಾಡಿದೆವಾದರೂ ಅನಿವಾರ್ಯ ಕಾರಣಗಳಿಂದ ಪೂರ್ಣವಾಗಿ ಕೊಡಲು ಸಾಧ್ಯವಾಗದಿದ್ದುದಕ್ಕಾಗಿ ಪತ್ರಿಕೆಯ ವಾಚಕರಲ್ಲಿ ಕ್ಷಮೆಬೇಡುತ್ತೇವೆ. ಆದರೆ ಈಗ ಗ್ರಂಥವು ಸ್ವತಂತ್ರವಾಗಿ ಸರ್ವಾಂಗ ಸುಂದರವಾಗಿ ಹೊರಬಂದಿರುವದರಿಂದ ವೇದಾಂತರಸಿಕರೆಲ್ಲರೂ ಓದಿ ಆನಂದ ಪಡಬಹುದಾಗಿದೆ.

ಎಂದಿನಂತೆ ಶ್ರೀಶ್ರೀಗಳವರು ಈ ಗ್ರಂಥದ ಪ್ರಕಾಶನ, ಪುನರ್ಮುದ್ರಣ–ಮುಂತಾದ ಹಕ್ಕುಗಳನ್ನೆಲ್ಲ ಕಾರ್ಯಾಲಯಕ್ಕೇ ಒಪ್ಪಿಸಿರುತ್ತಾರೆ. ಕಾರ್ಯಾಲಯದ ಪಂಡಿತರಾದ ವೇ|| ಬ್ರ|| ಶ್ರೀ|| ಅಧ್ಯಾತ್ಮವಿದ್ಯಾಪ್ರವೀಣ ಹೆಚ್.ಎಸ್. ಲಕ್ಷ್ಮೀನರಸಿಂಹಮೂರ್ತಿಗಳು ಕೈಬರಹಪ್ರತಿಯನ್ನು ಶೋಧಿಸುವದು, ಅಚ್ಚಿನ ಕರಡುಗಳನ್ನು ತಿದ್ದುವದು– ಮುಂತಾದ ರೀತಿಯಿಂದ ಸಹಕರಿಸಿದ್ದಾರೆ.

ವಾಚಕರು ಉಳಿದ ಗ್ರಂಥಗಳಂತೆಯೇ ಈ ಗ್ರಂಥವನ್ನೂ ಆದರದಿಂದ ಬರಮಾಡಿಕೊಂಡು ನಮ್ಮ ಪ್ರಯತ್ನವನ್ನು ಪ್ರೋತ್ಸಾಹಿಸುವರೆಂದು ಆಶಿಸಲಾಗಿದೆ.

ಹೊಳೆನರಸೀಪುರ
26-8-1972

ವೈ. ನರಸಪ್ಪ,
ಕಾರ್ಯಕಾರಿಸಮಿತಿಯ ಅಧ್ಯಕ್ಷ.

---

# ಪೀಠಿಕೆ

## ಈ ಗ್ರಂಥದ ಕರ್ತೃ ಯಾರು ?

೧. "ಮಾನಸೋಲ್ಲಾಸ"ವನ್ನು ರಚಿಸಿದವರು ಶ್ರೀಶಂಕರಭಗವತ್ಪಾದರ ಸಾಕ್ಷಾಚ್ಛಿಷ್ಯರಾದ ಶ್ರೀ ಸುರೇಶ್ವರಾಚಾರ್ಯರೆಂಬ ಹೆಸರಿನಿಂದ ಪ್ರಸಿದ್ಧರಾಗಿರುವ ವಾರ್ತಿಕಕಾರರೇ ಎಂದು ಬಹುಜನರ ನಂಬಿಕೆಯಿದೆ. ಆದರೆ ಈ ನಂಬಿಕೆಯು ಸಾಧಾರವಾದದ್ದೆ ?– ಎಂಬುದನ್ನು ವಿಮರ್ಶಿಸಬೇಕಾದದ್ದು ಅವಶ್ಯ. ಏಕೆಂದರೆ ಈ ನಂಬಿಕೆಗೆ ಅಡ್ಡಬರುವ ಹಲವು ಗುಣಗಳು ಈ ಗ್ರಂಥದಲ್ಲಿ ಬಹಳ ಸ್ಫುಟವಾಗಿ ಕಂಡುಬರುತ್ತಿವೆ.

೨. **ಗ್ರಂಥದ ಉಪಕ್ರಮೋಪಸಂಹಾರಪ್ರಕಾರಗಳು** ಅತ್ಯಂತಸ್ಥೂಲ ದೃಷ್ಟಿಯಿಂದ ನೋಡುವವರಿಗೂ ತಟ್ಟನೆ ಹೊಳೆಯುವ ವಿಶೇಷಗುಣಗಳಾಗಿವೆ.

(a) ನೈಷ್ಕರ್ಮ್ಯಸಿದ್ಧಿ, ತೈತ್ತಿರೀಯಭಾಷ್ಯವಾರ್ತಿಕ, ಬೃಹದಾರಣ್ಯಕಭಾಷ್ಯ ವಾರ್ತಿಕ– ಈ ಮೂರು ಗ್ರಂಥಗಳಲ್ಲಿಯೂ ಶಾಂಕರವೇದಾಂತಸಿದ್ಧಾಂತಕ್ಕನು ಸಾರವಾದ ಮಂಗಲಗಳು ಕಾಣಬರುತ್ತಿರುವಲ್ಲಿ ಈ ಗ್ರಂಥದಲ್ಲಿ ಮಾತ್ರ ವಿನಾಯಕ, ಸರಸ್ವತಿ, ಮಹೇಶ್ವರಿ, ಸದಾಶಿವ –ಎಂಬ ಹೆಸರಿನಿಂದ ಇಷ್ಟದೇವತಾಸ್ಮರಣೆಯನ್ನು ಮಾಡಿದೆ ; ಉಪಸಂಹಾರದಲ್ಲಿ ತಮ್ಮ ಗುರುಗಳಾದ ಶಂಕರಭಗವತ್ಪಾದರ ಹೆಸರನ್ನು ಆ ಗ್ರಂಥಗಳಲ್ಲಿ ಉಲ್ಲೇಖಿಸಿರುವಂತೆ ಇಲ್ಲಿ ಉಲ್ಲೇಖಿಸಿಲ್ಲ. ದಕ್ಷಿಣಾಮೂರ್ತಿ ಸ್ತೋತ್ರದ ಕರ್ತೃಗಳನ್ನು ಸಾಮಾನ್ಯವಾಗಿ 'ಗುರು' (೧–೭) 'ಕವಿ' (೧–೨) ಎಂದು ಕರೆದೇ ಪರಾಮರ್ಶಿಸಿದೆ.

(b) ಮೇಲೆ ಹೇಳಿದ ಮೂರು ಗ್ರಂಥಗಳಲ್ಲಿಯೂ ಅದ್ವೈತಸಿದ್ಧಾಂತ ವನ್ನವಲಂಬಿಸಿರುವ ಬೇರೆಯ ಪ್ರಸ್ಥಾನಗಳನ್ನು ಖಂಡಿಸುವದು, ಶಾಂಕರಸಾಂಪ್ರ ದಾಯವನ್ನು ಎತ್ತಿಹಿಡಿಯುವದು– ಈ ಕ್ರಮವನ್ನೇ ಅನುಸರಿಸಿರುವಲ್ಲಿ ಈ ಗ್ರಂಥ ದಲ್ಲಿ ಮಾತ್ರ ಷಟ್ತ್ರಿಂಶತ್ತತ್ತ್ವಗಳನ್ನೊಪ್ಪುವ ಶೈವರ ಮತಕ್ಕೇ (೯–೨) ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟಿದೆ.

ಆದ್ದರಿಂದ ಮಾನಸೋಲ್ಲಾಸಕಾರರು ವಾರ್ತಿಕಕಾರರಾದ ಸುರೇಶ್ವರಾಚಾರ್ಯ ರಾಗಿರಲಾರರೆಂಬುದು ಸ್ಥೂಲದೃಷ್ಟಿಯಿಂದ ನೋಡಿದಾಗಲೂ ಹೊಳೆಯುತ್ತದೆ.

## ಸ್ತೋತ್ರಕ್ಕೂ ವ್ಯಾಖ್ಯಾನಕ್ಕೂ ಸಂಬಂಧ

೩. ಗ್ರಂಥಕಾರರು ಪರಮಾತ್ಮನನ್ನು ದಕ್ಷಿಣಾಮೂರ್ತಿಯೆಂದು ಕರೆದಿರು ತ್ತಾರೆ ; ಪರಮಾತ್ಮನಿಗಿಂತ ವ್ಯತಿರಿಕ್ತವಾದ ಯಾವದೊಂದು ವಸ್ತುವೂ ಇಲ್ಲವೆಂದು

ಹೇಳುವ ಸಂದರ್ಭದಲ್ಲಿ ಭಗವಂತನ ಅಷ್ಟಮೂರ್ತಿಗಳನ್ನು (ಸ್ತೋತ್ರ ೯) ಉಲ್ಲೇಖಿಸಿರುತ್ತಾರೆ. ಈ ಎರಡು ಕಾರಣಗಳಿಂದ ಅವರಿಗೆ ಶಿವನೇ ಇಷ್ಟದೇವತೆಯಾಗಿರಬೇಕೆಂದೇ ಕಲ್ಪಿಸಬಹುದಾದರೂ ಮಿಕ್ಕ ಕಡೆಗಳಲ್ಲಿ ಎಲ್ಲಿಯೂ ಅವರು ವೇದಾಂತಸಿದ್ಧಾಂತವನ್ನು ಬಿಟ್ಟು ಶೈವಾಗಮದ ಕಡೆಗೆ ಹೆಚ್ಚಿನ ಒಲವನ್ನು ಪ್ರಕಟಿಸಿರುವದಿಲ್ಲ. ವ್ಯಾಖ್ಯಾನಕಾರರು ಮಾತ್ರ ಮೂಲದಲ್ಲಿ ಸೂಚಿಸದೆಇರುವ ಎಷ್ಟೋ ವಿಷಯಗಳನ್ನು ಶ್ಲೋಕಾರ್ಥವಿವರಣೆಗೆ ಸೇರಿಸುವದು, ಮತ್ತು ಅಲ್ಲಿ ಸುಪ್ರಸಿದ್ಧ ಶಾಂಕರಸಂಪ್ರದಾಯದ ಪ್ರಕ್ರಿಯೆಗಳನ್ನು ಬಿಟ್ಟು ತಮ್ಮದೇ ಆದ ಪ್ರಕಾರಗಳನ್ನು ಅನುಸರಿಸುವದು- ಹೀಗೆ ಮಾಡುತ್ತಾಹೋಗಿರುತ್ತಾರೆ. ಇಂಥ ಕಡೆಗಳಲ್ಲೆಲ್ಲ ಗ್ರಂಥಶರೀರದಲ್ಲಿಯೂ ನಾವು ಮೂಲಕ್ಕೂ ಶಾಂಕರಪ್ರಕ್ರಿಯೆಗೂ ಭಿನ್ನವಾಗಿ ಮಾನಸೋಲ್ಲಾಸಕಾರರು ಯಾವಯಾವ ವಿಲಕ್ಷಣಪ್ರಕ್ರಿಯೆಗಳನ್ನು ಸೇರಿಸಿರುತ್ತಾರೆಂಬುದನ್ನು ತೋರಿಸಿಕೊಂಡೇಹೋಗಿರುತ್ತೇವಾದರೂ ಮುಖ್ಯವಾದ ಇಂಥ ಸ್ಥಲಗಳನ್ನು ಇಲ್ಲಿಯೂ ಸಂಗ್ರಹಿಸಿಡುವದು ಗ್ರಂಥಕರ್ತೃಗಳನ್ನು ಗುರುತಿಸುವದಕ್ಕೆ ಸಹಾಯಕವಾಗಬಹುದೆಂಬ ಕಾರಣದಿಂದ ಆ ಕೆಲಸಕ್ಕೆ ಕೈಹಾಕಿರುತ್ತೇವೆ.

## ೧. ಸರ್ವಾತ್ಮತ್ವ

ಶಾಂಕರಸಿದ್ಧಾಂತದಲ್ಲಿ 'ಸರ್ವಾತ್ಮತ್ವ'ವೆಂಬ ಶಬ್ದವನ್ನು (1) ಎಲ್ಲಕ್ಕೂ-ಪ್ರತಿಯೊಬ್ಬ ಜೀವನಿಗೂ- ಆತ್ಮ, (2) ಎಲ್ಲಾ ರೂಪದಿಂದ ತೋರಿಕೊಳ್ಳುವಿಕೆ- ಎಂಬ ಎರಡೂ ಅರ್ಥಗಳಲ್ಲಿ ಪ್ರಯೋಗಿಸಿರುತ್ತದೆ. ಸ್ತೋತ್ರದ ಪ್ರಾರಂಭದಲ್ಲಿ 'ಅದ್ವಯಾತ್ಮ' (ಶ್ಲೋಕ ೧), ಎಂಬಲ್ಲಿಯೂ ಕೊನೆಯಲ್ಲಿ (ಶ್ಲೋಕ ೯) **'ನಾನ್ಯತ್ಕಿಂಚನ ವಿದ್ಯತೇ'** (ಮತ್ತೇನೂ ಇರುವದೇಇಲ್ಲ)- ಎಂಬ ಮಾತುಗಳಿಂದಲೂ ಎಲ್ಲದರ ಆತ್ಮನೆಂಬ ಅರ್ಥಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟು, **'ಸರ್ವಾತ್ಮತ್ವಮಿತಿ ಸ್ಫುಟೀಕೃತಮ್'** (ಶ್ಲೋಕ ೧೦) ಸರ್ವಾತ್ಮತ್ವವನ್ನು ಹೀಗೆ ಸ್ಫುಟಗೊಳಿಸಲಾಗಿದೆ- ಎಂದು ಅದ್ವೈತತತ್ತ್ವವನ್ನು ಪ್ರತಿಪಾದಿಸುವದಕ್ಕೇ ತಾವು ಪ್ರಯತ್ನಿಸಿರುತ್ತೇವೆಂಬುದನ್ನು ಸ್ತೋತ್ರಕಾರರು ಸೂಚಿಸಿರುತ್ತಾರೆ. ಆದರೆ ಮಾನಸೋಲ್ಲಾಸಕಾರರು ೯ನೆಯ ಶ್ಲೋಕದಲ್ಲಿ ಹೇಳಿರುವ ಅಷ್ಟಮೂರ್ತಿಗಳ ವಿವರಕ್ಕೆ ಪ್ರಾಶಸ್ತ್ಯವನ್ನು ಕೊಟ್ಟು ಷಟ್ತ್ರಿಂಶತ್ತತ್ತ್ವ(೩೬ ತತ್ತ್ವ)ಗಳನ್ನು ಒಪ್ಪಿರುವ ಮಾಹೇಶ್ವರಮತಕ್ಕೆ ಹೆಚ್ಚಿನ ಸ್ಥಾನವನ್ನು ಕಲ್ಪಿಸಿರುತ್ತಾರೆ. 'ಶೈವಾಗಮವಿಶಾರದೈಃ' (೨-೪೨), 'ಷಟ್ತ್ರಿಂಶತ್ತತ್ತ್ವಸಂಘಾತಃ ಸರ್ವತ್ರಾಪ್ಯನುವರ್ತತೇ' (೯-೪), 'ತೇಷ್ವಕ್ಷರೇಷು ತಿಷ್ಠನ್ತಿ ಷಟ್ತ್ರಿಂಶತ್ತತ್ತ್ವಸಂಯುತಾಃ' (೯-೬೫), 'ಬ್ರಹ್ಮಾಣ್ಡಾದಿಶಿವಾನ್ತಾ ಯಾಃ ಷಟ್ತ್ರಿಂಶತ್ತತ್ತ್ವಸಂಹತೀಃ' (೧೦-೧೦)- ಈ ಶ್ಲೋಕಗಳನ್ನು ನೋಡಿರಿ. ಇದಲ್ಲದೆ ಮೂರ್ತ್ಯಷ್ಟಕವನ್ನು ಹೇಳಿರುವದು 'ಸಾಧಕನು

ತನ್ನ ಶರೀರದಲ್ಲಿ ಮೊದಲು ಪರಮಾತ್ಮನನ್ನು ಭಾವನೆಮಾಡಬೇಕು ; ಈ ವ್ಯಷ್ಟ್ಯುಪಾಸನೆಯಿಂದ ಸಮಷ್ಟಿಪ್ರಾಪ್ತಿಯಾಗುತ್ತದೆ' (೯–೬)– ಎಂಬ ಕಾರಣದಿಂದ ಈ ಭಾಗವನ್ನೆಲ್ಲ **ಉಪಾಸನಾಪರವೆಂದೇ ಅಭಿಪ್ರಾಯಪಟ್ಟಿರುತ್ತಾರೆ.** ಇದಕ್ಕೆ **ಅಷ್ಟಾಂಗಯೋಗ**ವನ್ನು ಗಂಟುಹಾಕಿರುತ್ತಾರೆ (೯–೨೦). ಒಂಬತ್ತು, ಹತ್ತು– ಈ ಉಲ್ಲಾಸಗಳಲ್ಲಿ ಯೋಗಸಾಧನಗಳ (೯–೩೧ರಿಂದ ೪೨) ಮತ್ತು **ಪೂರ್ಣಾಹಂಭಾವಪ್ರಾಪ್ತಿ**ಯಿಂದಾದ (೧೦–೮ರಿಂದ ೧೭) **ಸಿದ್ಧಿ**ಗಳನ್ನು ವಿಸ್ತಾರವಾಗಿ ಬರೆದಿರುತ್ತಾರೆ. ಇದೆಲ್ಲ ಸ್ತೋತ್ರಕಾರರ ಹೃದಯದಲ್ಲಿತ್ತೆ ?– ಎಂಬುದು ವಿಚಾರಣೀಯವಾಗಿದೆ.

ಸರ್ವಾತ್ಮತ್ವವೆಂದರೆ ಅನವಚ್ಛಿನ್ನಪ್ರಕಾಶ (೧–೨೮), **ಅಣುವಿಗೂ ಅಣು**ವಾಗಿ, ಮಹತ್ತಿಗೂ ಮಹತ್ತಾಗಿರುವದು (೧–೨೯), ಏಕಪ್ರಕಾಶತ್ವ (೩–೩೪ರ್ತಿ), ಜೀವಪ್ರಕಾಶಾಭಿನ್ನತ್ವ (೩–೩೫ರ್ತಿ)– ಎಂದೂ ಬರೆದಿರುತ್ತಾರೆ. ಆದರೆ **ಸರ್ವಾತ್ಮತ್ವವು ಜ್ಞಾನದಿಂದ ಸಿದ್ಧವಾಗುವ ಮೊದಲು 'ಭಾವನೆ'ಯಿಂದ ಬರಬೇಕೆಂಬಕಡೆಗೇ ಇವರ ಒಲವು.** (೩–೩೬, ೩೭, ೩೮ ; ೯–೩, ೧೦–೨೦ ಇವನ್ನು ನೋಡಿ).

## ೨. ಮಾಯೆ

ಸ್ತೋತ್ರದಲ್ಲಿ **ಮಾಯಾಶಕ್ತಿ,** ಮಾಯೆಯಿಂದ ಆಗಿರುವ **ಭ್ರಾಂತಿ**– ಇವುಗಳನ್ನು ಮಾತ್ರ ಪರಾಮರ್ಶಿಸಿರುತ್ತದೆ (ಶ್ಲೋಕ ೫, ೮) ; ಅವರು **'ಅವಿದ್ಯೆ'** ಹೆಸರನ್ನು ಎಲ್ಲಿಯೂ ಎತ್ತಿಲ್ಲ ; ಅವಿದ್ಯೆಯ ಸ್ವರೂಪವನ್ನು ಗೊತ್ತುಪಡಿಸುವ ಗೋಜಿಗೂ ಹೋಗಿಲ್ಲ. ಆದರೆ ವ್ಯಾಖ್ಯಾನಕಾರರು ಮಾಯೆ, ಅವಿದ್ಯೆ– ಇವೆರಡನ್ನೂ ಒಪ್ಪುವ ಪೌರಾಣಿಕರ ಮತವನ್ನೇ ಒಪ್ಪಿ, ಅವರು ಹೇಳುವ ಮೂವತ್ತು ತತ್ತ್ವಗಳ ಜೊತೆಗೆ ಇನ್ನಾರು ತತ್ತ್ವಗಳನ್ನು ಸೇರಿಸಿರುವ ಶೈವಾಗಮದವರ (೨–೪೨) ವಾದವನ್ನು ಪ್ರಶಂಸಿಸಿರುವದರಿಂದ ಮಾಯೆ, ಅವಿದ್ಯೆ– ಎರಡನ್ನೂ ಬೇರೆಬೇರೆಯ ತತ್ತ್ವಗಳೆಂದು ಒಪ್ಪಿದಾರೆಂದು ಹೇಳಬೇಕಾಗಿದೆ. 'ಅವಿದ್ಯೆ' ಎಂಬ **ಎಂಬ ಹೆಸರಿನ ಮರೆಯು ಹೋದಾಗ** ಪರಮೇಶ್ವರನು ತಾನೇ ತೋರಿಕೊಳ್ಳುತ್ತಾನೆ (೪–೩೬,೩೭) ಎಂದು ಇವರು ಹೇಳಿರುವದರಿಂದ ವ್ಯಾಖ್ಯಾನಪ್ರಸ್ಥಾನದ 'ಅವಿದ್ಯಾಶಕ್ತಿ' (ಮೂಲಾವಿದ್ಯೆ ?)ಯನ್ನು ಒಪ್ಪಿದಾರೆನ್ನಬೇಕಾಗುತ್ತದೆ. ಆದರೆ ಅವಿದ್ಯೆಯ ಸ್ವರೂಪವನ್ನೇನೂ ಇವರು ಬಾಯಿಬಿಟ್ಟು ಹೇಳಿಲ್ಲ. ಶ್ರೀ ಶಂಕರಾಚಾರ್ಯರು ಸೂತ್ರಭಾಷ್ಯದಲ್ಲಿ ಪ್ರತಿಪಾದಿಸಿರುವ ಆತ್ಮಾನಾತ್ಮರ ಅಧ್ಯಾಸವನ್ನೇನೋ (೭–೨೧,೨೧ರ್ತಿ) ಪರಾಮರ್ಶಿಸಿರುತ್ತಾರೆ; ಆದರೆ ಆಚಾರ್ಯರಿಗೆ ಒಪ್ಪಾದ 'ಆ ಅಧ್ಯಾಸವೇ ಅವಿದ್ಯೆ' ಎಂಬ ವಾದವಾಗಲಿ, 'ಅವಿದ್ಯೆಯಿಂದ ಕಲ್ಪಿತವಾಗಿರುವ ನಾಮರೂಪಬೀಜವೇ ಮಾಯೆ' ಎಂಬ ವಾದವಾಗಲಿ ಸ್ತೋತ್ರದಲ್ಲಿಯೂ ಇಲ್ಲ ; ಮಾನಸೋಲ್ಲಾಸದಲ್ಲಿಯೂ ಇಲ್ಲ.

**ಮಾಯೆಯ ವಿಷಯಕ್ಕೆ ವಿವಿಧಕಲ್ಪನೆಗಳು** ಮಾನಸೋಲ್ಲಾಸದಲ್ಲಿ ಕಾಣಬರುತ್ತವೆ: (೧) ಇಚ್ಛಾಜ್ಞಾನಕ್ರಿಯಾರೂಪವಾಗಿದೆ, ಮಾಯೆ (೨-೪೪), ಕ್ರಿಯಾಶಕ್ತಿಯು ಕಾಲರೂಪವಾಗಿದೆ (೨-೧೩), ಜ್ಞಾನಶಕ್ತಿಯಿಂದ ಜಗತ್ತು ಜ್ಞಾತೃಜ್ಞಾನಜ್ಞೇಯರೂಪವಾಗಿದೆ (೨-೧೪), ಅಂತಃಕರಣಭಾಗಗಳಾದ ಕ್ರಿಯಾ ಶಕ್ತಿಜ್ಞಾನಶಕ್ತಿಗಳಲ್ಲಿ ಪ್ರತಿಬಿಂಬದಲ್ಲಿ ತೋರಿಕೊಳ್ಳುವ ಈಶ್ವರನನ್ನು ಕರ್ತೃ, ಜ್ಞಾತೃ-ಎನ್ನುತ್ತಾರೆ (೪-೭, ೭೧ತ್ತ)- ಸುಷುಪ್ತಿಯಲ್ಲಿ ಮಾಯೆಯಿಂದ ಮುಸುಕ ಲ್ಪಟ್ಟಿರುವದರಿಂದ ಜೀವನು ಸನ್ಮಾತ್ರನಾಗಿರುತ್ತಾನೆ. ಈಶ್ವರನು ಮಾಯೆಯಲ್ಲಿ ಪ್ರವಿಷ್ಟನಾಗಿರುವದರಿಂದ ಮೂಢನು, ಮತ್ತನು, ಅಜ್ಞನು- ಎಂದಿಂತು ತೋರಿ ಕೊಳ್ಳುತ್ತಾನೆ (೪-೩೬), ಬೇರೆಯ ದರ್ಶನವನ್ನವಲಂಬಿಸಿರುವ ವಾದಿಗಳು ಮಾಯಾ ವ್ಯಾಮೋಹದಿಂದ ಮರುಳಾದ ಚಿತ್ತದವರು (೫-೮ತ್ತ, ೩೩). ಮಾಯೆಯು ಈಶ್ವರ ಸಾಕ್ಷಾತ್ಕಾರದಿಂದ ಕೂಡಲೆ ಲಯವಾಗುವದು (೫-೩೩ತ್ತ). ಆದ್ದರಿಂದ ಮಹೇ ಶ್ವರನ ಈ ಮಾಯಾಶಕ್ತಿಗೆ 'ಮೋಹಿನಿ' ಎಂದು ಹೆಸರು (೬-೨೪). ಮಾಯೆ, ವಿದ್ಯೆ- ಇವು ಸೂರ್ಯನ ನೆರಳು, ಪ್ರಭೆ- ಇವುಗಳಂತಿರುವ ಈಶ್ವರನ ಶಕ್ತಿಗಳು (೬-೧೫) ; ಇವುಗಳೊಳಗೆ ಮಾಯೆಯು ಎಲ್ಲರನ್ನೂ ಮುಸುಕಿಕೊಂಡಿರುವದು, ವಿದ್ಯೆಯು ಅದನ್ನು ಹಾರಿಸಿ ನಿಜವನ್ನು ತೋರಿಸಿಕೊಡುವದು (೬-೧೫ತ್ತ, ೧೭). ಪರಮಾರ್ಥವನ್ನು ಚೆನ್ನಾಗಿ ನೋಡಿದರೆ ಪ್ರಕಾಶವೊಂದೇ ಇದೆ, ಭೇದಪ್ರತೀತಿಯು ಮಾಯೆಯಿಂದ ಆತ್ಮನಲ್ಲಿ ಕಲ್ಪಿತವಾಗಿದೆ (೮-೯). ವ್ಯವಹಾರವೆಲ್ಲವೂ ಮಾಯೆಯ ಹಬ್ಬಿಕೆಯೇ (೮-೧೨). ಯುಕ್ತಿಹೀನಪ್ರಕಾಶವೇ ಮಾಯೆ, ಇದು ಸತ್ತಲ್ಲ, ಅಸತ್ತಲ್ಲ, ಚೈತನ್ಯಪ್ರಕಾಶಕ್ಕಿಂತ ಭಿನ್ನವಲ್ಲ, ಅಭಿನ್ನವಲ್ಲ, ಉಭಯರೂಪವೂ ಅಲ್ಲ ; ಸಾವಯವವಲ್ಲ, ನಿರವಯವವೂ ಅಲ್ಲ, ಅವಿಚಾರಸಿದ್ಧ. ಇದು ಜೀವನನ್ನು ಮರುಳುಗೊಳಿಸುತ್ತಿರುವದು (೮-೧೩ರಿಂದ ೧೭) ; ಜೀವನು ಮಾಯೆಯಿಂದ ವಿಶ್ವವು ನಾನಾಕಾರವಾಗಿರುವಂತೆಯೂ ಮಾರ್ಪಡುತ್ತಿರುವಂತೆಯೂ ಭಾವಿಸಿ ಭ್ರಾಂತನಾಗಿದಾನೆ (೮-೨೪).

ಮಾಯೆಯ ವಿಷಯಕ್ಕೆ ಮಾನಸೋಲ್ಲಾಸಕಾರರ ಮತ್ತೊಂದು ಅಭಿ ಪ್ರಾಯವು ಕುತೂಹಲಜನಕವಾಗಿರುತ್ತದೆ. ನಿರ್ವಿಕಲ್ಪಕವಾದ ಜಗತ್ತನ್ನು ಈಶ್ವರನು ಸ್ವೇಚ್ಛೆಯಿಂದ ಹೊರಹೊಮ್ಮಿಸುತ್ತಾನೆಂಬ ಅರ್ಥದ ಎರಡನೆಯ ಶ್ಲೋಕದ ಅಭಿಪ್ರಾಯವನ್ನು ವಿವರಿಸುವಾಗ ವಿವಿಧವಾದಿಗಳ ಮತಗಳೊಳಗೆ ಸಾಂಖ್ಯರ ಮತವನ್ನೂ (೨-೩೧ರಿಂದ ೪೦ತ್ತವರೆಗಿನ ಶ್ಲೋಕಗಳಲ್ಲಿ) ವಿವರಿಸಿದೆ. ಅಲ್ಲಿ 'ಮಾಯಾ ಪ್ರಧಾನಮವ್ಯಕ್ತಮವಿದ್ಯಾಜ್ಞಾನಮಕ್ಷರಮ್ । ಅವ್ಯಾಕೃತಂ ಚ ಪ್ರಕೃತಿಸ್ತಮ ಇತ್ಯಭಿಧೀಯತೇ ॥' (೨-೩೧) ಎಂಬ ಶ್ಲೋಕವಿದೆ. ಅವಿವೇ ಕವೇ ಬಂಧಕ್ಕೆ ಹೇತುವೆನ್ನುತ್ತಿದ್ದ ಸಾಂಖ್ಯರು ಮಾಯೆಯನ್ನೂ ಅವಿದ್ಯೆಯನ್ನೂ

ಒದೆಂದುಹೇಳುತ್ತಾರೆಯೆ ?– ಎಂಬುದೇ ವಿಚಾರಣೀಯವಾಗಿದೆ. ಈ ಮತವು ಅನುಶಾಂಕರವ್ಯಾಖ್ಯಾನಪ್ರಸ್ಥಾನದವರ ಮತವೆಂಬುದು ಸ್ಪಷ್ಟ. ಆದರೆ ಇದಕ್ಕಿಂತ ವಿಚಿತ್ರವಾಗಿ ತೋರುವದೇನೆಂದರೆ : 'ಮಾಯಾಯಾಂ ಬ್ರಹ್ಮಚೈತನ್ಯಪ್ರತಿಬಿಮ್ಬಾನುಷಙ್ಗತಃ । ಮಹತ್ಕಾಲಪುಮಾಂಸಃ ಸ್ಯುಃ ॥' (೨–೩೨) ಎಂಬ ವಾಕ್ಯ. ನಿರೀಶ್ವರವಾದಿಗಳಾದ ಸಾಂಖ್ಯರಿಗೆ ಮಾಯೆಯಲ್ಲಿ ಬ್ರಹ್ಮದ ಪ್ರತಿಬಿಂಬವುಂಟಾಗುವದೆಂದೂ ಮಾಯೆಗೂ ಆ ಪ್ರತಿಬಿಂಬಕ್ಕೂ ಆದ ಸಂಬಂಧದಿಂದ (?) ಮಹತ್ತು, ಕಾಲ, ಪುರುಷರು ಉಂಟಾಗುವರೆಂದೂ ಹೇಳುವ ವ್ಯಾಹತಾಭಿಪ್ರಾಯವು ಹೇಗೆ ಗಂಟ್ಟುಬಿದ್ದಿತು ? ಈ ಕಗ್ಗಂಟನ್ನು ಬಿಡಿಸುವದು ನಮ್ಮಿಂದಾಗುವಂತಿಲ್ಲ. ಇಲ್ಲಿ (೨–೪೦) ಸಾಂಖ್ಯರ ಇಪ್ಪತ್ತನಾಲ್ಕು ತತ್ತ್ವಗಳ ವಿವರವೂ ಸಾಂಖ್ಯಮತಾದಿಗಳಲ್ಲಿರುವ ವಿವರಕ್ಕಿಂತ ವಿಲಕ್ಷಣವಾಗಿದೆ.

## ೩. ಜೀವನೂ ಈಶ್ವರನೂ

'ಈಶ್ವರತ್ವವೂ ಜೀವತ್ವವೂ ಸರ್ವಾತ್ಮತ್ವವೂ ಎಂಥದ್ದು ? ಅದನ್ನು ಜೀವನು ಹೇಗೆ ತಿಳಿದುಕೊಳ್ಳುವನು ?' ಎಂಬ ಪ್ರಶ್ನೆಯನ್ನು ಜಿಜ್ಞಾಸುವಾದ ಶಿಷ್ಯನ ಮುಖದಿಂದ ಮಾನಸೋಲ್ಲಾಸಕಾರರು ಹೊರಡಿಸಿರುತ್ತಾರೆ. ಮುಂದೆ 'ಸರ್ವಜ್ಞಃ ಸರ್ವಕರ್ತಾ ಚ ಕಥಮಾತ್ಮಾ ಭವಿಷ್ಯತಿ ? (೧–೭) (ಜೀವಾತ್ಮನು ಸರ್ವಜ್ಞನೂ ಸರ್ವಕರ್ತನೂ ಆದ ಈಶ್ವರನು ಹೇಗಾದಾನು ?) ಎಂಬ ಪ್ರಶ್ನೆಯನ್ನು ಹೊರಡಿಸಿರುತ್ತಾರೆ. ಇದಕ್ಕೆ ಉತ್ತರವಾಗಿ ಬರೆದಿರುವ ವಾಕ್ಯಗಳಲ್ಲಿ ಪರಮಾತ್ಮನ ಒಳಗೇ ಇದ್ದುಕೊಂಡಿರುವ ಜಗತ್ತು ಹೊರಗೆ ಇರುವಂತೆಯೂ ಕನಸಿನಲ್ಲಿ ತನ್ನೊಳಗಿದ್ದ ಪ್ರಪಂಚವು ಹೊರಗೆ ತೋರುವಂತೆಯೂ ಮಾಯೆಯಿಂದ ತೋರುತ್ತಿರುವದು (೨–೪೩, ೪೪) ಎಂಬ ವಾಕ್ಯವಿದೆ. ಅವಿದ್ಯೆಯಿಂದ ಕಲ್ಪಿತವಾಗಿರುವ ನಾಮರೂಪಬೀಜವು ಜಗತ್ತಾಗಿರುತ್ತದೆ– ಎಂಬ ಶಾಂಕರಪ್ರಕ್ರಿಯೆ ಇಲ್ಲಿಲ್ಲ. ಈ ಮಾಯೆ ಹೋಗುವದು ಹೇಗೆ ?–ಎಂಬ ಪ್ರಶ್ನೆಗೆ 'ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ । ಅಜಮನಿದ್ರಮಸ್ವಪ್ನಮದ್ವೈತಂ ಬುಧ್ಯತೇ ತದಾ ॥' ಎಂಬ (ಗೌ. ಕಾ. ೧–೧೬) ಕಾರಿಕೆಯನ್ನು ಉದಾಹರಿಸಿದೆ. ಆದರೆ ಶ್ರೀಗೌಡಪಾದರ ಮತದಲ್ಲಿರುವಂತೆ ಇಲ್ಲಿ ಜ್ಞಾನದಿಂದ ಅಜ್ಞಾನದ ನಿದ್ರೆಯೂ ಕನಸೂ ಹೋಗುವವೆಂಬ ಪ್ರಕ್ರಿಯೆಯನ್ನೇನೂ ಬೆಳೆಯಿಸಿಲ್ಲ.

ಈಶ್ವರನು ಸರ್ವಜ್ಞನು, ಸರ್ವಶಕ್ತನು– ಎಂಬುದು ಸೂತ್ರಭಾಷ್ಯದಲ್ಲಿರುವ ವಾದ. ಆದರೆ ಇಲ್ಲಿ ಈಶ್ವರನು 'ಸರ್ವಕರ್ತನು' ಎಂಬ ವಿಶೇಷಣವೇನೂ ಕಂಡುಬರುವದಿಲ್ಲ. ಇಲ್ಲಿಮಾತ್ರ ಈಶ್ವರನ ಜ್ಞಾನಕ್ರಿಯೆಗಳು ಸರ್ವಜೀವರಲ್ಲಿಯೂ ಬಂದುಸೇರಿಕೊಂಡಿರುವುದರಿಂದ ಆವನೂ ಈಶ್ವರನೇ (೨–೨೧) ಎಂದು ವಾದಿಸಿದೆ.

ಕ್ರಿಯಾಶಕ್ತಿಯ ವಿವರಣೆಯನ್ನು ಪರಿಸ್ಪಂದ, ಪರಿಣಾಮ ಎಂಬ ರೂಪವುಳ್ಳದ್ದೆಂದೂ ಪ್ರತಿಪಾದಿಸಿದೆ (೧-೩೩, ೨೪, ೨೫). 'ಈಶ್ವರನು ಸ್ವತಂತ್ರೇಚ್ಛನು' ಎಂಬುದನ್ನು ತಿಳಿಯಿಸುವದಕ್ಕಾಗಿ ಅತನ ಇಚ್ಛಾಶಕ್ತಿಯನ್ನು ವಿವರಿಸಿದೆ. (೨-೫೦, ೫೧, ೫೨) ಆದರೆ ಮುಂದೆ (೨-೫೬ರಲ್ಲಿ) ಈ ಜಗತ್ಕಾರಣತ್ವವು ಮಾಯಾವಿಲಾಸವೇ, ಬಂಧಮೋಕ್ಷವು ಮಾಯಾವಿಲಾಸ- ಎಂದಿದೆ. 'ಅಹಮಿತ್ಯೈಶ್ವರಂ ಭಾವಂ ಯದಾ ಜೀವಃ ಪ್ರಬುಧ್ಯತೇ | ಸರ್ವಜ್ಞಃ ಸರ್ವಕರ್ತಾ ಚ ತದಾ ಜೀವೋ ಭವಿಷ್ಯತಿ ||' (೪-೩೫) ನಾನೇ ಈಶ್ವರನೆಂದು ಯಾವಾಗ ಜೀವನು ಅರಿತುಕೊಳ್ಳುವನೋ ಆಗ ಸರ್ವಜ್ಞನೂ ಸರ್ವಕರ್ತನೂ ಆಗುವನು- ಎಂದು ಪ್ರಶ್ನೆಗೆ ಉತ್ತರವನ್ನು ಹೇಳಿದೆ. ಸರ್ವಜ್ಞತ್ವಸರ್ವಶಕ್ತಿತ್ವಾದಿಗಳು ಪರಮಾರ್ಥದೃಷ್ಟಿಯಿಂದ ಹೊಂದುವದೇಇಲ್ಲ (ಸೂ. ಭಾ. ೨-೧-೧೪) ಎಂಬ ಶಾಂಕರಪ್ರಸ್ಥಾನದ ಗಂಧವೂ ಇಲ್ಲಿಲ್ಲ.

## ೪. 'ತತ್ತ್ವಮಸಿ' ವಾಕ್ಯ

'ಸದ್ರೂಪವಾದ ಯಾವದರ ಸ್ಫುರಣವೇ ಅಸತ್ಕಲ್ಪವಾದ ಅನಾತ್ಮಪದಾರ್ಥದಲ್ಲಿ ತೋರುವದೋ ಸಾಕ್ಷಾತ್ತಾಗಿ ಅದೇ ನೀನು' ಎಂದು ಪರಮೇಶ್ವರನು ಭಕ್ತರಿಗೆ ಉಪದೇಶಿಸುತ್ತಾನೆ- ಎಂಬರ್ಥದ ಮೂರನೆಯ ಶ್ಲೋಕದ ಆಶಯವನ್ನು ವಿವರಿಸುವದಕ್ಕೆ ಹೊರಟ ಮಾನಸೋಲ್ಲಾಸಕಾರರು ಇರವು, ಅರಿವಿನ ಬೆಳಕು- ಇವೆರಡೂ ನಿತ್ಯೇಶ್ವರನಿಂದಲೇ ಬಾಹ್ಯವಸ್ತುಗಳಲ್ಲಿ ಬಂದು ಸೇರಿಕೊಂಡು ತೋರುತ್ತಿವೆ ಎಂದು ಹೇಳುವಾಗ ಛಾಂದೋಗ್ಯದಲ್ಲಿ ಒಂಬತ್ತು ಸಲ ಬಂದಿರುವ 'ತತ್ತ್ವಮಸಿ' (ಆ ಸದ್ಬ್ರಹ್ಮವೇ ನೀನು) ಎಂಬ ವಾಕ್ಯದ ಅಭಿಪ್ರಾಯವನ್ನು ವಿವರಿಸಿದ್ದಾರೆ. ಅಲ್ಲಿ ಯಾವಯಾವ ಅರ್ಥವನ್ನು ವಾಕ್ಯಕ್ಕೆ ಮಾಡಿಕೊಳ್ಳಬಾರದು ?- ಎಂಬುದನ್ನು ವಿಸ್ತಾರವಾಗಿ ಹೇಳುವಾಗ ತತ್ಪದದ ಅರ್ಥವನ್ನೂ ತ್ವಂಪದದ ಅರ್ಥವನ್ನೂ 'ಸೋಽಯಂ ಪುರುಷಃ' (ಆ ಮನುಷ್ಯನೇ ಇವನು) ಎಂಬ ವಾಕ್ಯದಂತೆ ಅರಿಯಬೇಕೆಂದು ಪಂಚಪಾದಿಕಾಕಾರರೇ ಮೊದಲಾದ ವ್ಯಾಖ್ಯಾನಕಾರರ ಜಾಡನ್ನು ಅವಲಂಬಿಸಿ ಹೇಳಿರುತ್ತಾರೆ. ಸುರೇಶ್ವರರು ವಾರ್ತಿಕದಲ್ಲಿ ಹೇಳಿರುವಂತೆ ಪದಾರ್ಥಗಳಿಗೆ ಬಾಧಸಾಮಾನಾಧಿಕರಣ್ಯವನ್ನು ಅಂಗೀಕರಿಸಿಲ್ಲ ; ಜಹಲ್ಲಕ್ಷಣೆ ಮುಂತಾದವುಗಳನ್ನು ಬಿಟ್ಟು ಭಾಗತ್ಯಾಗಲಕ್ಷಣೆಯನ್ನು ಒಪ್ಪಿದೆ. (೩-೧೦ರಿಂದ ೨೦ರ) ಈ ಪ್ರಕರಣಭಾಗದಲ್ಲಿ (ಶ್ಲೋಕ ೩-೨೧ರಿಂದ ೨೪ರವರೆಗೆ) ಅನೇಕ ತಪ್ಪುಅರ್ಥಗಳನ್ನು ತಳ್ಳಿಹಾಕುವಾಗ ಈ ವಾಕ್ಯವು 'ಉಪಾಸನಾಪರವಲ್ಲ' (೩-೨೩ರ) ಎಂದು ಹೇಳಿದ್ದರೂ ಮುಂದೆ ಇದಕ್ಕೆ ವಿರುದ್ಧವಾಗಿ ಗ್ರಂಥಕರ್ತರೇ ಬರೆದಿರುತ್ತಾರೆ! (೯ನೆಯ ಶ್ಲೋಕದ ವಿವರಣೆಯನ್ನು ನೋಡಿ). ಮುಂದೆ ಪಂಚಕೋಶವಿವೇಕವನ್ನು ವಿವರಿಸಿದೆಯಾದರೂ ಅಲ್ಲಿ ಕೋಶಗಳಲ್ಲಿ ಆತ್ಮತ್ವವನ್ನು ಅಧ್ಯಾರೋಪಮಾಡಿದಬಳಿಕ

ಅವನ್ನು ಅಪವಾದಮಾಡಿದೆ (ಅಲ್ಲಗಳೆದಿದೆ) ಎಂಬ ಭಾಷ್ಯಕಾರರ ಪ್ರಕ್ರಿಯೆಯನ್ನಾಗಲಿ 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' (ಬ್ರಹ್ಮವೇ ಆನಂದಮಯನಿಗೆ ಪುಚ್ಛವಾಗಿದೆ, ಆಧಾರವು) ಎಂಬ ಪ್ರಕ್ರಿಯೆಯಾಗಲಿ ಇಲ್ಲಿ ಬಂದಿಲ್ಲ. ಈ ಎರಡು ಜ್ಞಾನಪರ ವಾಕ್ಯಗಳಲ್ಲಿಯೂ ವೇದಾಂತವಾಕ್ಯವು ವಸ್ತುಜ್ಞಾನಪರವೇ ಎಂದು ಒಮ್ಮತದಿಂದ ಪ್ರತಿಪಾದಿಸಿರುವ ಭಾಷ್ಯಕಾರವಾರ್ತಿಕಕಾರರ ಮತವು ಉಪಾಸನಾಪರವೆಂದು ರೂಪಾಂತರವಾಗಿರುವದು ಆಶ್ಚರ್ಯಕರವಲ್ಲವೆ?

## ೫. ಅಹಮರ್ಥ

ಅಹಮರ್ಥವು 'ನಿರ್ವಿಕಲ್ಪಕ', 'ಶುದ್ಧ', 'ಮಲಿನ'- ಎಂದು ಮೂರು ವಿಧವೆಂದು ವಿಂಗಡಿಸಿ (೪-೩೦ರಿಂದ ೩೩ರ್ವರೆಗೆ) ಪರಬ್ರಹ್ಮವೇ ನಿರ್ವಿಕಲ್ಪಕವೆಂದು ಹೇಳಿರುವದೂ ಜೀವನು ಈಶ್ವರನೇ ತಾನೆಂದು ಅರಿತುಕೊಂಡಾಗ ಸರ್ವಜ್ಞನೂ ಸರ್ವಕರ್ತೃವೂ ಆಗುವನು (೪-೩೪, ೩೫) ಎಂದು ಹೇಳಿರುವದೂ ಈ ಗ್ರಂಥಕ್ಕೆ ವಿಶೇಷವು. ಅನಾದಿಮಾಯೆಯಿಂದ ನಿದ್ರಿಸುತ್ತಿರುವ ಜೀವನು ಎಚ್ಚತ್ತಾಗ ಅಜವೂ ಅನಿದ್ರವೂ ಅಸ್ವಪ್ನವೂ ಆದ ಅದ್ವೈತತತ್ತ್ವವನ್ನು ಅರಿತುಕೊಳ್ಳುವನು (ಗೌ. ಕಾ. ೧-೧೬) ಎಂಬ ಗೌಡಪಾದಕಾರಿಕೆಯನ್ನು ಉದಾಹರಿಸಿಕೊಂಡು[1] ಶ್ರುತ್ಯಾಚಾರ್ಯರ ಪ್ರಸಾದದಿಂದಲೂ 'ಯೋಗಾಭ್ಯಾಸವಶ'ದಿಂದಲೂ ಈಶ್ವರಾನುಗ್ರಹದಿಂದಲೂ ಆತ್ಮಜ್ಞಾನವು ಉಂಟಾದಾಗ ಉಂಡನ್ನವು ಹೊಟ್ಟೆಯಲ್ಲಿರುವಾಗ ಜನರು ಅದೇ ತಾವೆಂದು ಭಾವಿಸುವಂತೆ, ಯೋಗೀಶ್ವರನಾದವನೂ 'ಪೂರ್ಣಾಹಂತೆ'ಯಿಂದ ನುಂಗಿದ ವಿಶ್ವವನ್ನು ಹಾಗೆಯೇ ಕಂಡುಕೊಳ್ಳುವನು (೧-೧೪,೧೫) ಎಂದು ಅದಕ್ಕೆ ವಿವರವನ್ನು ಬರೆದಿರುವದೂ ಒಂದು ಅಸಾಧಾರಣವಾದವನ್ನು ಅಂಗೀಕರಿಸಿದಂತೆ ಆಗಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ ಬ್ರಹ್ಮವು ತನ್ನನ್ನೇ ಅರಿತುಕೊಂಡಾಗ ಸರ್ವವೂ ಆಯಿತು (ಬೃ. ೧-೪-೧೦) ಎಂದಿರುವದರ ಸೂಚನೆಯಿದೆಂಬುದು ಸ್ಪಷ್ಟ. ಆದರೆ ಸರ್ವಾತ್ಮತ್ವವು 'ಪೂರ್ಣಾಹಂತೆ' ಎಂದು ಕಲ್ಪಿಸಿರುವದು ಈ ಪ್ರಕರಣದಲ್ಲಿ ವಿಶೇಷ.

## ೬. ಪ್ರಮಾಣಗಳು

ವಾದಿಗಳು ತಮ್ಮತಮ್ಮ ಸಿದ್ಧಾಂತಕ್ಕೆ ಅನುಗುಣವಾಗಿ ಪ್ರಮಾಣಸಂಖ್ಯೆಯನ್ನು ಒಪ್ಪಿರುತ್ತಾರೆಂದು ಇಲ್ಲಿ (೨-೧೭, ೧೮, ೧೯) ಹೇಳುವ ಪ್ರಸಕ್ತಿಯಿಂದ ಭಾಟ್ಟರಂತೆ ವೇದಾಂತಿಗಳು 'ಆರು ಪ್ರಮಾಣ'ಗಳನ್ನು ಒಪ್ಪಿರುತ್ತಾರೆಂದು ಹೇಳಿದೆ. ವ್ಯವಹಾರದೃಷ್ಟಿಯಿಂದ ವಿಚಾರಮಾಡುವಾಗ ಇದು ತಪ್ಪೇನಲ್ಲವಾದರೂ ಅಧ್ಯಾಸ

---

1. ಈ ಕಾರಿಕೆಗೆ 'ಅಜಮನಿದ್ರಮಸ್ವಪ್ನಮ್' ಎಂಬ ಪಾಠಾಂತರವನ್ನೂ ಇಲ್ಲಿ ಕಲ್ಪಿಸಿಕೊಂಡಿದೆ.

ರೂಪಾವಿದ್ಯೆಯ ಕ್ಷೇತ್ರದಲ್ಲಿ ಮಾತ್ರವೇ ಪ್ರಮಾಣಪ್ರಮೇಯಾದಿಸರ್ವವ್ಯವಹಾರಗಳೂ ವೇದಾಂತದಲ್ಲಿ ಅಂಗೀಕೃತವಾಗಿವೆ, ಪರಮಾರ್ಥದೃಷ್ಟಿಯಿಂದ ಯಾವ ವ್ಯವಹಾರವೂ ಇಲ್ಲ- ಎಂಬ ಭಾಷ್ಯಕಾರರ ಸಿದ್ಧಾಂತವು ಇಲ್ಲಿಲ್ಲ. 'ಇಚ್ಛಾಜ್ಞಾನಕ್ರಿಯಾರೂಪಮಾಯೆಯಿಂದ' (೨-೪೪) ಎಲ್ಲವೂ ತೋರುತ್ತಿರುವವು- ಎಂಬ ಹೊಸ ವಾದವೊಂದನ್ನು ಇಲ್ಲಿ ಒಡ್ಡಿದೆ. ಜಡ, ಅನೃತ, ಪರಿಚ್ಛಿನ್ನರೂಪವಾಗಿರುವ ದೇಹಧರ್ಮಗಳು ಚಿದಾತ್ಮನಲ್ಲಿಯೂ ಸತ್ಯಜ್ಞಾನಸುಖಆತ್ಮರೂಪವು ದೇಹದಲ್ಲಿಯೂ ಕಲ್ಪಿತವಾಗಿವೆ (೭-೨೧, ೨೧೩) ಎಂಬ ಅಧ್ಯಾಸದ ಕಾರ್ಯವನ್ನು ಇಲ್ಲಿ ಹೇಳಿದ್ದರೂ ದೇಹಾದಿಗಳು ಹೇಗೆ ಅನೃತ, ಆತ್ಮನೊಬ್ಬನೇ ಏಕೆ ಸತ್ಯವೆಂಬುದನ್ನೇನೂ ಇಲ್ಲಿ ಉಪಪತ್ತಿಪೂರ್ವಕವಾಗಿ ತೋರಿಸಿಕೊಟ್ಟಿಲ್ಲ ; ಆತ್ಮನು ನಿರ್ವಿಶೇಷನೆಂಬುದನ್ನು 'ನೇತಿ ನೇತಿ' ಮುಂತಾದ ನಿಷೇಧವಾಕ್ಯಗಳಿಂದ ತಿಳಿಯಬಹುದೆಂಬುದನ್ನೂ ಹೇಳಿಲ್ಲ. ಕರ್ಮವು ಉತ್ಪಾದ್ಯಾದಿಚತುರ್ವಿಧಫಲಗಳನ್ನುಂಟುಮಾಡುವದೆಂದು ಇಲ್ಲಿ ವಿವರಿಸಿದ್ದರೂ ಮೋಕ್ಷವು ಉತ್ಪಾದ್ಯಾದಿರೂಪವಲ್ಲದ ಬ್ರಹ್ಮಸ್ವರೂಪವೇ ಎಂಬ ಸೂತ್ರಭಾಷ್ಯದ ಪ್ರಧಾನವಾದವನ್ನು ಉಪಯೋಗಿಸಿಕೊಂಡಿಲ್ಲ. ಅವಿದ್ಯೆಯನ್ನು 'ಭ್ರಾಂತಿ' ಎಂದು ಕರೆದಿರುವದು ಸೂತ್ರಭಾಷ್ಯದಲ್ಲಿಯೂ ಇದೆಯಾದರೂ ಭ್ರಾಂತಿಯು 'ಯುಕ್ತಿಹೀನಪ್ರಕಾಶ' ( ೭-೨೭ ) ಎಂದು ಇಲ್ಲಿ ವರ್ಣಿಸುವಾಗ ಅಲ್ಲಲ್ಲಿ ಶುಕ್ತಿಯಲ್ಲಿ ರಜತವೆಂಬ ಭ್ರಾಂತಿಯನ್ನು (೭-೨೧೩) ಉದಾಹರಿಸಿರುವದಲ್ಲದೆ, ವ್ಯಾಖ್ಯಾನಪ್ರಸ್ಥಾನಗಳಲ್ಲಿರುವಂತೆ ತೋರಿಕೆಯ ಬೆಳ್ಳಿಯು ಸತ್ತೊ, ಅಸತ್ತೊ ?- ಎಂದು ಮುಂತಾಗಿಯೂ ಇಲ್ಲಿ ವಿಕಲ್ಪಿಸಿರುತ್ತದೆ. ರಜತವೆಂದು ತಾದಾತ್ಮ್ಯದಿಂದ ಶುಕ್ತಿಯು ಕಾಣಿಸುತ್ತಿದೆ ಎಂದರೆ ಭ್ರಾಂತಿಯು ನಿರಧಿಷ್ಠಾನವೂ ನಿರವಧಿಕವೂ ಆದೀತು ! (೭-೨೫) ಎಂಬ ಯುಕ್ತಿಯನ್ನು ಇಲ್ಲಿ ಕೊಟ್ಟಿರುವದರಿಂದ ಈ ಕೃತಿಯು ಸುಪ್ರಸಿದ್ಧವಾರ್ತಿಕಕಾರರದೆ ?- ಎಂಬ ಶಂಕೆಯನ್ನು ಹೊಡೆದೆಬ್ಬಿಸಿದಂತಿದೆ.

## ೭. ಮಾಯೆಯ ಪ್ರತೀತಿ ಮತ್ತು ನಿವೃತ್ತಿ

ಸೂರ್ಯನು ನೀರಿನ ಸಂಬಂಧದಿಂದ ಚಲಿಸುತ್ತಿರುವಂತೆ ಕಾಣುವಹಾಗೆ ಮಾಯಾಭ್ರಮಿತನಾದ ಜೀವನು ಮನಃಸಂಸರ್ಗದಿಂದ ವಾಸನೆಯ ವಶದಿಂದ ನಾನಾರೂಪವಾದ ಜಗತ್ತನ್ನು ಕಾಣುತ್ತಾನೆ, ಯೋಗಾಭ್ಯಾಸದಿಂದ ಮನಸ್ಸು ನಿರ್ವಿಷಯವಾದರೆ ಅವನು ಅದರಿಂದ ಹಿಂತಿರುಗಿ ಕೂಡಲೆ ಜೀವನ್ಮುಕ್ತನಾಗುತ್ತಾನೆ(೮-೨೫,೨೬) ಎಂದಿರುವದೂ ಇಲ್ಲಿರುವ ವಿಶೇಷವಾದ-ಎಂದು ತಿಳಿಯಬೇಕು. ಈ ವಿಧವಾದ ಮಾಯೆಯು ನಿವೃತ್ತಿಯಾಗುವದು ಹೇಗೆ?- ಎಂಬ ಪ್ರಶ್ನೆಗೆ ಉತ್ತರವಾಗಿ ಈಶ್ವರೋಪಾಸನೆಯನ್ನು ಒಂಬತ್ತನೆಯ ಉಲ್ಲಾಸದಲ್ಲಿ ಕಲ್ಪಿಸಿರುತ್ತದೆ ಎಂಬ ಅವತರಣಿಕೆಯನ್ನು (೯-೧, ೨) ಇಲ್ಲಿ ಲಕ್ಷ್ಯದಲ್ಲಿಟ್ಟುಕೊಳ್ಳುವದು ಅವಶ್ಯ.

ಆ ಉಲ್ಲಾಸದಲ್ಲಿ ವಿವರಿಸಿರುವ ಯೋಗಾಭ್ಯಾಸವೂ ಮೂಲಾಧಾರಾದಿಗಳ ಮತ್ತು ನಾಡಿಗಳ ವಿವರಣೆಯೂ (೪-೧೪...) ಪ್ರಸಿದ್ಧವಾರ್ತಿಕದಲ್ಲಿ ಮತ್ತೆಲ್ಲಿಯೂ ಕಾಣ ಬರುವದಿಲ್ಲ. ಸಮನಸ್ಕೋಪಾಸನೆಯನ್ನು ಅಭ್ಯಾಸಮಾಡಿದವನು ಅಷ್ಟಾಂಗ ಯೋಗದಿಂದ ಅಮನಸ್ಕವನ್ನು ಹೊಂದುತ್ತಾನೆ (೯-೨೦) ಎಂಬುದು ಇಲ್ಲಿ ಅಸಾಧಾರಣವಾಗಿರುವ ಉಪದೇಶಗಳು. ಇಲ್ಲಿ ಶೈವಾಗಮದ ಷಟ್ತ್ರಿಂಶತ್ತತ್ತ್ವಗಳು ಪ್ರಣವದಲ್ಲಿವೆ ಎಂಬುದಾದರೂ (೯-೪೪, ೪೫) ಒಂದು ವಿಶೇಷವೇ ಸರಿ. ಹತ್ತನೆಯ ಉಲ್ಲಾಸದಲ್ಲಿ ವರ್ಣಿತವಾಗಿರುವ ಸಿದ್ಧಿಗಳ ವಿವರವೂ ವಾರ್ತಿಕಕಾರರ ಗ್ರಂಥಗಳಲ್ಲಿ ಎಲ್ಲಿಯೂ ಕಾಣುವದಿಲ್ಲ.

## ೮. ಪ್ರತ್ಯಭಿಜ್ಞೆ

ಈ ಮುಂಚೆ ನಾನು 'ಸಿದ್ರಿಸುತ್ತಿದ್ದೆನು' ಎಂದು ಎಚ್ಚರವಾಗುತ್ತಲೂ ಆತ್ಮನ ಪ್ರತ್ಯಭಿಜ್ಞಾನವಾಗುವದು ಎಂದು (೬ನೆಯ ಶ್ಲೋಕದಲ್ಲಿ) ಒಮ್ಮೆ ಮೂಲ ಸ್ತೋತ್ರದಲ್ಲಿ ಪ್ರತ್ಯಭಿಜ್ಞಾಶಬ್ದವನ್ನು ಪ್ರಯೋಗಿಸಿರುವದು ನಿಜವಾದರೂ ಮಾನಸೋಲ್ಲಾಸದಲ್ಲಿ ಪ್ರತ್ಯಭಿಜ್ಞಾಬಲದಿಂದ ಆತ್ಮನು ಸ್ಥಾಯಿ ಎಂದು ನಿರ್ಧಾರ ಮಾಡುತ್ತೇವೆಂಬ ವಾದವನ್ನು (೬-೧) ಹೂಡಿ ಪ್ರತ್ಯಭಿಜ್ಞೆಯು ಪ್ರಮಾಣವೆ ?- ಎಂಬ ಶಂಕೆಗೆ ವಿಸ್ತಾರವಾದ ಪರಿಹಾರವನ್ನು ಕೊಡುವದಕ್ಕೆ ಪ್ರಯತ್ನಿಸಿರುವದು ಕಂಡುಬರುತ್ತದೆ (೬-೩ರಿಂದ ೨೦ರವರೆಗೆ). ಪ್ರಮಾಣಗಳಿಗೆಲ್ಲ ಮೋಹವನ್ನು ತೊಲಗಿಸುವದೇ ಕೃತ್ಯ (ಮೋಹಾಪಸರಣಮ್ ೬-೧೯, ೨೦), ಆತ್ಮನೂ ಮೋಹವನ್ನು ತೊಲಗಿಸುವದರಿಂದಲೇ ಪ್ರತ್ಯಭಿಜ್ಞಾತನಾಗುತ್ತಾನೆ (೬-೩೧). 'ಸ್ಮೃತಿಃ ಪ್ರತ್ಯಕ್ಷ ಮೈತಿಹ್ಯಮ್' (ತೈ.ಆ. ೧-೨-೧) ಎಂಬ ಶ್ರುತಿಯು ಪ್ರತ್ಯಭಿಜ್ಞಾಸಿದ್ಧಿಗಾಗಿಯೇ ಪ್ರಮಾಣಗಳನ್ನು ಹೇಳಿದೆ ಎಂದು (೬-೩೨) ಹೇಳಿರುವದನ್ನೂ ಇಲ್ಲಿ ಶ್ರುತಿಯನ್ನು 'ಆಪ್ತವಾಕ್' ಎಂಬ ವಿಶೇಷಣದಿಂದ ತಿಳಿಸಿಕೊಟ್ಟಿರುವದೂ ಈ ಗ್ರಂಥಕಾರರಿಗೆ ಕಾಶ್ಮೀರದ ಪ್ರತ್ಯಭಿಜ್ಞಾದರ್ಶನದಲ್ಲಿ ಹೆಚ್ಚಿನ ಪಕ್ಷಪಾತವಿತ್ತೆಂಬುದಕ್ಕೆ (ಷಟ್ತ್ರಿಂಶತ್ತತ್ತ್ವಪರಾಮರ್ಶದಂತೆಯೇ) ಪೋಷಕಯುಕ್ತಿಯಾಗಿರುತ್ತದೆ.

## ಉಪಸಂಹಾರ

ಈವರೆಗೆ ಉದಾಹರಿಸಿರುವ ಅನೇಕಕಾರಣಗಳಿಂದ ಮೂಲಸ್ತೋತ್ರವನ್ನು ಬರೆದವರು 'ವಿಜೃಮ್ಭಯತ್ಯಪಿ ಮಹಾಯೋಗೀವ ಯಃ ಸ್ವೇಚ್ಛಯಾ' (೨), 'ಯತ್ಸಾಕ್ಷಾತ್ಕರಣಾತ್' (೩), 'ಮಹಾವ್ಯಾಮೋಹಸಂಹಾರಿಣೇ' (೫), ಮಾಯಾ ಸಮಾಚ್ಛಾದನಾತ್ (೬), 'ಭದ್ರಯಾ ಮುದ್ರಯಾ' (೭), 'ಮಾಯಾಪರಿಭ್ರಾಮಿತಃ' (೮), ಮೂರ್ತ್ಯಷ್ಟಕಮ್ (೯)- ಮುಂತಾದ ಪ್ರಯೋಗಗಳಿಂದಲೂ ಶೈವಸಂಬಂಧವಾದ ವಾಕ್ಯೋದಾಹರಣೆಗಳು ಸುಪ್ರಸಿದ್ಧಶಾಂಕರಭಾಷ್ಯಗಳಲ್ಲಿ ಕಾಣ

ಬರುವದಿಲ್ಲವಾದ್ದರಿಂದಲೂ ಶಾರೀರಕಸೂತ್ರಭಾಷ್ಯಕಾರರಾದ ಶಂಕರಾಚಾರ್ಯರೇ ಎಂಬ ವಿಷಯಕ್ಕೆ ಕೆಲವು ಸಂಶಯಗಳಿವೆಯೆಂದೂ ಮಾನಸೋಲ್ಲಾಸಕಾರರು ಬೃಹದಾರಣ್ಯಕಭಾಷ್ಯವಾರ್ತಿಕವನ್ನು ಬರೆದಿರುವ ಸುರೇಶ್ವರಾಚಾರ್ಯರಾಗಿರದೆ ಪ್ರತ್ಯಭಿಜ್ಞಾದರ್ಶನದಲ್ಲಿಯೂ ಯೋಗಾಭ್ಯಾಸತಂತ್ರಗಳಲ್ಲಿಯೂ ಅಭಿಮಾನವುಳ್ಳ ಯಾರೋ ಆಧುನಿಕ ಶೈವಾಚಾರ್ಯರಾಗಿರಬೇಕೆಂದೂ ಊಹಿಸುವದಕ್ಕೆ ಬಲವಾದ ಕಾರಣಗಳಿರುತ್ತವೆಯೆಂದು ಕೆಲವರು ಕಲ್ಪಿಸಿರುತ್ತಾರೆ. ನಾವು ಈ ಪೀಠಿಕೆಯಲ್ಲಿಯೂ ಮಾನಸೋಲ್ಲಾಸದ ವಿವೇಚನೆಯಲ್ಲಿಯೂ ಬರೆದಿರುವದನ್ನು ಮನಮುಟ್ಟಿ ವಿಚಾರಮಾಡಿ ಗ್ರಂಥತತ್ತ್ವಶೋಧನೆಯಲ್ಲಿ ರಸಿಕರಾದ ವಾಚಕರು ತಮ್ಮತಮ್ಮ ನಿರ್ಧಾರಣಕ್ಕೆ ಬರಬೇಕೆಂದು ಈ ಮೂಲಕ ಪ್ರಾರ್ಥಿಸುತ್ತೇನೆ.

ಈ ಗ್ರಂಥವನ್ನು ಸಿದ್ಧಗೊಳಿಸುವಾಗ (೧) ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿ ಪ್ರಕಾಶಿತವಾಗಿರುವ ದಕ್ಷಿಣಾಮೂರ್ತಿಸ್ತೋತ್ರ ಮತ್ತು ಸವ್ಯಾಖ್ಯ ಮಾನಸೋಲ್ಲಾಸ (೨) ಮಂಗಳೂರಿನಲ್ಲಿ ರಾಮಕೃಷ್ಣಮಿಷನ್ನಿನವರು ಪ್ರಕಟಿಸಿರುವ ಕನ್ನಡದ ಅನುವಾದಸಹಿತವಾದ ಮಾನಸೋಲ್ಲಾಸ ಮತ್ತು (೩) 'ವೇದಾಂತ ಬೋಧಿನೀ' ಗ್ರಂಥಮಾಲೆಯಲ್ಲಿ ಶ್ರೀ ಸುಂದರರಾಜಶರ್ಮರು ಶೋಧಿಸಿ ತಮಿಳು ಭಾಷೆಗೆ ಅನುವಾದಿಸಿದ್ದನ್ನು ಸಿ. ವೈ. ನಾಗೇಶ್ವರಯ್ಯರವರು 1965ರಲ್ಲಿ ಮುದ್ರಿಸಿರುವ ತಮಿಳುವ್ಯಾಖ್ಯಾನಸಹಿತ ಮಾನಸೋಲ್ಲಾಸ– ಈ ಗ್ರಂಥಗಳನ್ನು ಉಪಯೋಗಿಸಿಕೊಂಡಿರುತ್ತೇನೆ. ಕನ್ನಡನಾಡಿನ ವೇದಾಂತಜಿಜ್ಞಾಸುಗಳಿಗೆ ಈ ಸಂಸ್ಕರಣದಿಂದ ಸ್ವಲ್ಪವಾದರೂ ಪ್ರಯೋಜನವಾದರೆ ನಾನು ಧನ್ಯನು. ಈ ಗ್ರಂಥವನ್ನು ತಮ್ಮ ಕಾರ್ಯಾಲಯದ ಗ್ರಂಥಮಾಲೆಯಲ್ಲಿ ಸೇರಿಸಿಕೊಂಡು ಪ್ರಕಟಿಸಿದ ಹೊಳೆನರಸೀಪುರದ ಅಧ್ಯಾತ್ಮಪ್ರಕಾಶಕಾರ್ಯಾಲಯದ ಅಧಿಕಾರಿಗಳಿಗೆ ನಾನು ಕೃತಜ್ಞನಾಗಿರುತ್ತೇನೆ. ಈ ಗ್ರಂಥದ ಸರ್ವಸ್ವಾಮ್ಯವನ್ನೂ ಈ ಮೂಲಕ ಅವರಿಗೆ ವಹಿಸಿರುತ್ತೇನೆ. ಅಚ್ಚಿನ ಗ್ರಂಥದ ಕರಡನ್ನು ಒಮ್ಮೆ ನೋಡುವಾಗ ಪ್ರೈವೇಟ್ ಸೆಕ್ರೆಟರಿ ಶ್ರೀ ಸುಬ್ಬರಾಯಶರ್ಮರ ಸಹಾಯವೂ ನನಗೆ ಆಗಿರುತ್ತದೆ. ಗ್ರಂಥವನ್ನು ಪೂರ್ಣಸ್ಥಿತಿಗೆ ತರುವದಕ್ಕೆ ಸಹಕರಿಸಿರುವವರಿಗೆಲ್ಲ ನನ್ನ ನಾರಾಯಣ ಸ್ಮರಣೆಗಳು.

ಅಧ್ಯಾತ್ಮಪ್ರಕಾಶಕಾರ್ಯಾಲಯ,<br>ಬೆಂಗಳೂರು ಶಾಖೆ.<br>ಪರೀಧಾವಿ, ಶ್ರಾವಣ ಶು॥ ೨<br>11–8–1972

ಗ್ರಂಥಕರ್ತ.

# ವಿಷಯಾನುಕ್ರಮಣಿಕೆ

## ೫. ಆತ್ಮತತ್ತ್ವದ ವಿಷಯಕ್ಕೆ ವಾದಿಗಳ ಭ್ರಮೆ



## ೬. ಆತ್ಮನು ಅದ್ವಿತೀಯಕೂಟಸ್ಥನಿರ್ವಿಶೇಷರೂಪನು



## ೭. ಸರ್ವಾವಸ್ಥೆಗಳಲ್ಲಿಯೂ ಇದ್ದುಕೊಂಡಿರುವ ಆತ್ಮ



## ೮. ಜಗತ್ತಿನಲ್ಲಿರುವ ದೃಶ್ಯಗಳಿಗಿರುವ ಪರಸ್ಪರಸಂಬಂಧ

## ೯. ಈಶ್ವರೋಪಾಸನೆ



## ೧೦. ಸ್ತೋತ್ರದ ಪಾಠಾದಿಗಳಿಗೆ ಫಲ



## ಪರಿಶಿಷ್ಟ

* ಓಂ *

# ಮಾನಸೋಲ್ಲಾಸ

-:o:⌒:o:-

## ೧. ಪರಮಾತ್ಮನ ಅದ್ವೈತತತ್ತ್ವ

### ಮಂಗಳ

ಮಙ್ಗಲಂ[1] ದಿಶತು ಮೇ ವಿನಾಯಕೋ
ಮಙ್ಗಲಂ ದಿಶತು ಮೇ ಸರಸ್ವತೀ ।
ಮಙ್ಗಲಂ ದಿಶತು ಮೇ ಮಹೇಶ್ವರೀ[2]
ಮಙ್ಗಲಂ ದಿಶತು ಮೇ ಸದಾಶಿವಃ ॥ ೧ ॥

೧. ವಿನಾಯಕನು ನನಗೆ ಮಂಗಲವನ್ನುಂಟುಮಾಡಲಿ ! ಸರಸ್ವತಿಯು ನನಗೆ ಮಂಗಲವನ್ನುಂಟುಮಾಡಲಿ ! ಮಹೇಶ್ವರಿಯು ನನಗೆ ಮಂಗಲವನ್ನುಂಟುಮಾಡಲಿ ! ಸದಾಶಿವನು ನನಗೆ ಮಂಗಲ ವನ್ನುಂಟುಮಾಡಲಿ !

### ದಕ್ಷಿಣಾಮೂರ್ತಿ ಎಂದರೆ ಯಾರು ?

ಆತ್ಮಲಾಭಾತ್ ಪರೋ ಲಾಭೋ ನಾಸ್ತೀತಿ ಮುನಯೋ ವಿದುಃ ।
ತಲ್ಲಾಭಾರ್ಥಂ [3]ಕವಿಃ ಸ್ತೌತಿ ಸ್ವಾತ್ಮಾನಂ ಪರಮೇಶ್ವರಮ್ ॥ ೨ ॥
ಸ್ವೇಚ್ಛಯಾ ಸೃಷ್ಟಮಾವಿಶ್ಯ ವಿಶ್ವಂ ಯೋ ಮನಸಿ ಸ್ಥಿತಃ ।
ಸ್ತೋತ್ರೇಣ ಸ್ತೂಯತೇಽನೇನ ಸ ಏವ ಪರಮೇಶ್ವರಃ ॥ ೩ ॥

೨-೩. ಆತ್ಮಲಾಭಕ್ಕಿಂತ ಹೆಚ್ಚಿನ ಲಾಭವಿಲ್ಲವೆಂದು ಮುನಿಗಳು ಅಭಿಪ್ರಾಯಪಟ್ಟಿರುತ್ತಾರೆ. ಆ (ಆತ್ಮನ) ಲಾಭಕ್ಕಾಗಿ

---

1. 'ಮಙ್ಗಳಂ' ಎಂದೇ ಮುದ್ರಿತಪುಸ್ತಕಗಳ ಪಾಠ; ಲಳಕಾರಗಳಿಗೆ ಯಾವ ಭೇದವೂ ಇಲ್ಲವಾದರೂ 'ಮಂಗಲ' ಎಂದು ಬರೆಯುವದೇ ಹೆಚ್ಚು ರೂಢಿ.

2. 'ಮಹೇಶ್ವರೋ' ಎಂದು ಮೂರನೆಯ ಪಾದದಲ್ಲಿ, 'ಮಹೇಶ್ವರೀ' ಎಂದು ನಾಲ್ಕನೆಯ ಪಾದದಲ್ಲಿ ಪಾಠಾಂತರಗಳುಂಟು. ಈ ಮಂಗಲಶ್ಲೋಕದ ವಿಷಯಕ್ಕೆ ಪೀಠಿಕೆಯನ್ನು ನೋಡಿ.

3. ಆಪಸ್ತಂಬಾದಿಗಳು.

**ಕವಿಯು**[1] ತನ್ನ ಆತ್ಮನಾದ ಪರಮೇಶ್ವರನನ್ನು ಸ್ತುತಿಸುತ್ತಿದ್ದಾನೆ. ಯಾವಾತನು ತನ್ನ ಇಚ್ಛೆಯಂತೆ ಸೃಷ್ಟಿಸಲ್ಪಟ್ಟ ಪ್ರಪಂಚವನ್ನು ಹೊಕ್ಕು ಮನಸ್ಸಿನಲ್ಲಿರುತ್ತಾನೋ, ಆ ಪರಮೇಶ್ವರನೇ (ಈ) ಶ್ಲೋಕದಲ್ಲಿ ಸ್ತುತಿಸಲ್ಪಟ್ಟಿರುತ್ತಾನೆ.

## ವಿವೇಚನೆ

ಇಲ್ಲಿ ಆತ್ಮಲಾಭವೆಂದರೆ ಆತ್ಮನನ್ನು ಪಡೆದುಕೊಳ್ಳುವದೆಂದು ಅಕ್ಷರಾರ್ಥ. ಆದರೆ ಆತ್ಮನೆಂದರೆ ತನ್ನ ಸ್ವರೂಪವೇ ಆಗಿರುವದರಿಂದ ಅವನನ್ನು ಹೊಸದಾಗಿ ಪಡೆದುಕೊಳ್ಳಬೇಕೆಂದು ಹೇಳಿರುವದು ಹೇಗೆ ಸರಿ?–ಎಂಬ ಶಂಕೆಯು ಎದ್ದುಕೊಳ್ಳುವದು ಸ್ವಾಭಾವಿಕ. ಇದಕ್ಕೆ **ಸೂತ್ರಭಾಷ್ಯ**ದಲ್ಲಿ ಆಚಾರ್ಯರು ಬರೆದಿರುವ ಸಮಾಧಾನವು ಹೀಗಿದೆ: ಆತ್ಮನು ತನ್ನ ಸ್ವರೂಪದಲ್ಲಿಯೇ ಇದ್ದರೂ ಅವನ ಪರಮಾರ್ಥತತ್ತ್ವವನ್ನರಿಯದ ನಿಮಿತ್ತದಿಂದ ದೇಹವೇ ಮುಂತಾದ ಅನಾತ್ಮಗಳಲ್ಲಿ ಆತ್ಮನೆಂಬ ಭಾವನೆಯು ಲೌಕಿಕರಿಗೆ ಉಂಟಾಗಿಬಿಟ್ಟಿರುತ್ತದೆ. ಹೀಗೆ ತಪ್ಪುತಿಳಿವಳಿಕೆಯಿಂದ ದೇಹಾದಿಗಳೇ ಆದಂತಿರುವ ಆತ್ಮನೂ ತನ್ನ ಸ್ವರೂಪವನ್ನು ಪಡೆದುಕೊಳ್ಳದಂತೆಯೂ ಪಡೆದುಕೊಳ್ಳಬೇಕಾಗಿರುವಂತೆಯೂ ಆಗಿರುತ್ತಾನಾದ್ದರಿಂದ 'ಆತ್ಮನನ್ನು ಪಡೆದುಕೊಳ್ಳಬೇಕು' ಎಂಬ ವ್ಯವಹಾರವುಂಟಾಗುವದು ಯುಕ್ತವಾಗಿರುತ್ತದೆ. ಕರ್ತೃವೂ ಭೋಕ್ತೃವೂ ಆಗಿ ವಿಜ್ಞಾನಾತ್ಮನೆಂಬ ಹೆಸರನ್ನು ಪಡೆದುಕೊಂಡಿರುವ ಈ ಶಾರೀರಾತ್ಮನು ಅವಿದ್ಯಾಕಲ್ಪಿತನಾಗಿರುವದರಿಂದ ಪರಮಾರ್ಥಸ್ವರೂಪನಾಗಿರುವ ಪರಮೇಶ್ವರನು ಮಾಯೆಯಿಂದ ಕಲ್ಪಿತವಾಗಿರುವ ರೂಪದಿಂದ– ಹಗ್ಗದಮೇಲೆ ಆಕಾಶಕ್ಕೆ ಏರುವಂತೆ ಕಾಣುತ್ತಿರುವ ಮಾಯಾವಿಗಿಂತ ನೆಲದಮೇಲೆ ಆಗಲೂ ನಿಂತಿರುವ ನಿಜವಾದ ಮಾಯಾವಿಯಂತೆಯೂ, ಉಪಾಧಿಯಿಂದ ಕಲ್ಪಿತವಾಗಿರುವ ಘಟಾಕಾಶಕ್ಕಿಂತ ಯಾವ ಉಪಾಧಿಯೂ ಇಲ್ಲದ ಆಕಾಶವು ಬೇರೆಯಾಗಿರುವಂತೆಯೂ – ಬೇರೆಯಾಗಿರುತ್ತಾನೆ. (ಸೂ. ಭಾ. ೧–೧–೧೭ರಲ್ಲಿರುವ ಭಾಷ್ಯದ ಸಾರವಿದು).

## ಅವತರಣಿಕೆ

**ಅಸ್ತಿ ಪ್ರಕಾಶತೆ ಇತಿ ವ್ಯವಹಾರಃ ಪ್ರವರ್ತತೇ ।**
**ತಚ್ಚಾಸ್ತಿತ್ವಂ ಪ್ರಕಾಶತ್ವಂ ಕಸ್ಮಿನ್ನರ್ಥೇ ಪ್ರತಿಷ್ಠಿತಮ್ ॥ ೪ ॥**

1. ಇಲ್ಲಿ ಮೂಲಗ್ರಂಥಕರ್ತೃವನ್ನು ಭಾಷ್ಯಕಾರರೆಂದಾಗಲಿ ಶಂಕರರೆಂದಾಗಲಿ ಪರಾಮರ್ಶಿಸಿಲ್ಲವೆಂಬುದನ್ನು ಲಕ್ಷಿಸಬೇಕು. ಈ ವಿಷಯಕ್ಕೆ ಪೀಠಿಕೆಯನ್ನು ನೋಡಿರಿ.

ಕಿಂ ತೇಷು ತೇಷು ವಾರ್ಥೇಷು ಕಿಂ ವಾ ಸರ್ವಾತ್ಮನೀಶ್ವರೇ ।
ಈಶ್ವರತ್ವಂ ಚ ಜೀವತ್ವಂ ಸರ್ವಾತ್ಮತ್ವಂ ಚ ಕೀದೃಶಮ್ ॥ ೫ ॥
ಜಾನೀಯಾತ್ ತತ್ ಕಥಂ ಜೀವಃ ಕಿಂ ತಜ್ಜ್ಞಾನಸ್ಯ ಸಾಧನಮ್ ।
ಜ್ಞಾನಾತ್ತಸ್ಯ ಫಲಂ ಕಿಂ ಸ್ಯಾದೇಕತ್ವಂ ಚ ಕಥಂ ಭವೇತ್ ॥ ೬ ॥
ಸರ್ವಜ್ಞಃ ಸರ್ವಕರ್ತಾ ಚ ಕಥಮಾತ್ಮಾ ಭವಿಷ್ಯತಿ ।
ಶಿಷ್ಯಂ ಪ್ರತೀತ್ಥಂ ಪೃಚ್ಛಂತಂ ವಕ್ತುಮಾರಭತೇ ಗುರುಃ ॥ ೭ ॥

೪-೭. 'ಇದೆ', 'ಬೆಳಗುತ್ತದೆ'-ಎಂಬ ವ್ಯವಹಾರವು ನಡೆದಿದೆ. ಆ ಅಸ್ತಿತ್ವವೂ ಬೆಳಕೂ ಯಾವ ವಸ್ತುವಿನಲ್ಲಿ ಇದ್ದುಕೊಂಡಿದೆ ? ಆಯಾ ಪದಾರ್ಥಗಳಲ್ಲಿಯೊ, ಸರ್ವಾತ್ಮನಾದ ಈಶ್ವರನಲ್ಲಿಯೊ ? (೨) ಈಶ್ವರತ್ವ, ಜೀವತ್ವ, ಮತ್ತು ಸರ್ವಾತ್ಮತ್ವ-ಎಂಬುದು ಎಂಥದ್ದು? (೩) ಜೀವನು ಅದನ್ನು ಹೇಗೆ ಅರಿತಾನು ? (೪) ಆ ಜ್ಞಾನಕ್ಕೆ ಸಾಧನವು ಯಾವದು ? (೫) ಅದನ್ನು ಅರಿತುಕೊಂಡದ್ದರಿಂದ ಯಾವ ಫಲವಾದೀತು ? (೬) ಏಕತ್ವವೆಂಬುದು ಹೇಗೆ ಆದೀತು ? (೭) ಜೀವನು ಹೇಗೆ ಸರ್ವಜ್ಞನೂ ಸರ್ವಗತನೂ ಆಗುವನು ?-ಹೀಗೆಂದು ಕೇಳುತ್ತಿರುವ ಶಿಷ್ಯನಿಗೆ ಉತ್ತರವನ್ನು ಹೇಳುವದಕ್ಕೆ ಗುರುವು ಪ್ರಾರಂಭಿಸಿರುತ್ತಾನೆ.

## ವಿವೇಚನೆ

ಇಲ್ಲಿ ಶಿಷ್ಯನು ಕೇಳಬಹುದಾದ ಪ್ರಶ್ನೆಗಳಿಗೆಲ್ಲ ಮುಂದೆ ಈ ಪ್ರಕರಣದಲ್ಲಿ ಉತ್ತರವನ್ನು ಹೇಳಿರುತ್ತದೆಯಾದ್ದರಿಂದ ಇದು ಇಡಿಯ ಪ್ರಕರಣಕ್ಕೇ ಅವತರಣಿಕೆಯೆಂದು ಭಾವಿಸಬೇಕು.

ವಿಶ್ವಂ ದರ್ಪಣದೃಶ್ಯಮಾನನಗರೀತುಲ್ಯಂ ನಿಜಾಂತರ್ಗತಂ ।
ಪಶ್ಯನ್ನಾತ್ಮನಿ ಮಾಯಯಾ ಬಹಿರಿವೋದ್ಭೂತಂ ಯಥಾ ನಿದ್ರಯಾ ॥
ಯಃ ಸಾಕ್ಷಾತ್ಕುರುತೇ ಪ್ರಬೋಧಸಮಯೇ ಸ್ವಾತ್ಮಾನಮೇವಾದ್ವಯಂ ।
ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ ಶ್ರೀದಕ್ಷಿಣಾಮೂರ್ತಯೇ ॥

ಭಾವಾರ್ಥ :- ಯಾವಾತನು ಕನ್ನಡಿಯಲ್ಲಿ ಕಾಣುತ್ತಿರುವ ನಗರಿಯಂತೆ ತನ್ನಲ್ಲಿರುವ ವಿಶ್ವವನ್ನು ಮಾಯೆಯಿಂದ ನಿದ್ರೆಯಲ್ಲಿ ಹೇಗೋ ಹಾಗೆ ಹುಟ್ಟಿದಂತೆ ಕಾಣುತ್ತಾ ಪ್ರಬೋಧ ಕಾಲದಲ್ಲಿ ಅದ್ವಯನಾದ ತನ್ನನ್ನೇ ತನ್ನ ಆತ್ಮನನ್ನು ಮಾತ್ರವೇ ಸಾಕ್ಷಾತ್ಕರಿಸಿಕೊಳ್ಳುತ್ತಾನೋ ಅಂಥ ಶ್ರೀಗುರುಮೂರ್ತಿಯಾದ ಶ್ರೀದಕ್ಷಿಣಾಮೂರ್ತಿಗೆ ಈ ನಮಸ್ಕಾರ !

## ವಿಶ್ವವು ತನ್ನೊಳಗೇ ಇದೆ

ಅಸ್ಯಾರ್ಥಃ—

ಅನ್ತರಸ್ಮಿನ್ನಿಮೇ ಲೋಕಾ ಅನ್ತರ್ವಿಶ್ವಮಿದಂ ಜಗತ್ ।
ಬಹಿರ್ವನ್ಮಾಯಯಾಽಭಾತಿ ದರ್ಪಣೇ ಪ್ರತಿಬಿಮ್ಬಿತಮ್ ॥ ೮ ॥
ಸ್ವಪ್ನೇ ಸ್ವಾನ್ತರ್ಗತಂ ವಿಶ್ವಂ ಯಥಾ ಪೃಥಗವೇಕ್ಷತೇ ।
ತಥೈವ ಜಾಗ್ರತ್ಕಾಲೇಽಪಿ ಪ್ರಪಞ್ಚೋಽಯಂ ವಿವಿಚ್ಯತಾಮ್ ॥ ೯ ॥

೮–೯. ಈ ಶ್ಲೋಕದ (ಅರ್ಥವಿದು) : ಈತನೊಳಗೇ ಈ ಲೋಕಗಳಿವೆ. ಈ ಜಗತ್ತೆಲ್ಲವೂ ಈತನೊಳಗೇ ಇದೆ. (ಇದು) ಕನ್ನಡಿಯಲ್ಲಿ ಮಾರುಹೊಳೆದು (ತೋರು)ವಂತೆ ಮಾಯೆಯಿಂದ ಹೊರಗೆ ತೋರುತ್ತಿದೆ. ಕನಸಿನಲ್ಲಿ ತನ್ನೊಳಗೇ ತೋರುತ್ತಿರುವ ಪ್ರಪಂಚವನ್ನು ಹೇಗೆ ತನಗಿಂತ ಬೇರೆಯಾಗಿ ಕಾಣುತ್ತಾನೋ ಹಾಗೆಯೇ ಎಚ್ಚರಕಾಲದಲ್ಲೂ (ಎಂದು) ಈ ಪ್ರಪಂಚವನ್ನು ವಿಂಗಡಿಸಿ ತಿಳಿಯಬೇಕು.

### ವಿವೇಚನೆ

ಇಲ್ಲಿ ಮೊದಲನೆಯ ಶ್ಲೋಕದಲ್ಲಿ ಉದ್ಧೃತವಾಗಿರುವ ಶ್ರುತಿಯು ಪೂರ್ಣವಾದ ರೂಪದಲ್ಲಿ ಹೀಗಿದೆ :–

अन्तरस्मिन्निमे लोकाः । अन्तर्विश्वमिदं जगत् ।
ब्रह्मैव भूतानां ज्येष्ठम् । तेन कोऽर्हति स्पर्धितुम् ।
ब्रह्मन् देवास्त्रयस्त्रिंशत् । ब्रह्मन्निन्द्रप्रजापती ।
ब्रह्मन् ह विश्वा भूतानि । नावीवान्तः समाहिता ॥

ತೈ. ಬ್ರಾ. ೩–೮–೮

ಈ (ಬ್ರಹ್ಮ)ದಲ್ಲಿಯೇ ಈ ಲೋಕಗಳಿವೆ. ಈ ಜಗತ್ತೆಲ್ಲವೂ ಅದರಲ್ಲಿಯೇ ಇದೆ. ಬ್ರಹ್ಮವೇ ಭೂತಗಳೊಳಗೆಲ್ಲ ಹಿರಿಯುದು, ಅದರೊಡನೆ ಯಾರುತಾನೆ ಸ್ಪರ್ಧೆಗೆ ನಿಂತಾರು ? ಬ್ರಹ್ಮದಲ್ಲಿಯೇ ಮೂವತ್ತಮೂರು ದೇವತೆಗಳು, ಬ್ರಹ್ಮದಲ್ಲಿಯೇ ಇಂದ್ರಪ್ರಜಾಪತಿಗಳು, ಬ್ರಹ್ಮದಲ್ಲಿ ಸಮಸ್ತ ಪ್ರಾಣಿಗಳೂ ಹಡಗಿನಲ್ಲಿ ಹೇಗೋಹಾಗೆ ಒಳಗೆ ಸೇರಿಕೊಂಡಿರುತ್ತವೆ.

ಪ್ರತಿಬಿಂಬವು ನಮ್ಮ ಹೊರಗಿರುವ ಕನ್ನಡಿಯಲ್ಲಿರುವಂತೆ ತೋರಿದರೂ ನಿಜವಾಗಿ ನಮ್ಮ ಮುಖಕ್ಕಿಂತ ಬೇರೆಯಿರುವದಿಲ್ಲ. ಹಾಗೆಯೇ ಈ ಜಗತ್ತು ನಮಗೆ ಹೊರಗೆ ಇರುವಂತೆ ಕಾಣುತ್ತಿದ್ದರೂ ನಮ್ಮ ಆತ್ಮನಿಗಿಂತ ಬೇರೆಯಾಗಿರುವದಿಲ್ಲ. ಕನಸಿನಲ್ಲಿ ಕಾಣುವ ಪದಾರ್ಥಗಳು ನಮ್ಮ ಹೊರಗೆ ಇರುವಂತೆ ತೋರಿದರೂ ಎಲ್ಲಾ ಮನಸ್ಸಿನೊಳಗೆ ಆಗಿರುವ ಭ್ರಾಂತಿಯೇ. ಅಲ್ಲಿ ತಾನೇ ಬೇರೆಯಾಗಿರುವಂತೆ ಕಾಣುತ್ತಿರುವವಾದರೂ ಎಚ್ಚರವಾದಾಗ ಅವು ಯಾವವೂ ಕಾಣುವದೇ ಇಲ್ಲ; ಇದರಂತೆ ಆತ್ಮಜ್ಞಾನವಾದಬಳಿಕ ಎಲ್ಲವೂ ಬ್ರಹ್ಮವೇ ಎಂದು ನಿಶ್ಚಿತವಾಗುವದು.

ಕನಸಿನಲ್ಲಿ ತನಗಿಂತ ಬೇರೆಯಾಗಿ ಏನೊಂದೂ ಇರುವದಿಲ್ಲವೆಂಬುದು ನಿಶ್ಚಿತವಾಗಿದ್ದರೂ ಆ ಕಾಲಕ್ಕೆ ತನಗಿಂತ ಬೇರೆಯಾಗಿ ಹೊರಗೆ ಪ್ರಪಂಚವೊಂದು ಇರುವಂತೆಯೇ ಅಲ್ಲಿ ಕಾಣುತ್ತಿರುವದು. ಕಾಣುತ್ತಿದ್ದಮಾತ್ರದಿಂದ ಅದು ನಿಜವಾಗಿ ತನಗಿಂತ ಬೇರೆಯಾಗಿ ಸ್ವತಂತ್ರವಾಗಿಯೇ ಇರುತ್ತದೆಯೆಂದು ಯಾರೂ ನಂಬಿರುವದಿಲ್ಲ. ಹೀಗಿರುವಲ್ಲಿ ಕನಸಿನಂತೆಯೇ ಎಚ್ಚರದಲ್ಲಿ ತನಗಿಂತ ಬೇರೆಯಾಗಿರುವಂತೆ ಪ್ರಪಂಚವು ಕಂಡಮಾತ್ರದಿಂದ ಅದು ನಿಜವಾಗಿಯೂ ಸ್ವತಂತ್ರವಾಗಿಯೇ ಇದೆ ಎಂದು ನಂಬುವದಕ್ಕೆ ಕಾರಣವೇನಿದೆ ? ಎರಡವಸ್ಥೆಗಳಲ್ಲಿಯೂ ನಮ್ಮ ಸ್ವರೂಪವನ್ನಾಶ್ರಯಿಸಿಕೊಂಡೇ ಅಲ್ಲವೆ, ಪ್ರಪಂಚವು ಕಾಣುತ್ತಿರುವದು ?

## ಕನಸಿನ ದೃಷ್ಟಾಂತ

**ಸ್ವಪ್ನೇ ಸ್ವಸತ್ತೈವಾರ್ಥಾನಾಂ ಸತ್ತಾ ನಾನ್ಯೇತಿ ನಿಶ್ಚಿತಾ ।**
**ಕೋ ಜಾಗ್ರತಿ ವಿಶೇಷೋಽಸ್ತಿ ಜಡಾನಾಮಾಶುನಾಶಿನಾಮ್ ॥ ೧೦ ॥**
**ಸ್ವಪ್ನೇ ಪ್ರಕಾಶೋ ಭಾವಾನಾಂ ಸ್ವಪ್ರಕಾಶಾನ್ನ ಹೀತರಃ ।**
**ಜಾಗ್ರತ್ಯಪಿ ತಥೈವೇತಿ ನಿಶ್ಚಿನ್ವನ್ತಿ ವಿಪಶ್ಚಿತಃ ॥ ೧೧ ॥**

೧೦–೧೧. ಕನಸಿನಲ್ಲಿ ತನ್ನ ಇರವೇ ಪದಾರ್ಥಗಳ ಇರವು, ಮತ್ತೊಂದಲ್ಲ– ಎಂದು ನಿಶ್ಚಿತವಾಗಿರುತ್ತದೆ. ಬೇಗ ಕಾಣದೆ ಹೋಗುತ್ತಿರುವ ಜಡಪದಾರ್ಥಗಳಿಗೆ ಎಚ್ಚರದಲ್ಲಿ (ತಾನೆ) ಯಾವ ವಿಶೇಷವಿದೆ ? ಕನಸಿನಲ್ಲಿ ಪದಾರ್ಥಗಳ ತೋರಿಕೆಯು ತನ್ನ ತೋರಿಕೆಗಿಂತ ಬೇರೆಯಾಗಿಲ್ಲವೇ ಇಲ್ಲ. ಬಲ್ಲವರು ಎಚ್ಚರದಲ್ಲಿಯೂ ಹಾಗೆಯೇ ಎಂದು ನಿಶ್ಚಯಿಸಿಕೊಂಡಿರುತ್ತಾರೆ.

## ವಿವೇಚನೆ

'ಪದಾರ್ಥಗಳು ಹೊರಗೆ ಬೇರೆಯಾಗಿ ಸ್ವತಂತ್ರವಾಗಿವೆ ಎಂದು ಭಾವಿಸುವದು ತಪ್ಪೆಂದು ತಿಳಿಸಿದ್ದಾಯಿತು. ಈಗ ಆ ಪದಾರ್ಥಗಳ ಇರವು, ತೋರಿಕೆ- ಎಂಬ ಧರ್ಮಗಳು ಅವುಗಳನ್ನು ನೋಡುತ್ತಿರುವ ಆತ್ಮನ ಇರವು, ತೋರಿಕೆ- ಇವುಗಳಿಗಿಂತ ಬೇರೆಯಿಲ್ಲ. ಆತ್ಮನ ಇರವು, ಅರಿವಿನ ಬೆಳಕು- ಇವೇ ಪದಾರ್ಥಗಳಲ್ಲಿರುವ ಇರವುತೋರಿಕೆಗಳು ಎಂದು ಬಲ್ಲವರು ಹೇಳುತ್ತಿದಾರೆ. ಇಲ್ಲಿ ಮನಸ್ಸು, ಮನಸ್ಸಿನಿಂದ ಕಲ್ಪಿಸಿಕೊಳ್ಳುವ ಬಾಹ್ಯವಸ್ತುಗಳು- ಇವುಗಳೆರಡನ್ನೂ ಕಾಣುತ್ತಿರುವ ಆತ್ಮನನ್ನೇ ತಾನು ಎಂದಿದೆ ಎಂಬುದನ್ನು ಲಕ್ಷಿಸಬೇಕು. ಹೊರಗಿನ ವಸ್ತುಗಳು, ಒಳಗೆ ಅವನ್ನು ಅರಿಯುತ್ತಿರುವ ಮನಸ್ಸು- ಎಂದು ವಿಂಗಡವಾಗಿ ತೋರುವ ಎರಡೂ ಆತ್ಮನಿಗೆ ವಿಷಯವೇ ಆಗಿರುತ್ತವೆ. ಈ ಅಭಿಪ್ರಾಯವು ಮುಂದಿನ ಶ್ಲೋಕಗಳಲ್ಲಿ ಸ್ಫುಟವಾಗುವದು.

**ನಿದ್ರಯಾ ದರ್ಶಿತಾನರ್ಥಾನ್ ನ ಪಶ್ಯತಿ ಯಥೋತ್ಥಿತಃ ।**
**ಸಮ್ಯಗ್ಜ್ಞಾನೋದಯಾದೂರ್ಧ್ವಂ ತಥಾ ವಿಶ್ವಂ ನ ಪಶ್ಯತಿ ॥ ೧೨ ॥**
**ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ ।**
**ಅಜಮನಿದ್ರಮಸ್ವಪ್ನಮದ್ವೈತಂ ಬುಧ್ಯತೇ ತದಾ ॥ ೧೩ ॥**

೧೨-೧೩. ನಿದ್ರೆಯು ತೋರಿಸುವ ಪದಾರ್ಥಗಳನ್ನು ಎದ್ದವನು ಹೇಗೆ ಕಾಣುವದಿಲ್ಲವೋ ಹಾಗೆಯೇ ಸರಿಯಾದ ಜ್ಞಾನವು ಹುಟ್ಟಿದಮೇಲೆ ವಿಶ್ವವನ್ನು ಕಾಣುವದಿಲ್ಲ. ಅನಾದಿಮಾಯೆಯಿಂದ ಕನಸನ್ನು ಕಾಣುತ್ತಿರುವ ಜೀವನು ಯಾವಾಗ ಎಚ್ಚರುವನೋ ಆಗ ಜನ್ಮರಹಿತವೂ ನಿದ್ರಾರಹಿತವೂ ಸ್ವಪ್ನರಹಿತವೂ ಆಗಿರುವ ಅದ್ವೈತವನ್ನು ಅರಿತುಕೊಳ್ಳುತ್ತಾನೆ.

## ವಿವೇಚನೆ

ಕನಸಿನ ದೃಷ್ಟಾಂತವನ್ನು ಇಲ್ಲಿ ಎಚ್ಚರಕನಸುಗಳೆರಡಕ್ಕೂ ಅನ್ವಯಿಸಿರುತ್ತದೆ. **ಗೌಡಪಾದಕಾರಿಕೆಯಲ್ಲಿ** (೧-೧೬) ಹೀಗೆಯೇ ಇದನ್ನು ಪ್ರತಿಪಾದಿಸಿದೆ ಎಂದು ತೋರಿಸಿಕೊಡುವದಕ್ಕೆ ಆ ಕಾರಿಕೆಯನ್ನೇ ಇಲ್ಲಿ ಉದಾಹರಿಸಿದೆ. 'ಅಜಮನಿದ್ರಮ್' ಎಂಬುದಕ್ಕೆ 'ಅಜನ್ಮನಿದ್ರಮ್' ಎಂಬ ಪಾಠಾಂತರವೂ ಇದೆ. ಆಗಲೂ ಅರ್ಥದಲ್ಲಿ ಹೆಚ್ಚುಕಡಿಮೆಯೇನೂ ಆಗುವದಿಲ್ಲ. ಕಾರಿಕೆಯನ್ನೇ ಇಲ್ಲಿ ಎತ್ತಿ ಉದಾಹರಿಸಿದೆ ಎಂಬುದು ಕಾಣುವಂತೆ 'ಅಜಮ್' ಎಂಬ ಪಾಠವನ್ನೇ ನಾವು ಇಟ್ಟುಕೊಂಡಿರುತ್ತೇವೆ. 'ಅಜಮನಿದ್ರಮಸ್ವಪ್ನಮ್' ಎಂಬ ವಿಶೇಷಣವು ಗೌಡ

ಪಾದಕಾರಿಕೆಯ ಪ್ರಕರಣಗಳಲ್ಲಿ ಮತ್ತೆಮತ್ತೆ ಬಂದಿದೆ. ಆತ್ಮನು ಇದ್ದಂತೆಯೇ ಇದ್ದು ಅಜ್ಞರಿಗೆ ಬೇರೆಬೇರೆಯಾಗಿ ಮಾರ್ಪಾಡಾಗುವಂತೆ ತೋರುತ್ತಾನೆ- ಎಂಬ ಅರ್ಥವು 'ಅಜ' ಎಂಬ ವಿಶೇಷಣಕ್ಕೆ ಸೇರಿದ್ದು. 'ಅನಿದ್ರಮ್' ಎಂದರೆ ಜ್ಞಾನಾಭಾವವಿಲ್ಲದ್ದು ; 'ಅಸ್ವಪ್ನಮ್' ಎಂದರೆ ತಪ್ಪುತಿಳಿವಳಿಕೆಯಿಲ್ಲದ್ದು. ಅಜ್ಞಾನದಿಂದಲೇ ಅನ್ಯಥಾಜ್ಞಾನವು (ತಪ್ಪುತಿಳಿವಳಿಕೆಯು) ಆಗುತ್ತಿರುವದರಿಂದ-ಅಜ್ಞಾನವನ್ನು 'ಕಾರಣಾವಿದ್ಯೆ'ಯೆಂದೂ ಅನ್ಯಥಾಜ್ಞಾನವನ್ನು ಕಾರ್ಯಾವಿದ್ಯೆಯೆಂದೂ ಭಾವಿಸಿ ಇವುಗಳನ್ನು ನಿದ್ರೆ, ಕನಸು- ಎಂಬ ಹೆಸರುಗಳಿಂದ ಕಾರಿಕೆಯಲ್ಲಿ ಕರೆದಿದೆ. ಕನಸಿನಿಂದ ಎಚ್ಚರಕ್ಕೆ ಬಂದಾಗ ಕನಸು ತೋರದೆ ಹೋಗುವಂತೆ ಎಚ್ಚರದಿಂದ ಮತ್ತೊಂದು ಅವಸ್ಥೆಗೆ ಬಂದಮೇಲೆಯೇ ವಿಶ್ವವು ಕಾಣದೆಹೋಗುವದು- ಎಂಬ ಅಭಿಪ್ರಾಯವೇನೂ ಇಲ್ಲಿಲ್ಲ ; ತಪ್ಪುತಿಳಿವಳಿಕೆಯಿಂದಾಗಿದ್ದ ವಿಶ್ವವು ಸ್ವತಂತ್ರವಾಗಿದೆ ಎಂಬ ಜ್ಞಾನವು, 'ಎಲ್ಲವೂ ಅದ್ವೈತನಾದ ಆತ್ಮನೇ'- ಎಂಬ ತಿಳಿವಳಿಕೆಯಿಂದ ಬಾಧಿತವಾಗುವದು- ಎಂದಿಷ್ಟೇ ಇಲ್ಲಿ ವಿವಕ್ಷಿತವಾಗಿರುತ್ತದೆ.

**ಶ್ರುತ್ಯಾಚಾರ್ಯಪ್ರಸಾದೇನ ಯೋಗಾಭ್ಯಾಸವಶೇನ ಚ ।**
**ಈಶ್ವರಾನುಗ್ರಹೇಣಾಪಿ ಸ್ವಾತ್ಮಬೋಧೋ ಯದಾ ಭವೇತ್ ॥ ೧೪ ॥**
**ಭುಕ್ತಂ ಯಥಾನ್ನಂ ಕುಕ್ಷಿಸ್ಥಂ ಸ್ವಾತ್ಮತ್ವೇನೈವ ಪಶ್ಯತಿ ।**
**ಪೂರ್ಣಾಹನ್ತಾಕಬಳಿತಂ ವಿಶ್ವಂ ಯೋಗೀಶ್ವರಸ್ತಥಾ ॥ ೧೫ ॥**

೧೪-೧೫. ಶ್ರುತಿ, ಆಚಾರ್ಯ- ಇವರ ಪ್ರಸಾದದಿಂದಲೂ ಯೋಗಾಭ್ಯಾಸದಿಂದಲೂ ಈಶ್ವರಾನುಗ್ರಹದಿಂದಲೂ ತನ್ನ ಆತ್ಮನ ಅರಿವು ಯಾವಾಗ ಆಗುವದೋ (ಆಗ) ಉಂಡ ಅನ್ನವು ಹೊಟ್ಟೆಯಲ್ಲಿರುವಾಗ (ಅದನ್ನು) ತಾನೆಂದೇ ಹೇಗೆ (ಮನುಷ್ಯನು) ತಿಳಿಯುತ್ತಾನೋ, ಯೋಗೀಶ್ವರನಾದವನು ಪೂರ್ಣಾಹಂತೆಯಿಂದ ತುತ್ತುಮಾಡಿಕೊಂಡು ನುಂಗಿದ ವಿಶ್ವವನ್ನು ಹಾಗೆಯೇ (ತಾನೆಂದು ಅರಿತುಕೊಳ್ಳುವನು.)

## ವಿವೇಚನೆ

ಶಾಸ್ತ್ರದಲ್ಲಿ ಹೇಳಿರುವಂತೆಯೂ ಗುರುಗಳು ವಿವರಿಸಿ ತಿಳಿಯಿಸಿರುವಂತೆಯೂ ಯೋಗಾಭ್ಯಾಸವನ್ನು ಮಾಡಿದ ಬಳಿಕ ಪರಮೇಶ್ವರನ ಅನುಗ್ರಹದಿಂದ ಯೋಗಸಿದ್ಧಿಯ ಫಲವಾಗಿ ತನ್ನ ಆತ್ಮನ ಜ್ಞಾನವುಂಟಾಗುವದು. ಆಗ ಎಲ್ಲಾ ವಿಶ್ವವೂ ತಾನೇ ಎಂಬ ಅರಿವು ಯೋಗಿಗೆ ಉಂಟಾಗುವದು. ಉಂಡನ್ನವು ಅರಗಿದ ಬಳಿಕ ಎಲ್ಲವೂ ತಾನೇ ಆಗುವಂತೆ- ಎಂದು ಇಲ್ಲಿ ಹೇಳಿದ ದೃಷ್ಟಾಂತದಿಂದ ಈಗ

ವಿಶ್ವವು ಬೇರೆಯಾಗಿದ್ದು ಆಮೇಲೆ ತಾನೇ ಎಂಬ ಅರಿವಿನಿಂದ ಒಂದಾಗುವದು ಎಂದು ಭಾವಿಸಬಾರದು. ಅಜ್ಞಾನದಿಂದ ಬೇರೆಯಾಗಿದ್ದ ವಿಶ್ವವು ಜ್ಞಾನದಿಂದ ನಿಜವಾಗಿ ತಾನೇ ಎಂಬ ಅರಿವು ಆಗುವದು ಎಂಬುದು ಅಭಿಪ್ರಾಯ. ಪರಮಾತ್ಮನಲ್ಲಿ ಉಂಟಾಗುವ 'ನಾನು' ಎಂಬ ಜ್ಞಾನವನ್ನು ಪೂರ್ಣಾಹಂತಾಜ್ಞಾನವೆಂದು ಇಲ್ಲಿ ಕರೆದಿದೆ.

ಇಲ್ಲಿ ಹೇಳಿರುವ ಯೋಗಾಭ್ಯಾಸದ ವಿಚಾರವನ್ನು ಮುಂದೆ ವಿಚಾರಕ್ಕೆ ತೆಗೆದುಕೊಳ್ಳುವೆವು.

**ಯಥಾ ಸ್ವಪ್ನೇ ನೃಪೋ ಭೂತ್ವಾ ಭುಕ್ತ್ವಾ ಭೋಗಾನ್ ಯಥೇಪ್ಸಿತಾನ್**
**ಚತುರಙ್ಗಬಲೋಪೇತಃ ಶತ್ರುಂ ಜಿತ್ವಾ ರಣಾಙ್ಗಣೇ ॥ ೧೭ ॥**
**ಪರಾತ್ ಪರಾಜಿತೋ ಭೂತ್ವಾ ವನಂ ಪ್ರಾಪ್ಯ ತಪಶ್ಚರನ್ ।**
**ಮುಹೂರ್ತಮಾತ್ರಮಾತ್ಮಾನಂ ಮನ್ಯತೇ ಕಲ್ಪಜೀವಿತಮ್ ॥ ೧೭ ॥**
**ತಥೈವ ಜಾಗ್ರತ್ಕಾಲೇಽಪಿ ಮನೋರಾಜ್ಯಂ ಕರೋತ್ಯಸೌ ।**
**ಕಾಲನದ್ಯೋಘಯೋಗೇನ ಕ್ಷೀಣಮಾಯುರ್ನ ಪಶ್ಯತಿ ॥ ೧೮ ॥**

೧೬–೧೮. ಕನಸಿನಲ್ಲಿ ಹೇಗೆ ದೊರೆಯಾಗಿ ತನಗೆ ಇಷ್ಟವಾದ ಭೋಗಗಳನ್ನು ಭೋಗಿಸಿ ಚತುರಂಗಸೈನ್ಯದೊಡನೆ ಕೂಡಿಕೊಂಡು ಯುದ್ಧದಲ್ಲಿ ಶತ್ರುವನ್ನು ಗೆದ್ದು, ಶತ್ರುವಿನಿಂದ ಪರಾಜಿತನಾಗಿ ಕಾಡಿಗೆ ಹೋಗಿ ತಪಸ್ಸನ್ನು ಮಾಡುತ್ತಾ ಒಂದು ಮುಹೂರ್ತಮಾತ್ರವೇ ಇದ್ದ ತನ್ನನ್ನು ಕಲ್ಪದಷ್ಟು ಕಾಲದವರೆಗೆ ಜೀವಿಸಿದ್ದಂತೆ ಭಾವಿಸಿಕೊಳ್ಳುತ್ತಾನೋ, ಹಾಗೆ ಇಲ್ಲಿ ಎಚ್ಚರದ ಕಾಲದಲ್ಲಿಯೂ ಇವನು ಮನೋರಾಜ್ಯವನ್ನು ಮಾಡುತ್ತಿರುತ್ತಾನೆ. ಕಾಲವೆಂಬ ನದಿಯ ಪ್ರವಾಹದ ವೇಗದಿಂದ ಆಯುಸ್ಸು ಕ್ಷೀಣವಾದದ್ದನ್ನು ಅರಿಯದೆ ಇರುತ್ತಾನೆ.

### ವಿವೇಚನೆ

ನಿದ್ರಾದೋಷದಿಂದ ಕನಸಿನಲ್ಲಿ ಹೊರಗೆ ನಿಜವಾಗಿಯೂ ಬೇರೆಯಾಗಿ ಪ್ರಪಂಚವೊಂದು ಇದೆಯೆಂದು ಭಾವಿಸುವದಲ್ಲದೆ, ತನ್ನ ಸ್ವರೂಪದ ವಿಷಯದಲ್ಲಿಯೂ ಭ್ರಾಂತನಾಗಿ ಜೀವಿಸುತ್ತಿರುತ್ತಾನೆಂಬ ದೃಷ್ಟಾಂತದ ಬಲದಿಂದ ಎಚ್ಚರದಲ್ಲಿಯೂ ಆತ್ಮನ ಸ್ವರೂಪವನ್ನರಿಯದೆ ತಪ್ಪಾಗಿ ತಿಳಿದುಕೊಂಡಿರುತ್ತಾನೆಂಬುದನ್ನು ವಿವರಿಸುವದಕ್ಕೆ ಇಲ್ಲಿ ಹೊರಟಿದ್ದಾರೆ

**ಮೇಘಚ್ಛನ್ನೋಽಂಶುಮಾಲೀವ ಮಾಯಯಾ ಮೋಹಿತೋಽಧಿಕಮ್ ।**
**ಕಿಞ್ಚಿತ್ ಕರ್ತಾ ಚ ಕಿಂಚಿಜ್ಜ್ಞೋ ಲಕ್ಷ್ಯತೇ ಪರಮೇಶ್ವರಃ ॥ ೧೯ ॥**
**ಯದ್ಯತ್ ಕರೋತಿ ಜಾನಾತಿ ತಸ್ಮಿಂಸ್ತಸ್ಮಿನ್ ಪರೇಶ್ವರಃ ।**
**ರಾಜಾ ವಿದ್ವಾನ್ ಸ್ವಸಾಮರ್ಥ್ಯಾದೀಶ್ವರೋಽಯಮಿತೀರ್ಯತೇ ॥೨೦॥**
**ಜ್ಞಾನಕ್ರಿಯೇ ಶಿವೇನೈಕ್ಯಾತ್ ಸಙ್ಕ್ರಾನ್ತೇ ಸರ್ವಜನ್ತುಷು ।**
**ಈಶ್ವರತ್ವಂ ಚ ಜೀವಾನಾಂ ಸಿದ್ಧಂ ತಚ್ಛಕ್ತಿಸಙ್ಕ್ರಮಾತ್ ॥ ೨೧ ॥**

೧೯–೨೧. ಮೋಡದಿಂದ ಮುಚ್ಚಲ್ಪಟ್ಟ ಸೂರ್ಯನು ಹೇಗೋ ಹಾಗೆ ಪರಮೇಶ್ವರನು ಮಾಯೆಯಿಂದ ಹೆಚ್ಚಾಗಿ ಮೋಹಿತನಾಗಿ ಅಲ್ಪ ಕರ್ತನೂ ಅಲ್ಪಜ್ಞನೂ ಆಗಿ ತೋರುತ್ತಿರುವನು. ಯಾವಯಾವದನ್ನು ಮಾಡುತ್ತಾನೋ (ಯಾವಯಾವದನ್ನು) ಅರಿಯುತ್ತಾನೋ, ಅದರ ವಿಷಯಕ್ಕೆ ಪರಮೇಶ್ವರನು. ತನ್ನ ಸಾಮರ್ಥ್ಯದಿಂದ (ಮಾಡುವದರಿಂದ) 'ರಾಜನು', (ಅರಿಯುವದರಿಂದ) 'ವಿದ್ವಾಂಸನು'– (ಹೀಗೆ) 'ಇವನು ಸ್ವತಂತ್ರನು' ಎನಿಸಿಕೊಳ್ಳುತ್ತಾನೆ. ಜ್ಞಾನಕ್ರಿಯೆಗಳು, ಸರ್ವಜೀವರಲ್ಲಿಯೂ ಶಿವನಿಗೂ (ಅವರಿಗೂ) ಐಕ್ಯವಿರುವದರಿಂದ ಬಂದು ಸೇರಿಕೊಂಡಿವೆ. ಜೀವರುಗಳು ಈಶ್ವರನೆಂಬುದೂ ಆ (ಈಶ್ವರನ) ಶಕ್ತಿಯು ಬಂದು ಸೇರಿರುವದರಿಂದ (ಸಿದ್ಧವಾಗಿರುತ್ತದೆ.)

## ವಿವೇಚನೆ

ಈಗ 'ಸರ್ವಜ್ಞಸ್ಸರ್ವಕರ್ತಾ ಚ ಕಥಮಾತ್ಮಾ ಭವಿಷ್ಯತಿ' ಜೀವನು ಸರ್ವಜ್ಞನೂ ಸರ್ವಕರ್ತನೂ ಹೇಗಾದಾನು ?– ಎಂಬ (೭ನೆಯ ಶ್ಲೋಕದ) ಪ್ರಶ್ನೆಗೆ ಉತ್ತರವನ್ನು ಹೇಳುವದಕ್ಕೆ ಪ್ರಾರಂಭಿಸಿದ್ದಾರೆ. ಜೀವರು ತಾವು ಪದಾರ್ಥಗಳನ್ನು ತಿಳಿಯುಕೊಳ್ಳುವ ಜ್ಞಾನದಲ್ಲಿಯೂ ಮಾಡುವ ಕ್ರಿಯೆಯಲ್ಲಿಯೂ ಸ್ವತಂತ್ರರಾಗಿರುತ್ತಾರಲ್ಲವೆ ? ಹೀಗೆ ಅವರಿಗೆ ಈ ಜ್ಞಾನವೂ ಕ್ರಿಯೆಯೂ ಅವುಗಳ ವಿಷಯಕ್ಕೆ ಇರುವ ಸ್ವಾತಂತ್ರ್ಯವೂ ಅವರು ಈಶ್ವರಸ್ವರೂಪರೇ ಆಗಿರುವದರಿಂದಲೇ ಬಂದಿರುತ್ತವೆ. ಇದು ಅವರು ಸರ್ವಜ್ಞನೂ ಸರ್ವಕರ್ತನೂ ಆಗಿರುವ ಶಿವನೇ ಎಂಬುದಕ್ಕೆ ಸಂಭಾವನಾಯುಕ್ತಿ– ಎಂದು ಭಾವ.

**ಅಯಂ ಘಟೋಽಯಂ ಪಟ ಇತ್ಯೇವಂ ನಾನಾಪ್ರತೀತಿಷು ।**
**ಅರ್ಕಪ್ರಭೇವ ಜ್ಞಾನಂ ತತ್ ಸ್ವಯಮೇವ ಪ್ರಕಾಶತೇ ॥ ೨೨ ॥**
**ಜ್ಞಾನಂ ನ ಚೇತ್ ಸ್ವಯಂ ಸಿದ್ಧಂ ಜಗದನ್ಧಂ ತದಾ ಭವೇತ್ ।**

೨೨-೨೨ಠ. 'ಇದು ಗಡಿಗೆ', 'ಇದು ಬಟ್ಟೆ' -ಎಂದಿಂತು ಬಗೆಬಗೆಯಾಗಿರುವ ಪ್ರತೀತಿಗಳಾಗುತ್ತಿರುವಲ್ಲಿ ಜ್ಞಾನವು ಸೂರ್ಯನ ಪ್ರಭೆಯಂತೆ ತಾನೇ ಬೆಳಗುತ್ತಿರುವದು. ಜ್ಞಾನವು ಸ್ವಯಂಸಿದ್ಧವಲ್ಲದೆ ಇದ್ದರೆ ಜಗತ್ತೆಲ್ಲವೂ ಕುರುಡುಗತ್ತಲೆಯಾಗಿಬಿಟ್ಟೀತು.

## ವಿವೇಚನೆ

ಈಗ ಈಶ್ವರನಲ್ಲಿ ಜ್ಞಾನಕ್ರಿಯೆಗಳು ಸ್ವತಂತ್ರವಾಗಿಯೇ ಇವೆಯೆಂದೂ ಜೀವರಲ್ಲಿ ಅವೇ ಬಂದು ಸೇರಿಕೊಂಡು ತೋರಿಕೊಳ್ಳುತ್ತಿವೆಯೆಂದೂ ತೋರಿಸಿಕೊಡು ವದಕ್ಕೆ ಹೊರಟಿರುತ್ತಾರೆ. ಇಲ್ಲಿ ಈಶ್ವರನ ಜ್ಞಾನವು ಜೀವರಲ್ಲಿ ಬಂದುಸೇರಿದೆ ಎಂಬುದಕ್ಕೆ ಉಪಪತ್ತಿಯನ್ನು ಹೇಳುತ್ತಿದಾರೆ. 'ಇದು ಗಡಿಗೆ' ಎಂದು ನಮಗೆ ತೋರುತ್ತಿರುವಾಗ ಜ್ಞಾನವೇನೂ ಹೊಸದಾಗಿ ಉಂಟಾಗುವದಿಲ್ಲ. ಸೂರ್ಯನ ಬೆಳಕಿಗೆ ಪದಾರ್ಥಗಳು ತೋರುವಂತೆ, ನಮ್ಮ ಜ್ಞಾನದ ಬೆಳಕಿನಿಂದ ನಮಗೆ ಪದಾರ್ಥಗಳು ತೋರುತ್ತಿರುತ್ತವೆ. ಜ್ಞಾನವೂ ಆತ್ಮನ ಸ್ವರೂಪದಲ್ಲಿಲ್ಲದಿದ್ದರೆ ಯಾವ ವಸ್ತುಗಳ ಅರಿವೂ ನಮಗೆ ಆಗಬಾರದಾಗಿತ್ತು -ಎಂಬುದು ಯುಕ್ತ.

ಇಲ್ಲಿ ಜ್ಞಾನವು ತಾನೇ ತೋರುತ್ತದೆ ಎಂಬುದಕ್ಕೆ ಅನುಭವದ ಆಧಾರವನ್ನು ಹೇಳದೆ, ಅದನ್ನು 'ಅನ್ಯಥಾನುಪಪತ್ತಿ' (ಹಾಗಿಲ್ಲದಿದ್ದರೆ ಇಂಥ ಅನಿಷ್ಟವು ಬಂದೊದಗುತ್ತಿತ್ತು) ಎಂಬ ಅರ್ಥಾಪತ್ತಿಪ್ರಮಾಣದಿಂದ ಸಾಧಿಸಿದಂತೆ ಆಗಿರುತ್ತದೆ. ಇದು ಯುಕ್ತವಲ್ಲವೆಂದು ನಮಗೆ ತೋರುತ್ತದೆ. ಈ ವಿಷಯಕ್ಕೆ ಪೀಠಿಕೆಯನ್ನು ನೋಡಿರಿ.

**ನೋ ಚೇದಸ್ಯ ಕ್ರಿಯಾ ಕಾಚಿದ್ ವ್ಯವಹಾರಃ ಕಥಂ ಭವೇತ್ ॥ ೨೩ ॥**
**ಕ್ರಿಯಾ ನಾಮ ಪರಿಸ್ಪಂದಪರಿಣಾಮಸ್ವರೂಪಿಣೀ ।**
**ಸ್ಪಂದಮಾನೇ ಬಹಿರ್ಜ್ಞಾನೇ ತದಙ್ಕುರವದುದ್ಭವೇತ್ ॥ ೨೪ ॥**
**ಉತ್ಪಾದ್ಯಪ್ರಾಪ್ಯಸಂಸ್ಕಾರ್ಯವಿಕಾರ್ಯೋಪಾಶ್ರಯಾ ಕ್ರಿಯಾ ।**
**ಕರೋತಿ ಗಚ್ಛತ್ಯಸ್ನಾತಿ ಚ್ಛಿನತ್ತೀತಿ ಪ್ರತೀಯತೇ ॥ ೨೫ ॥**

೨೩-೨೫. ಇದಕ್ಕೆ ಯಾವ ಕ್ರಿಯೆಯೂ ಇಲ್ಲದಿದ್ದರೆ ವ್ಯವಹಾರವು ಹೇಗೆತಾನೆ ಆದೀತು? ಕ್ರಿಯೆ ಎಂಬುದು ಪರಿಸ್ಪಂದ, ಪರಿಣಾಮ -ಇವುಗಳ ರೂಪವಾಗಿರತಕ್ಕದ್ದು. ಜ್ಞಾನವು ಹೊರಕ್ಕೆ ಚಲಿಸಲಾಗಿ ಅದರ ಮೊಳಕೆಯಂತೆ (ಇದು) ಹುಟ್ಟುತ್ತದೆ. ಕ್ರಿಯೆಯು ಹುಟ್ಟಿಸತಕ್ಕದ್ದು, ಪಡೆಯತಕ್ಕದ್ದು, ಸಂಸ್ಕಾರಮಾಡಲ್ಪಡತಕ್ಕದ್ದು,

ಮಾರ್ಪಡಿಸಲ್ಪಡತಕ್ಕದ್ದು– (ಎಂಬ ಫಲಗಳನ್ನು) ಆಶ್ರಯಿಸಿಕೊಂಡಿರುತ್ತದೆ. (ಹೀಗೆ ಆಶ್ರಯಿಸಿಕೊಂಡು) 'ಮಾಡುತ್ತಾನೆ', 'ಹೋಗುತ್ತಾನೆ', 'ಉಜ್ಜುತ್ತಾನೆ', 'ಕಡಿಯುತ್ತಾನೆ'– ಎಂದಿಂತು ಕಾಣಬರುತ್ತದೆ.

### ವಿವೇಚನೆ

ಈ ಜ್ಞಾನಕ್ಕೆ ಚಲಿಸುವದು, ಪರಿಣಮಿಸುವದು– ಎಂಬಿವುಗಳೊಳಗೆ ಯಾವ ರೂಪದ ಕ್ರಿಯೆಯೂ ಇಲ್ಲವೆಂದರೆ ವ್ಯವಹಾರವು ಹೇಗಾಗಬೇಕು? ಅದು ಆಗುವದು ಕಂಡಿದೆಯಾದ್ದರಿಂದ ಜ್ಞಾನದಲ್ಲಿ ಕ್ರಿಯೆಯೂ ಇದೆ ಎಂದು ಒಪ್ಪಬೇಕು ಎಂದು ಭಾವ. ಈ ಯುಕ್ತಿಯೂ ವಿಮರ್ಶೆಗೆ ತಕ್ಕದ್ದೇ ಆಗಿದೆ. ಪೀಠಿಕೆಯನ್ನು ನೋಡಿ.

ಕ್ರಿಯೆಗೆ ನಾಲ್ಕು ಫಲಗಳುಂಟು. **ಉತ್ಪಾದ್ಯ** (ಹೊಸದಾಗಿ ಉಂಟುಮಾಡತಕ್ಕದ್ದು) ಎಂಬುದೊಂದು ಫಲ. 'ಗಡಿಗೆಯನ್ನು ಮಾಡುತ್ತಾನೆ' ಎಂಬುದು ಇದಕ್ಕೆ ಉದಾಹರಣೆ. **ಪ್ರಾಪ್ಯ** (ಒಂದುಕಡೆಗೆ ಹೋಗಿ ಪಡೆಯತಕ್ಕದ್ದು) ಎಂಬುದು ಇನ್ನೊಂದು; 'ಊರಿಗೆ ಹೋಗುತ್ತಾನೆ' ಎಂಬುದು ಇದಕ್ಕೆ ಉದಾಹರಣೆ. **ಸಂಸ್ಕಾರ್ಯ** (ಶುದ್ಧಿಗೊಳಿಸತಕ್ಕದ್ದು) ಎಂಬುದು ಮೂರನೆಯ ಫಲ; 'ಪಾತ್ರೆಯನ್ನು ಉಜ್ಜಿ ಶುಭ್ರಗೊಳಿಸುತ್ತಾನೆ' ಎಂಬುದು ಇದಕ್ಕೆ ಉದಾಹರಣೆ. **ವಿಕಾರ್ಯ** (ಮಾರ್ಪಾಡುಗೊಳಿಸಲ್ಪಡತಕ್ಕದ್ದು) ಎಂಬುದು ಇನ್ನೊಂದು ಫಲ; ಇದಕ್ಕೆ 'ಕಟ್ಟಿಗೆಯನ್ನು ಕಡಿಯುತ್ತಾನೆ' ಎಂಬುದು ಉದಾಹರಣೆ– ಎಂದು ಭಾವ. ಹೀಗೆ ಕ್ರಿಯೆಗೆ ನಾಲ್ಕು ವಿಧವಾದ ಫಲವನ್ನು ಹೇಳುವರು. ಮೋಕ್ಷವು ಈ ನಾಲ್ಕರಲ್ಲಿ ಒಂದೂ ಅಲ್ಲ– ಎಂದು ಸೂತ್ರಭಾಷ್ಯಾದಿಗಳಲ್ಲಿ ತಿಳಿಯಿಸಿರುತ್ತದೆ. ಉದಾಹರಣೆಗೆ ವೇ. ಸೂ. ೧–೧–೪ರಲ್ಲಿ 'ಯಸ್ಯ ತೂತ್ಪಾದ್ಯೋ ಮೋಕ್ಷಃ' (ಭಾ.ಭಾ. ೪೮, ೪೯) ಎಂದುಮುಂತಾಗಿರುವ ಭಾಷ್ಯವನ್ನು ನೋಡಿ. 'ಜ್ಞಾನಕ್ಕೆ ಕ್ರಿಯೆಯುಂಟು, ಅದು ಪರಿಸ್ಪಂದಪರಿಣಾಮಗಳೆಂಬ ರೂಪವುಳ್ಳದ್ದು'– ಎಂಬುವನ್ನು ತೋರಿಸಿಕೊಡಬೇಕಾದ ಪ್ರಕರಣದಲ್ಲಿ ಈ ವಿವರವೇತಕ್ಕೆ ಬಂತೋ ತಿಳಿಯದು. ಪೀಠಿಕೆಯನ್ನು ನೋಡಿ)

## ಈಶ್ವರನ ಜ್ಞಾನವು ಜೀವರಲ್ಲಿ ತೋರಿಕೊಳ್ಳುವ ಪ್ರಕಾರಗಳು

**ಶಿವೋ ಬ್ರಹ್ಮಾದಿದೇಹೇಷು ಸರ್ವಜ್ಞ ಇತಿ ಭಾಸತೇ ।**
**ದೇವತಿರ್ಯಙ್ಮನುಷ್ಯೇಷು ಕಿಂಚಿಜ್ಜ್ಞಸ್ತಾರತಮ್ಯತಃ ॥ ೨೬ ॥**
**ಜರಾಯುಜೋಽಣ್ಡಜಶ್ಚೈವ ಸ್ವೇದಜಃ ಪುನರುದ್ಭಿದಃ ।**
**ಏತೇ ಚತುರ್ವಿಧಾಃ ಪೂರ್ವಕ್ರಮಶೋ ನ್ಯೂನವೃತ್ತಯಃ ॥ ೨೭ ॥**

೨೬-೨೭. ಶಿವನು ಬ್ರಹ್ಮನೇ ಮುಂತಾದವರ ದೇಹದಲ್ಲಿ ಸರ್ವಜ್ಞನೆಂತ ತೋರಿಕೊಳ್ಳುತ್ತಾನೆ. ದೇವತೆಗಳು, ತಿರ್ಯಕ್ಪ್ರಾಣಿಗಳು, ಮನುಷ್ಯರು- ಇವರಲ್ಲಿ ತಾರತಮ್ಯದಿಂದ ಅಲ್ಪಜ್ಞನಾಗಿ ಕಾಣಿಸುತ್ತಾನೆ. ಜರಾಯುಜ (ತಾಯಿಯ ಗರ್ಭದಿಂದ ಹುಟ್ಟಿದವು), ಅಂಡಜ (ಮೊಟ್ಟೆಯಿಂದ ಹುಟ್ಟಿದವು), ಸ್ವೇದಜ (ಬೆವರಿನಿಂದ ಹುಟ್ಟಿದವು, ಉದ್ಭಿಜ್ಜ (ಭೂಮಿಯಿಂದ ಎದ್ದು ಹುಟ್ಟಿದವು)- ಎಂಬೀ (ದೇಹಗಳುಳ್ಳ ಪ್ರಾಣಿಗಳು) ಕ್ರಮಕ್ರಮವಾಗಿ (ಒಂದಕ್ಕಿಂತ ಒಂದು) ಕಡಿಮೆಯಾದ ಜ್ಞಾನವೃತ್ತಿಗಳುಳ್ಳವುಗಳಾಗಿರುತ್ತವೆ.

### ವಿವೇಚನೆ

ಈಶ್ವರನ ಜ್ಞಾನವು ಬ್ರಹ್ಮಾದಿಸ್ತಂಬಪರ್ಯಂತವಾಗಿರುವ ಪ್ರಾಣಿಗಳಲ್ಲೆಲ್ಲ ತೋರುತ್ತಿದೆಯಾದರೂ ಆಯಾ ಪ್ರಾಣಿಗಳ ಧರ್ಮಾಧರ್ಮತಾರತಮ್ಯದಿಂದ ಹೆಚ್ಚುಕಡಿಮೆಯಾಗಿರುತ್ತದೆ. ಈ ತಾರತಮ್ಯದಿಂದ ಸುಖದುಃಖತಾರತಮ್ಯವಾಗಿರುವ ಬಗೆಗೆ ಸೂತ್ರಭಾಷ್ಯವನ್ನು (೧-೧-೪ ಭಾ. ಭಾ. ೪೨) ನೋಡಿ. ಪಂಚಾಗ್ನಿವಿದ್ಯೆಯ ಫಲವನ್ನು ವಿಚಾರಮಾಡುವ ಪ್ರಸಂಗದಿಂದ ಈ ಪ್ರಾಣಿಗಳ ವಿಚಾರವನ್ನು ಬ್ರಹ್ಮಸೂತ್ರದಲ್ಲಿ (೩-೧-೨೦, ೨೧ರಲ್ಲಿ) ಪರಾಮರ್ಶಿಸಿರುವದನ್ನು ಕಾಣಬಹುದು. ಜ್ಞಾನಶಕ್ತಿಯ ತಾರತಮ್ಯವನ್ನು ಉಪಲಕ್ಷಣವಾಗಿಟ್ಟುಕೊಂಡರೆ ಪ್ರಾಣಿಗಳಲ್ಲಿ ತೋರಿಕೊಳ್ಳುವ ಕ್ರಿಯಾಶಕ್ತಿಯ ತಾರತಮ್ಯವನ್ನೂ ಹೀಗೆಯೇ ಊಹಿಸಬಹುದೆಂಬ ಭಾವದಿಂದ ಇಲ್ಲಿ ಅವನ್ನು ಹೇಳದೆ ಇದ್ದಾರೆಂದು ಇಟ್ಟುಕೊಳ್ಳಬಹುದು.

## ಈಶ್ವರನ ಸರ್ವಾತ್ಮಕತ್ವ

**ಬ್ರಹ್ಮಾದಿಸ್ತಮ್ಬಪರ್ಯನ್ತಾ ಸ್ವಪ್ನಕಲ್ಪೈವ ಕಲ್ಪನಾ ।**
**ಸಾಕ್ಷಾತ್ಕೃತೇऽನವಚ್ಛಿನ್ನಪ್ರಕಾಶೇ ಪರಮಾತ್ಮನಿ ॥ ೨೮ ॥**

೨೮. ಯಾವ ಪರಿಚ್ಛೇದವೂ ಇಲ್ಲದ ಪ್ರಕಾಶವುಳ್ಳ ಪರಮಾತ್ಮನು ಸಾಕ್ಷಾತ್ಕೃತನಾಗಲಾಗಿ ಬ್ರಹ್ಮನು ಮೊದಲಾಗಿ ಸ್ತಂಬದವರೆಗಿನ (ಪ್ರಾಣಿಭೇದದ) ಕಲ್ಪನೆಯು ಸ್ವಪ್ನದಂತೆ ಆಗಿಬಿಡುವದು.

**ಅಣೋರಣೀಯೊನ್ಮಹತೋ ಮಹೀಯಾನಿತಿ ವೇದವಾಕ್ ।**
**ರುದ್ರೋಪನಿಷದಪ್ಯೇವಂ ಸ್ತೌತಿ ಸರ್ವಾತ್ಮಕಂ ಶಿವಮ್ ॥ ೨೯ ॥**
**ಈಶ್ವರೋ ಗುರುರಾತ್ಮೇತಿ ಮೂರ್ತಿಭೇದಾದ್ ವಿಭಾಗಿನೇ ।**
**ವ್ಯೋಮವದ್ ವ್ಯಾಪ್ತದೇಹಾಯ ದಕ್ಷಿಣಾಮೂರ್ತಯೇ ನಮಃ ॥ ೩೦ ॥**

---

1. 'ಕರ್ತನ್ಯನವಚ್ಛಿನ್ನ' ಎಂಬ ಪಾಠಕ್ಕಿಂತ ಇದೇ ಸರಿಯಾಗಿ ಹೊಂದುತ್ತದೆ.

೩೯-೪೦. 'ಅಣುವಿಗಿಂತಲೂ ಅಣುವು, ಮಹತ್ತಿಗಿಂತಲೂ ದೊಡ್ಡವನು' ಎಂದು ವೇದವಾಕ್ಯವೂ ಇದೆ; ರುದ್ರೋಪನಿಷತ್ತು ಕೂಡ ಸರ್ವಾತ್ಮಕನಾದ ಶಿವನನ್ನು ಹೀಗೆಯೇ ಸ್ತುತಿಸುತ್ತಿದೆ. ಈಶ್ವರನು, ಗುರು, ಆತ್ಮ- ಎಂದು ಬೇರೆಬೇರೆಯ ಆಕಾರಗಳಿಂದ ಕಾಣುತ್ತಿರುವ, ಆಕಾಶದಂತೆ ವ್ಯಾಪಿಸಿಕೊಂಡಿರುವ ದೇಹವುಳ್ಳ ದಕ್ಷಿಣಾಮೂರ್ತಿಗೆ ನಮಸ್ಕಾರ !

## ವಿವೇಚನೆ

ಆತ್ಮನು ಸೂಕ್ಷ್ಮರೂಪನೂ ಅಲ್ಲ, ಸ್ಥೂಲರೂಪನೂ ಅಲ್ಲ. ಸ್ವಪ್ನದಲ್ಲಿ ಬಗೆಬಗೆಯ ಶರೀರಗಳಿಂದ ಬಗೆಬಗೆಯ ಜೀವರುಗಳು ತೋರುತ್ತಿರುವಂತೆ ಆಯಾ ರೂಪಗಳಿಂದ ಅವನು ಸ್ಥೂಲಸೂಕ್ಷ್ಮರೂಪಗಳ ತಾರತಮ್ಯವುಳ್ಳವನಾಗಿರುವಂತೆ ತೋರುತ್ತಿರುವನು. ಅಣುವಾಗಿರುವ ಪದಾರ್ಥಕ್ಕೂ ಇವನೇ ಆತ್ಮನು; ಮಹತ್ತಾಗಿರುವ ಪದಾರ್ಥಕ್ಕೂ ಇವನೇ ಆತ್ಮನು. ಹೀಗೆ ಎಲ್ಲಾ ಜೀವರುಗಳಲ್ಲಿಯೂ ಅಣುತ್ವಮಹತ್ತ್ವಾದಿಪರಿಮಾಣವಿಲ್ಲದೆ ಇರುವ ಅದ್ವಿತೀಯಾತ್ಮನೊಬ್ಬನೇ ಇರುವನೆಂದು ತಿಳಿದುಕೊಂಡವನಿಗೆ ಶೋಕವಿಲ್ಲದೆಹೋಗುವದು ಎಂಬುದು 'ಅಣೋರಣೀಯಾನ್' ಎಂಬ ಕಾಠಕ (ಕಾ. ೨-೨೦) ಶ್ರುತಿಯ ಅಭಿಪ್ರಾಯ.

ನಿರ್ಣಯಸಾಗರ ಪ್ರೆಸ್‌ನಲ್ಲಿ ಅಚ್ಚಾಗಿರುವ ಅಷ್ಟೋತ್ತರಶತೋಪನಿಷತ್ತಿನಲ್ಲಿ **ರುದ್ರಹೃದಯೋಪನಿಷತ್ತೆಂಬುದು** ೮೮ನೆಯದು. ರುದ್ರೋಪನಿಷತ್ತೆಂಬ ಹೆಸರಿನ ಉಪನಿಷತ್ತು ಆ ಸಂಗ್ರಹದಲ್ಲಿಲ್ಲ. **'ರುದ್ರೋಪನಿಷತ್ತು'** ಎಂಬ ಸಂಕ್ಷೇಪನಾಮದಿಂದ ಇಲ್ಲಿ ಕರೆದಿರುವದು ಅದೇ ಉಪನಿಷತ್ತಿರಬೇಕೆಂಬುದು ಸಂಭಾವಿತವಾಗಿದೆ ; ಏಕೆಂದರೆ ಅದರಲ್ಲಿ ರುದ್ರನು ಸರ್ವಾತ್ಮನೆಂದು ಹೊಗಳಿದೆ.

ಗುರುವಿನ ಉಪದೇಶದಿಂದ ಶಾಸ್ತ್ರಾರ್ಥವನ್ನು ನಿಶ್ಚಯಿಸಿ ಶಿಷ್ಯನು ಸಾಧನಬಲದಿಂದ **ಪುರುಷಾರ್ಥವನ್ನು** ಪಡೆಯುತ್ತಾನೆಂದು ಹಿಂದೆ (೧೪ನೆಯ ಶ್ಲೋಕದಲ್ಲಿ) **ಹೇಳಿತ್ತು**. ಅದು ವ್ಯವಹಾರದ ಅವಸ್ಥೆಯಲ್ಲಿ ಕಾಣುವ ಉಪಾಧಿಗಳ ಭೇದವನ್ನು ಅನುಸರಿಸಿ ಹೇಳಿದ ಮಾತು. ಆದರೆ ಕನಸಿನಿಂದ ಎಚ್ಚತ್ತವನಿಗೆ ಕನಸಿನಲ್ಲಿ ಯಾವ ವಿಚಿತ್ರಪ್ರಪಂಚವೂ ಇರಲಿಲ್ಲವೆಂದು ನಿಶ್ಚಯವಾಗುವಂತೆ ಅದ್ವೈತಜ್ಞಾನವಾದ ಬಳಿಕ ಈಶ್ವರ, ಗುರು, ತಾನು -ಎಂಬ ವಿಂಗಡವೂ ಮಾಯಿಕವೇ ಎಂಬ ನಿಶ್ಚಯವಾಗಿಬಿಡುತ್ತದೆ ಎಂಬರ್ಥವನ್ನು **'ಯಃ ಸಾಕ್ಷಾತ್ಕುರುತೇ ಪ್ರಬೋಧಸಮಯೇ ಸ್ವಾತ್ಮಾನಮೇವಾದ್ವಯಮ್'** ಎಂಬ ಶ್ಲೋಕಪಾದದಲ್ಲಿ ಹೇಳಿದೆ ಎಂಬುದನ್ನು ತಿಳಿಯಿಸುವದಕ್ಕಾಗಿ ಇಲ್ಲಿ ಈಶ್ವರಗುರುಶಿಷ್ಯಭೇದವು ನಿಜವಾಗಿಲ್ಲವೆಂದೂ

ಪರಮಾರ್ಥದೃಷ್ಟಿಯಿಂದ ಮಹಾಕಾಶವೇ ಘಟಾಕಾಶಾದಿರೂಪದಿಂದ ತೋರುವಂತೆ ಪರಮಾತ್ಮನೇ ಈ ಮೂರು ರೂಪಗಳಿಂದಲೂ ತೋರುತ್ತಿರುವನೆಂದೂ ತಿಳಿಯಿಸು ವದಕ್ಕಾಗಿ 'ವ್ಯೋಮವದ್ವ್ಯಾಪ್ತದೇಹಾಯ' (ಆಕಾಶದಂತೆ ವ್ಯಾಪಿಸಿಕೊಂಡಿರುವ ಸ್ವರೂಪವುಳ್ಳ) ಎಂಬ ವಿಶೇಷಣವನ್ನು ಇಲ್ಲಿ ದಕ್ಷಿಣಾಮೂರ್ತಿಗೆ ಕೊಟ್ಟಿರುತ್ತದೆ.

**ಇತಿ ಶ್ರೀದಕ್ಷಿಣಾಮೂರ್ತಿಸ್ತೋತ್ರಾರ್ಥಪ್ರತಿಪಾದಕೇ ।**
**ಪ್ರಬನ್ಧೇ ಮಾನಸೋಲ್ಲಾಸೇ ಪ್ರಥಮೋಲ್ಲಾಸಸಂಗ್ರಹಃ ॥ ೩೦ ॥**

೩೧. ಇಂತು ಶ್ರೀದಕ್ಷಿಣಾಮೂರ್ತಿಸ್ತೋತ್ರದ ಅರ್ಥವನ್ನು ಪ್ರತಿಪಾದಿಸುವ 'ಮಾನಸೋಲ್ಲಾಸ'ವೆಂಬ ಪ್ರಬಂಧದಲ್ಲಿ ಮೊದಲ ನೆಯ ಉಲ್ಲಾಸದ ಸಂಗ್ರಹವು.

## ವಿವೇಚನೆ

ಇದನ್ನು ಸ್ತೋತ್ರವೆಂದು ಕರೆದಿರುವದು 'ನಮ ಇದಂ ಶ್ರೀದಕ್ಷಿಣಾಮೂರ್ತ ಯೇ' ಎಂಬ ಪದ್ಯದ ಕೊನೆಯ ಪಲ್ಲವಿಯ ಆಧಾರದಿಂದ. ಆದರೆ ಇದನ್ನು ಸ್ತೋತ್ರ ವೆನ್ನುವದಕ್ಕಿಂತ ವೇದಾಂತಾರ್ಥವನ್ನು ಪ್ರತಿಪಾದಿಸುವ ಪ್ರಕರಣವೆಂದು ಕರೆಯು ವದೇ ಯುಕ್ತ. ಪ್ರಥಮೋಲ್ಲಾಸಸಂಗ್ರಹವೆಂಬುದಕ್ಕೆ ಒಂದನೆಯ ಉಲ್ಲಾಸದ ಸಂಕ್ಷೇಪಾರ್ಥ- ಎಂದು ಅರ್ಥವನ್ನು ಮಾಡಿಕೊಳ್ಳಬೇಕು.

# ೨. ಪರಮಾತ್ಮನ ಜಗತ್ಕಾರಣತ್ವ

## ತಾರ್ಕಿಕರ ಮತ

**ಉಪಾದಾನಂ ಪ್ರಪಞ್ಚಸ್ಯ ಸಂಯುಕ್ತಾಃ ಪರಮಾಣವಃ ।**
**ಮೃದನ್ವಿತೋ ಘಟಸ್ತಸ್ಮಾದ್ ಭಾಸತೇ ನೇಶ್ವರಾನ್ವಿತಃ ॥ ೧ ॥**
**ಪರಮಾಣುಗತಾ ಏವ ಗುಣಾ ರೂಪರಸಾದಯಃ ।**
**ಕಾರ್ಯೇ ಸಮಾನಜಾತೀಯಮಾರಭನ್ತೇ ಗುಣಾನ್ತರಮ್ ॥ ೨ ॥**
**ಕಾರ್ಯಂ ಯತ್ರ ಸಮನ್ವೇತಿ ಕಾರಣಂ ಸಮವಾಯಿ ತತ್ ।**
**ಚಕ್ರಾದ್ಯಂ ಸಾಧನಂ ಯತ್ತು ಘಟಸ್ಯಾಸಮವಾಯಿ ತತ್ ॥ ೩ ॥**
**ಸಮವಾಯಿನಿ ತಿಷ್ಠೇದ್ ಯದ್ ಸಮವಾಯ್ಯಾಶ್ರಯೇ ತಥಾ ।**
**ಕಾರ್ಯೇಽವಧೃತಸಾಮರ್ಥ್ಯಂ ಕಲ್ಪ್ಯತೇಽಸಮವಾಯಿ ತತ್ ॥ ೪ ॥**
**ನಿಮಿತ್ತಂ ಕಾರಣಂ ತೇಷಾಮೀಶ್ವರಶ್ಚ ಕುಲಾಲವತ್ ।**
**ಯತ್ಕಾರ್ಯಂ ಜಾಯತೇ ಯಸ್ಮಾತ್ ತಸ್ಮಿನ್ ತತ್ಪ್ರತಿತಿಷ್ಠತಿ ॥ ೫ ॥**
**ಮೃತ್ತಿಕಾಯಾಂ ಘಟಸ್ತನ್ತೌ ಪಟಃ ಸ್ವರ್ಣೇಽಙ್ಗುಲೀಯಕಮ್ ।**
**ಇತಿ ವೈಶೇಷಿಕಾಃ ಪ್ರಾಹುಸ್ತಥಾ ನೈಯಾಯಿಕಾ ಅಪಿ ॥ ೬ ॥**

೧–೬. (ಒಂದರೊಡನೊಂದು) ಸಂಯೋಗವಾಗಿರುವ ಪರಮಾಣುಗಳು ಪ್ರಪಂಚಕ್ಕೆ ಉಪಾದಾನವು. ಆದ್ದರಿಂದ ಗಡಿಗೆಯು ಮಣ್ಣಿನಿಂದ ಕೂಡಿಕೊಂಡು ತೋರುತ್ತಿರುವದೇ ಹೊರತು ಈಶ್ವರನಿಂದ ಕೂಡಿಕೊಂಡು (ತೋರು)ತ್ತಿರುವದಿಲ್ಲ. ಪರಮಾಣುವಿನವೇ ಆದ ರೂಪರಸಾದಿಗುಣಗಳು ಕಾರ್ಯದಲ್ಲಿ ತಮಗೆ ಸಮಾನವಾದ ಜಾತಿಯಲ್ಲಿರುವ ಬೇರೆಯ ಗುಣಗಳನ್ನು ಆರಂಭಿಸುವವು. ಕಾರ್ಯವು ಏತರಲ್ಲಿ ಆಶ್ರಯಿಸಿಕೊಂಡಿರುವದೋ ಅದು **ಸಮವಾಯಿಕಾರಣವು.** ಆದರೆ ಚಕ್ರವೇ ಮುಂತಾದ ಸಾಧನವುಂಟಲ್ಲ, ಅದು **ಅಸಮವಾಯಿ ಕಾರಣವು.** ಯಾವದು ಸಮವಾಯಿಕಾರಣದಲ್ಲಿಯೇ ಇದ್ದುಕೊಂಡು, ಹಾಗೆಯೇ ಸಮವಾಯಿಕಾರಣದ ಆಶ್ರಯದಲ್ಲಿದ್ದುಕೊಂಡು, ಕಾರ್ಯವನ್ನುಂಟುಮಾಡುವದರಲ್ಲಿ ಶಕ್ತವಾಗಿರುವದೆಂದು ನಿಶ್ಚಿತವಾಗಿ ಕಲ್ಪಿಸಬಹುದೋ ಅದು **ಅಸಮವಾಯಿಕಾರಣವು.** ಆ (ಕಾರ್ಯಗಳಿಗೆ) ಈಶ್ವರನೂ ಕುಂಬಾರನಂತೆ **ನಿಮಿತ್ತಕಾರಣವು**

ಯಾವ ಕಾರ್ಯವು ಯಾವದರಿಂದ ಹುಟ್ಟುತ್ತದೆಯೋ ಆ (ಕಾರಣ) ದಲ್ಲಿ ಆ (ಕಾರ್ಯವು) ಆಶ್ರಯಿಸಿಕೊಂಡು ನಿಂತಿರುತ್ತದೆ.( ಹೇಗೆಂದರೆ) ಗಡಿಗೆಯು ಮಣ್ಣಿನಲ್ಲಿ, ಬಟ್ಟೆಯು ನೂಲಿನಲ್ಲಿ, ಉಂಗುರವು ಚಿನ್ನದಲ್ಲಿ (ಹೇಗೆ) ಆಶ್ರಿತವಾಗಿರುತ್ತವೆಯೋ (ಹಾಗೆ).

ಹೀಗೆಂದು **ವೈಶೇಷಿಕರು** ಹೇಳುತ್ತಿರುತ್ತಾರೆ, ಹಾಗೆಯೇ **ನೈಯಾಯಿಕರೂ** (ಹೇಳುತ್ತಿರುತ್ತಾರೆ).

## ವಿವೇಚನೆ

ವೈಶೇಷಿಕರು ಜಗತ್ಕಾರಣವು ಯಾವದೆಂಬುದನ್ನು ಗೊತ್ತುಮಾಡುವದಕ್ಕೆ ಆರಂಭವಾದವನ್ನು ಅವಲಂಬಿಸಿರುತ್ತಾರೆ. ವೇದಾಂತಿಗಳು 'ಪ್ರಕೃತಿ' ಅಥವಾ 'ಉಪಾದಾನಕಾರಣ'- ಎಂದುಕರೆಯುವದನ್ನು ಅವರು 'ಸಮವಾಯಿಕಾರಣ'ವೆನ್ನುತ್ತಾರೆ. ಈಶ್ವರನು ಉಪಾದಾನಕಾರಣವಾಗಿದ್ದರೆ ಮಣ್ಣಿನಿಂದ ಕೂಡಿಯೇ ಗಡಿಗೆಯಾಗಿರುವಂತೆ ಈಶ್ವರನಿಂದ ಕೂಡಿಕೊಂಡೇ ಜಗತ್ತು ತೋರಬೇಕಾಗಿತ್ತು. ಆದರೆ ಹಾಗೇನೂ ಇಲ್ಲ. ಮಣ್ಣಿನಿಂದ ಕೂಡಿಯೇ ಗಡಿಗೆಯೇ ಮುಂತಾದವು ತೋರುತ್ತಿರುವಂತೆ ಜಗತ್ತು ಪರಮಾಣುಗಳಿಂದಾಗಿರುವ ಪೃಥಿವ್ಯಾದಿಗಳಿಂದ ಕೂಡಿಕೊಂಡೇ ಕಾಣುತ್ತಿರುತ್ತದೆ.

ಕಾರ್ಯಕ್ಕೆ (೧) **ಸಮವಾಯಿಕಾರಣ** (ಯಾವದರಿಂದ ಕೂಡಿಕೊಂಡೇ ಕಾರ್ಯವುಂಟಾಗುವದೋ ಅದು) (೨) ಸಮವಾಯಿಕಾರಣವನ್ನಾಶ್ರಯಿಸಿಕೊಂಡಿರುವ ನೂಲನ್ನಾಶ್ರಯಿಸಿಕೊಂಡಿರುವ ತಂತುಸಂಯೋಗದಂತೆ (ಅಥವಾ ಸಮವಾಯಿಯ ಆಶ್ರಯದಲ್ಲಿ (ನೂಲಿನ ಬಣ್ಣವೇ ಮುಂತಾದದ್ದು ಬಟ್ಟೆಯಲ್ಲಿಯೂ ಇರುವಂತೆ) ಇದ್ದುಕೊಂಡಿರುವ, ಮತ್ತು ಕಾರ್ಯವನ್ನುಂಟುಮಾಡುವದಕ್ಕೆ ಅವಶ್ಯವಾಗಿರುವ **ಅಸಮವಾಯಿಕಾರಣ**- ಇವೆರಡಕ್ಕಿಂತ ಭಿನ್ನವಾಗಿ (೩) ಕಾರ್ಯೋತ್ಪತ್ತಿಗೆ ಸಾಧಾರಣವಾಗಿ ಬೇಕಾಗಿರುವ **ನಿಮಿತ್ತಕಾರಣ** ಎಂದು ಮೂರು ಕಾರಣಗಳು ಇವೆ.

ಹೀಗೆ ಸಮವಾಯಿ, ಅಸಮವಾಯಿ, ನಿಮಿತ್ತ- ಎಂಬ ಮೂರು ಕಾರಣಗಳೊಳಗೆ ಈಶ್ವರನು ಸಕಲಕಾರಣಗಳಿಗೂ ಸಾಧಾರಣವಾಗಿ ಬೇಕಾಗಿರುವ ನಿಮಿತ್ತಕಾರಣನಾಗಿರುತ್ತಾನೆ. ಗಡಿಗೆಯು ಹುಟ್ಟುವದಕ್ಕೆ ಮಣ್ಣು, ಮಣ್ಣಿನ ರೂಪಾದಿಗಳು- ಇವುಗಳಂತೆಯೇ, ಕೋಲು, ತಿಗರಿ- ಮುಂತಾದವುಗಳಂತೆಯೇ, ಕುಂಬಾರನೇ ಮುಂತಾದ ನಿಮಿತ್ತಕಾರಣವೂ ಇರಬೇಕಷ್ಟೆ? ಈ ರೀತಿಯಲ್ಲಿ ಈಶ್ವರನು ಜಗತ್ತಿಗೆ ನಿಮಿತ್ತಕಾರಣವೇ ಹೊರತು ಸಮವಾಯಿ(ಉಪಾದಾನ)ಕಾರಣವಲ್ಲ

ಎಂಬುದು **ವೈಶೇಷಿಕರ ವಾದ.** ಈ ವಾದವನ್ನು ಒಪ್ಪಿಯೇ ನೈಯಾಯಿಕರೂ ಪ್ರಮಾಣಪ್ರಮೇಯಾದಿಗಳ ಪ್ರತಿಪಾದನೆಗೆ ಹೊರಟಿರುತ್ತಾರೆ. ಸಮವಾಯಿಕಾರಣ ವನ್ನು ಆಶ್ರಯಿಸಿಕೊಂಡೇ ಕಾರ್ಯವು ಇರುತ್ತದೆಯೇ ಹೊರತು ನಿಮಿತ್ತಕಾರಣ ವನ್ನಲ್ಲ; ಆದ್ದರಿಂದ ಪರಮಾಣುಗಳಿಂದಲೇ ಉಂಟಾಗಿ ಅವುಗಳನ್ನು ಆಶ್ರಯಿಸಿ ಕೊಂಡೇ ಇರುತ್ತದೆ, ಈಶ್ವರನನ್ನಾಶ್ರಯಿಸಿಕೊಂಡಿರುವದಿಲ್ಲ- ಎಂಬುದು ಅವರ ಆಶಯ.

## ಸಾಂಖ್ಯರ ದರ್ಶನ

**ರಜಸ್ಸತ್ತ್ವಂ ತಮಶ್ಚೇತಿ ಪ್ರಧಾನಸ್ಯ ಗುಣಾಸ್ತ್ರಯಃ ।**
**ರಜೋ ರಕ್ತಂ ಚಲಂ ತೇಷು ಸತ್ತ್ವಂ ಶುಕ್ಲಂ ಪ್ರಕಾಶಕಮ್ ॥ ೭ ॥**
**ತಮಃ ಕೃಷ್ಣಂ ಚಾವರಕಂ ಸೃಷ್ಟಿಸ್ಥಿತ್ಯನ್ತಹೇತವಃ ।**
**ಇತಿ ಸಾಙ್ಖ್ಯಾಶ್ಚ ಭಾಷನ್ತೇ ತೇಷಾಂ ದೂಷಣಮುಚ್ಯತೇ ॥ ೮ ॥**

೭-೮. ರಜಸ್ಸು, ಸತ್ತ್ವ, ತಮಸ್ಸು- ಎಂದು ಪ್ರಧಾನಕ್ಕೆ ಮೂರು ಗುಣಗಳು. ಅವುಗಳಲ್ಲಿ ರಜಸ್ಸು ಕೆಂಪು, ಚಂಚಲವಾದದ್ದು ; ಸತ್ತ್ವವು ಬಿಳಿದು; ಬೆಳಗಿತೋರಿಸತಕ್ಕದ್ದು. ತಮಸ್ಸು ಕಪ್ಪು, ಮುಸುಕಿ ಕೊಳ್ಳುವ ಸ್ವಭಾವದ್ದು. ಇವು ಸೃಷ್ಟಿ, ಸ್ಥಿತಿ, ಪ್ರಲಯ- ಇವುಗಳಿಗೆ ಕಾರಣವಾಗಿರುತ್ತವೆ-ಹೀಗೆಂದು **ಸಾಂಖ್ಯರು** ಹೇಳುತ್ತಿರುವರು.

ಅವರ ಮತದ ದೂಷಣವನ್ನು ಮುಂದಿನ ಶ್ಲೋಕದಲ್ಲಿ ಹೇಳಲಾಗುವದು.

## ವಿವೇಚನೆ

ಇಲ್ಲಿರುವ ವೈಶೇಷಿಕರ ಮತ್ತು ಸಾಂಖ್ಯರ ಪ್ರಕ್ರಿಯೆಗಳ ವಿವರಣೆಯು ಅಷ್ಟು ಸ್ಪಷ್ಟವಾಗಿಲ್ಲ. ಸಾಂಖ್ಯರ ಪ್ರಕ್ರಿಯೆಯಲ್ಲಿ ಶ್ವೇತಾಶ್ವತರೋಪನಿಷತ್ತಿನಲ್ಲಿರುವ '**अजामेकां लोहितशुक्लकृष्णां बह्वीः प्रजाः सृजमानां सरूपाः । अजो ह्येको जुषमाणोऽनुशेते जहात्येनां भुक्तभोगामजोऽन्यः ॥** ' (ಶ್ವೇ. ೪-೫)-ಎಂಬ ಮಂತ್ರ ವನ್ನು ಅಕ್ಷರಶಃ ಅನುಸರಿಸಿ ಇಲ್ಲಿ ಗುಣಗಳನ್ನು ವಿವರಿಸಿದೆ. ಇವುಗಳು ಕ್ರಮವಾಗಿ ಸೃಷ್ಟಿಸ್ಥಿತಿಲಯಗಳಿಗೆ ಕಾರಣವೆಂದು ವರ್ಣಿಸಿರುವದು ಸರಿ ಎಂತ ತೋರುತ್ತಿಲ್ಲ. ಮೂರು ಗುಣಗಳ ಸಾಮ್ಯಾವಸ್ಥೆಯೇ ಪ್ರಲಯವೆಂದೂ ಗುಣಗಳ ವೈಷಮ್ಯದಿಂದ ಸೃಷ್ಟಿಯಾಗುವದೆಂದೂ ಸಾಂಖ್ಯರು ಹೇಳುತ್ತಾರೆ.

**ಬೀಜಸ್ಯಾಂತರಿವಾಙ್ಕುರೋ ಜಗದಿದಂ ಪ್ರಾಙ್ನಿರ್ವಿಕಲ್ಪಂ ಪುನ-**
**ರ್ಮಾಯಾಕಲ್ಪಿತದೇಶಕಾಲಕಲನಾವೈಚಿತ್ರ್ಯಚಿತ್ರೀಕೃತಮ್ ।**
**ಮಾಯಾವೀವ ವಿಜೃಮ್ಭಯತ್ಯಪಿ ಮಹಾಯೋಗೀವ ಯಃ ಸ್ವೇಚ್ಛಯಾ**
**ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ ಶ್ರೀದಕ್ಷಿಣಾಮೂರ್ತಯೇ ॥**

೨. ಬೀಜದ ಒಳಗೆ ಅಂಕುರವಿರುವಂತೆ ಮೊದಲು ನಿರ್ವಿಕಲ್ಪ ವಾಗಿದ್ದು ಬಳಿಕ ಮಾಯೆಯಿಂದ ಆಗಿರುವ ದೇಶಕಾಲನಿಮಿತ್ತಗಳೆಂಬ ವೈಚಿತ್ರ್ಯದಿಂದ ಬಗೆಬಗೆಯಾಗುವ ಈ ಜಗತ್ತನ್ನು – ಮಾಯಾವಿ ಯಂತೆಯೂ ಮಹಾಯೋಗಿಯಂತೆಯೂ– ತನ್ನ ಇಚ್ಛಾಮಾತ್ರದಿಂದ ಯಾವನು ಹೊರಹೊಮ್ಮಿಸುವನೋ ಆ ಗುರುಮೂರ್ತಿಯಾದ ಶ್ರೀದಕ್ಷಿಣಾಮೂರ್ತಿಗೆ ನಮಸ್ಕಾರ !

**ವಿವೇಚನೆ**

ಈ ಶ್ಲೋಕವು ಸಾಂಖ್ಯಾದಿಗಳ ಮತದ ದೂಷಣೆಗಾಗಿ ಹೊರಟಿರುವಂತೆ ಮಾನಸೋಲ್ಲಾಸಕಾರರು ಇವಕ್ಕೆ ಅವತರಣಿಕೆಯನ್ನು ಬರೆದಿರುತ್ತಾರೆ.

## ಇತರಮತದೂಷಣಪೂರ್ವಕವಾಗಿ ಸಿದ್ಧಾಂತವರ್ಣನೆ

**ಅಸ್ಯಾಯಮಭಿಪ್ರಾಯಃ–**
**ಅಙ್ಕುರಾದಿಫಲಾನ್ತೇಷು ಕಾರ್ಯೇಷ್ವಸ್ತಿತ್ವಮಿಷ್ಯತೇ ।**
**ಕುತ ಆಗತ್ಯ ಸಂಬದ್ಧಾ ವಟಬೀಜೇಷು ತೇ ಕಣಾಃ ॥ ೯ ॥**

೯. ಮೊಳಕೆಯಿಂದ ಮೊದಲು ಮಾಡಿ ಹಣ್ಣಿನವರೆಗೂ ಇರುವ ಕಾರ್ಯಗಳಲ್ಲಿ ಅಸ್ತಿತ್ವವು ಇರುವದು (ಎಲ್ಲರಿಗೂ) ಸಮ್ಮತ ವಾಗಿದೆ, ಆಲದಬೀಜಗಳಲ್ಲಿ ಆ ಪರಮಾಣುಗಳು ಎಲ್ಲಿಂದ ಬಂದು ಸೇರಿಕೊಂಡಿವೆ ?

**ವಿವೇಚನೆ**

ಕಾರ್ಯದಲ್ಲಿ ಕಾರಣದ ಗುಣಕ್ಕೆ ಸಮಾನವಾದ ಗುಣಗಳೇ ಉಂಟಾಗುತ್ತವೆ –ಎಂಬ ವೈಶೇಷಿಕನ ವಾದವನ್ನು ಅನುಭವದ ಆಧಾರದಿಂದ ನಿರಾಕರಿಸುವದಕ್ಕೆ ಆರಂಭಿಸಿದಾರೆ. ಬೀಜದಿಂದ ಮೊಳಕೆಯುಂಟಾಗಿ ಕೊನೆಗೆ ಮರವಾಗಿ ಹಣ್ಣು ಬಿಡುವವರೆಗೂ ಒಂದಕ್ಕೊಂದು ಕಾರಣವಾಗಿರುವಂತೆ ತೋರುತ್ತಿರುವದು. ಇವೆಲ್ಲವು ಗಳಲ್ಲಿಯೂ ಬೀಜದಲ್ಲಿರುವಂತೆಯೇ ಅಸ್ತಿತ್ವ (ಇರವು) ಎಂಬ ಸ್ವಭಾವವು ಕಾಣ ಬರುತ್ತದೆಯೇ ಹೊರತು ಪರಮಾಣುಗಳ ಧರ್ಮವಿಲ್ಲ. ಪರಮಾಣುಗಳ ಧರ್ಮವು ಅವುಗಳ ಕಾರ್ಯವಾಗಿರುವ ದ್ವ್ಯಣುಕದಲ್ಲಿಯೇ ಮೊದಲು ಕಾಣುವದಿಲ್ಲ. ಇನ್ನು ಮುಂದಿನ ಕಾರ್ಯಗಳಲ್ಲಿ ಅದು ತೋರುವದೆಲ್ಲಿಂದ ಬರಬೇಕು ? ಹೀಗೆ ಪರಮಾಣು

ಕಾರಣವಾದವು ಅನುಭವಕ್ಕೆ ವಿರುದ್ಧ ; ಸದ್ರೂಪನಾಗಿರುವ ಪರಮಾತ್ಮನು ಜಗತ್ಕಾರಣವೆಂಬ ವಾದವೇ ಅನುಭವಸಮ್ಮತ– ಎಂದು ಭಾವ.

**ಕಾರಣಾನುಗತಂ ಕಾರ್ಯಮಿತಿ ಸರ್ವೈಶ್ಚ ಸಮ್ಮತಮ್ ।**
**ತಸ್ಮಾತ್ ಸತ್ತಾ ಸ್ಫುರತ್ತಾ ಚ ಸರ್ವತ್ರಾಪ್ಯನುವರ್ತತೇ ॥ ೧೦ ॥**

೧೦. ಕಾರ್ಯವು ಕಾರಣದಿಂದ ಕೂಡಿಕೊಂಡಿರುವದೆಂಬುದು ಎಲ್ಲರಿಗೂ ಸಮ್ಮತವಾಗಿರುತ್ತದೆ. ಆದ್ದರಿಂದಲೇ ಸತ್ತ್ವ (ಇರವು), ಮತ್ತು ಸ್ಫುರತ್ತಾ (ತೋರುವಿಕೆ)– ಇವು ಎಲ್ಲೆಲ್ಲಿಯೂ ಅನುಸರಿಸಿ ಕೊಂಡಿರುತ್ತವೆ.

### ವಿವೇಚನೆ

ಇಲ್ಲಿ ಸಿದ್ಧಾಂತದ ವಾದವು ಸರ್ವಸಮ್ಮತವೆಂದು ತೋರಿಸುವದಕ್ಕೆ ಹೊರಟಿರುತ್ತಾರೆ. ಕಾರಣವು ತನ್ನ ಕಾರ್ಯದಲ್ಲಿ ಸೇರಿಕೊಂಡೇ ಇರುವದೆಂದು ಎಲ್ಲಾ ವಾದಿಗಳೂ ಒಪ್ಪಿರುತ್ತಾರಲ್ಲವೆ ? ಬ್ರಹ್ಮವು ಜಗತ್ತಿಗೆ ಕಾರಣವಾಗಿರುವದರಿಂದಲೇ ಅದರ ಧರ್ಮಗಳಾದ ಇರವು, ತೋರಿಕೆ– ಇವೆರಡೂ ಕಾರ್ಯವಾದ ಜಗತ್ತಿನಲ್ಲೆಲ್ಲ ಸೇರಿಕೊಂಡೇ ಇರುತ್ತವೆ. ಜಗತ್ತು ಬ್ರಹ್ಮಕ್ಕಿಂತ ವಿಲಕ್ಷಣವಾಗಿದೆಯಲ್ಲ! ಅದು ಬ್ರಹ್ಮದ ಕಾರ್ಯವೆಂದು ಹೇಗೆ ನಂಬುವದು ?– ಎಂಬ ಶಂಕೆಗೆ ಸತ್ತಾಸ್ಫುರತ್ತಿಗಳೆಂಬ ಸ್ವಭಾವಗಳು ಕಾಣಬರುತ್ತಿವೆ– ಎಂಬ ಸಮಾಧಾನವನ್ನು ಇಲ್ಲಿ ಹೇಳಿದೆ. **ಸೂತ್ರಭಾಷ್ಯ**ದಲ್ಲಿ ಸತ್ತಾಸ್ವಭಾವವೊಂದನ್ನೇ (೨-೧-೬, ಪು. ೧೮೮)ರಲ್ಲಿ ಹೇಳಿದೆ. ಇಲ್ಲಿ ತೋರಿಕೆಯನ್ನೂ ಸೇರಿಸಿಕೊಂಡಿದೆ. ಈ ವಿಷಯಕ್ಕೆ ಪೀಠಿಕೆಯನ್ನು ನೋಡಿ.

**ಪುಷ್ಪೇ ಫಲತ್ವಮಾಪನ್ನೇ ಕ್ಷೀರೇ ಚ ದಧಿತಾಂ ಗತೇ ।**
**ವಿಜಾತೀಯೌ ಪ್ರತೀಯನ್ತೇ[1] ಗುಣಾ ರೂಪರಸಾದಯಃ ॥ ೧೧ ॥**

೧೧. ಹೂವು ಹಣ್ಣಾದಾಗ, ಮತ್ತು ಹಾಲು ಮೊಸರಾದಾಗ ರೂಪ, ರಸ– ಮುಂತಾದ ವಿಜಾತೀಯಗುಣಗಳು ಕಾಣಬರುತ್ತವೆ.

### ವಿವೇಚನೆ

'ಮೊಳಕೆಯಿಂದ ಹಣ್ಣಿನವರೆಗಿನ ಕಾರ್ಯಗಳು' ಎಂದು ೯ನೆಯ ಶ್ಲೋಕದಲ್ಲಿ ಹೇಳಿದ್ದಕ್ಕೆ ವಿವರಣೆಯಿದು. ಬೀಜದಿಂದ ಮೊಳಕೆಯಾಗಿ ಮುಂದೆ ಹೂವು ಬಿಟ್ಟು ಆದರಿಂದ ಹಣ್ಣಾಗುತ್ತದೆ. ಆದರೆ ಹೂವಿನ ಗುಣಗಳ ಜಾತಿಯೇ ಬೇರೆ, ಹಣ್ಣಿನ ಗುಣಗಳ ಜಾತಿಯೇ ಬೇರೆ. ಕಾರಣಗುಣಕ್ಕೆ ಸಮಾನವಾದ ಜಾತಿಯ ಗುಣಗಳೇ ಆರಬ್ಧವಾಗಬೇಕೆಂಬ ವೈಶೇಷಿಕರ ವಾದಕ್ಕೆ ಇದು ವಿರುದ್ಧ. ಇರವು,

1. 'ಪ್ರವರ್ತನ್ತೇ' ಎಂಬ ಪಾಠಕ್ಕಿಂತ ಈ ಪಾಠವೇ ಸರಿಯಾಗಿದೆ.

ತೋರಿಕೆ- ಎಂಬ ಗುಣಗಳು ಎಲ್ಲಾ ಕಾರ್ಯಗಳಲ್ಲಿಯೂ ಇರುತ್ತವೆಯೆಂಬುದು ಮಾತ್ರ ಎಲ್ಲರೂ ಒಪ್ಪತಕ್ಕದ್ದಾಗಿದೆ. ಹಾಲು ಮೊಸರಾದಾಗಲೂ ಸಜಾತೀಯ ಗುಣಗಳುಂಟಾಗುವದಿಲ್ಲ.

**ಕಾರಣಂ ಕಾರ್ಯಮಂಶೋಽಂಶೀ ಜಾತಿವ್ಯಕ್ತೀ ಗುಣೀ ಗುಣಃ ।**
**ಕ್ರಿಯಾ ಕ್ರಿಯಾವಾನಿತ್ಯಾದ್ಯಾಃ ಪ್ರಕಾಶಸ್ಯೈವ ಕಲ್ಪನಾಃ ॥ ೧೨ ॥**

೧೨. ಕಾರಣ, ಕಾರ್ಯ; ಅಂಶ, ಅಂಶಿ; ಜಾತಿ, ವ್ಯಕ್ತಿ; ಗುಣಿ, ಗುಣ; ಕ್ರಿಯೆ, ಕ್ರಿಯೆಯುಳ್ಳದ್ದು- ಇವೇ ಮುಂತಾದವು ಪ್ರಕಾಶಕ್ಕೇ (ಮಾಡಿದ) ಕಲ್ಪನೆಗಳು.

### ವಿವೇಚನೆ

ಇಲ್ಲಿರುವ ಕಾರಣಕಾರ್ಯ- ಮುಂತಾದವುಗಳನ್ನೂ ಅವುಗಳನ್ನು ಸೇರಿಸುವ ಸಮವಾಯವೆಂಬ ನಿತ್ಯಸಂಬಂಧವನ್ನೂ ವೈಶೇಷಿಕರು ವಿಧವಿಧವಾಗಿ ವರ್ಣಿಸಿರುತ್ತಾರೆ. ಇಲ್ಲಿರುವ ಆದಿ ಎಂಬ ಮಾತಿನಿಂದ ವಿಶೇಷಣ, ವಿಶೇಷ್ಯ- ಮುಂತಾದವುಗಳನ್ನೂ ಗ್ರಹಿಸಬೇಕು. ಇಂಥ ಭೇದಗಳಿಗೆಲ್ಲ ಏಕರೂಪವಾಗಿರುವ ಬ್ರಹ್ಮವು ಹೇಗೆ ಕಾರಣವಾದೀತು ?- ಎಂದು ಶಂಕಿಸಿದರೆ ಚೈತನ್ಯಪ್ರಕಾಶದಲ್ಲಿಯೇ ಆಗಿರುವ ಕಲ್ಪನೆಗಳಿವು. ಇವು ನಿಜವಾಗಿ ಬೇರೆಯಿರುವದಿಲ್ಲ- ಎಂದು ಸಮಾಧಾನವನ್ನು ಹೇಳಿದೆ.

**ಚೈತನ್ಯಂ ಪರಮಾಣೂನಾಂ ಪ್ರಧಾನಸ್ಯಾಪಿ ನೇಷ್ಯತೇ ।**
**ಜ್ಞಾನಕ್ರಿಯೇ ಜಗತ್ಕ್ಲೃಪ್ತೌ ದೃಶ್ಯೇತೇ ಚೇತನಾಶ್ರಯೇ ॥ ೧೩ ॥**

೧೩. ಚೈತನ್ಯವು ಪರಮಾಣುಗಳಿಗಾಗಲಿ ಪ್ರಧಾನಕ್ಕಾಗಲಿ ಇರುವದೆಂದು (ಆ ವಾದಿಗಳು) ಒಪ್ಪುವದಿಲ್ಲ. ಆದರೆ ಜಗತ್ತು ಸೃಷ್ಟಿಯಾದಾಗ ಜ್ಞಾನ, ಕ್ರಿಯೆ- ಇವುಗಳು ಚೈತನ್ಯವನ್ನಾಶ್ರಯಿಸಿರುವದು ಕಂಡುಬರುತ್ತದೆ.

### ವಿವೇಚನೆ

ಪರಮಾಣುಗಳಿಗಾಗಲಿ, ಪ್ರಧಾನಕ್ಕಾಗಲಿ ಜ್ಞಾನವಿದೆಯೆಂದು ವೈಶೇಷಿಕರಾಗಲಿ ಸಾಂಖ್ಯರಾಗಲಿ ತಾವೇ ಒಪ್ಪುವದಿಲ್ಲ. ಹೀಗಿರುವಾಗ ಪರಿಮಾಣುಗಳು ಜಗತ್ತನ್ನು ಸೃಷ್ಟಿಮಾಡಬೇಕೆಂಬ ಅರಿವಾಗಲಿ, ಸೃಷ್ಟಿಯನ್ನು ಮಾಡುವ ಕ್ರಿಯೆಯಾಗಲಿ ಅವುಗಳಲ್ಲಿ ಹೇಗೆ ಆಗಬೇಕು ?- ಎಂಬುದು ಶ್ಲೋಕದ ಪೂರ್ವಾರ್ಧದ ಭಾವ. ಸೂ. ಭಾ. ೨-೨-೧೨ರಲ್ಲಿ ವೈಶೇಷಿಕಮತದಲ್ಲಿ ಸೃಷ್ಟಿಗೆ ಬೇಕಾದ

ಮೊದಲನೆಯ ಕರ್ಮವಿಲ್ಲವೆಂಬುದನ್ನೂ ಪ್ರತಿಪಾದಿಸಿದೆ. ಚೈತನ್ಯವಿಲ್ಲದ ಪ್ರಧಾನವು ಜಗತ್ತನ್ನು ಸೃಷ್ಟಿಮಾಡುವದು ಆಗಲಾರದೆಂಬುದನ್ನು ಸೂ. ಭಾ. ೨-೨-೧ರಿಂದ ೮ದರವರೆಗಿನ ಸೂತ್ರಗಳಲ್ಲಿ ವಿಸ್ತಾರವಾಗಿ ಖಂಡಿಸಿರುತ್ತದೆ.

ಪರಮಾತ್ಮನಿಂದ ಜಗತ್ತು ಆಗುವದಕ್ಕೆ ಬೇಕಾದ ಜ್ಞಾನಕ್ರಿಯೆಗಳೆರಡೂ ಆವನಲ್ಲಿರುವದರಿಂದ ಯಾವ ಆಕ್ಷೇಪವೂ ಇರುವದಿಲ್ಲ- ಎಂಬುದು ಉತ್ತರಾರ್ಧದ ಅಭಿಪ್ರಾಯ. ಈ ಅಭಿಪ್ರಾಯವನ್ನು ಹಿಂದೆ (೧-೨೧ರಲ್ಲಿಯೂ) ಸೂಚಿಸಿತ್ತು. ಇಲ್ಲಿ ಸಾಂಖ್ಯವೈಶೇಷಿಕರ ಮತಕ್ಕೂ ಸಿದ್ಧಾಂತಕ್ಕೂ ಇರುವ ವೈಲಕ್ಷಣ್ಯವನ್ನು ಸ್ಫುಟಗೊಳಿಸುವದಕ್ಕಾಗಿ ಮತ್ತೆ ಹೇಳಿದೆ.

**ಕಾಲರೂಪಕ್ರಿಯಾಶಕ್ತ್ಯಾ ಕ್ಷೀರಾತ್ ಪರಿಣಮೇದ್ದಧಿ ।**
**ಜ್ಞಾತೃಜ್ಞಾನಜ್ಞೇಯರೂಪಂ ಜ್ಞಾನಶಕ್ತ್ಯಾ ಭವೇಜ್ಜಗತ್ ॥ ೧೪ ॥**

೧೪. ಕಾಲರೂಪವಾದ ಕ್ರಿಯಾಶಕ್ತಿಯಿಂದ ಹಾಲಿನಿಂದ ಪರಿಣಾಮವಾಗಿ ಮೊಸರಾಗುತ್ತದೆ. ಜ್ಞಾನಶಕ್ತಿಯಿಂದ ಜ್ಞಾತೃ, ಜ್ಞಾನ, ಜ್ಞೇಯ- (ಈ ಮೂರರ ರೂಪವಾಗಿ ವಿಭಕ್ತವಾಗಿರುವ) ಜಗತ್ತು ಆಗುವದು.

## ವಿವೇಚನೆ

ಪರಮಾಣುಗಳಲ್ಲಿಯಾಗಲಿ ಪ್ರಧಾನದಲ್ಲಾಗಲಿ ಚೈತನ್ಯವಿಲ್ಲದ್ದರಿಂದ ಅದರಿಂದ ಜಗತ್ತುಂಟಾಗಲಾರದೆಂದು ಹೇಳಿದ್ದಾಯಿತಷ್ಟೆ? ಪರಮಾತ್ಮನಲ್ಲಿ ಜ್ಞಾನಶಕ್ತಿ, ಕ್ರಿಯಾಶಕ್ತಿ- ಎರಡೂ ಇರುವದರಿಂದ ಜಗತ್ತಿನಲ್ಲಿ ಅವು ತೋರಬಹುದು- ಎಂದು ಸಿದ್ಧಾಂತದಲ್ಲಿರುವ ವೈಲಕ್ಷಣ್ಯವನ್ನು ಇಲ್ಲಿ ಹೇಳಿದೆ. ಹಾಲು ಮೊಸರಾಗುವಾಗ ಹಾಲಿನಲ್ಲಿ ಕ್ರಿಯಾಶಕ್ತಿಯಿದೆ ಎಂಬುದಕ್ಕೆ ಯಾವ ಪ್ರಮಾಣವಿದೆ?- ಎಂದು ಪ್ರತಿವಾದಿಯು ಶಂಕಿಸಬಹುದಾದ್ದರಿಂದ ಕಾಲರೂಪವಾಗಿರುವದೇ ಕ್ರಿಯಾಶಕ್ತಿ; ಕಾಲಾಧಾರದಿಂದಲೇ ಅಲ್ಲವೆ, ಪರಿಣಾಮವಾಗುತ್ತಿರುವದು?- ಎಂಬ ಸಂಭಾವನಾ ಯುಕ್ತಿಯನ್ನು ಕೊಟ್ಟಿದೆಯೆಂದು ಕಾಣುತ್ತದೆ. ಬ್ರಹ್ಮದಲ್ಲಿ ಜ್ಞಾನಕ್ರಿಯಾಶಕ್ತಿಗಳು ಇರುವದರಿಂದ ಹಾಲು ಮತ್ತೊಂದು ಸಹಾಯವನ್ನು ಬಯಸದೆ ಮೊಸರಾಗುವಂತೆ, ವಿಚಿತ್ರಶಕ್ತಿಗಳುಳ್ಳ ಬ್ರಹ್ಮವು ಚಿತ್ರವಿಚಿತ್ರವಾದ ಜಗತ್ತಾಗಬಹುದು ಎಂಬ ಆಶಯವೂ ಇರಬಹುದು. (ಸೂ. ಭಾ. ೨-೧-೨೪ನ್ನು ನೋಡಿ).

**ಜ್ಞಾನಂ ದ್ವಿಧಾ ವಸ್ತುಮಾತ್ರದ್ಯೋತಕಂ ನಿರ್ವಿಕಲ್ಪಕಮ್ ।**
**ಸವಿಕಲ್ಪಂ ತು ಸಂಜ್ಞಾದಿದ್ಯೋತಕತ್ವಾದನೇಕಧಾ ॥ ೧೫ ॥**
**ಸಂಕಲ್ಪಸಂಶಯಭ್ರಾನ್ತಿಸ್ಮೃತಿಸಾದೃಶ್ಯನಿಶ್ಚಯಾಃ ।**
**ಊಹೋಽನಧ್ಯವಸಾಯಶ್ಚ ತಥಾನ್ಯೇಽನುಭವಾ ಅಪಿ ॥ ೧೬ ॥**

೧೫–೧೬. ಜ್ಞಾನವು ಎರಡು ಬಗೆ. ಬರಿಯ ವಸ್ತುವನ್ನೇ ತಿಳಿಯಪಡಿಸುವದು ನಿರ್ವಿಕಲ್ಪಕ; ಸವಿಕಲ್ಪಕವಾದರೋ ನಾಮವೇ ಮುಂತಾದವುಗಳನ್ನು ತಿಳಿಯಪಡಿಸುವದರಿಂದ ಅನೇಕವಿಧವಾಗಿರುತ್ತದೆ. ಮತ್ತು ಸಂಕಲ್ಪ, ಸಂಶಯ, ಭ್ರಾಂತಿ, ಸ್ಮೃತಿ, ಸಾದೃಶ್ಯ, ನಿಶ್ಚಯ, ಊಹಿಸುವದು, ಹೀಗೆಯೇ ಎಂದು ನಿಶ್ಚಯಿಸದೆ ಇರುವದು– ಇಂಥ ಅನುಭವಗಳೂ (ಸವಿಕಲ್ಪಕ).

## ವಿವೇಚನೆ

ಯಾವ ವಿಶೇಷವನ್ನೂ ತಿಳಿಯಿಸದೆ ವಸ್ತುಮಾತ್ರವನ್ನು ತಿಳಿಯಿಸುವ ಜ್ಞಾನವು **ನಿರ್ವಿಕಲ್ಪಕ.** ನಾಮರೂಪಕರ್ಮಾದಿಗಳನ್ನು ಇಂಥದ್ದೆಂದು ವಿಶೇಷರೂಪದಿಂದ ತಿಳಿಯಿಸುವ ಜ್ಞಾನವು **ಸವಿಕಲ್ಪಕ.** ಪದಾರ್ಥವು ಇಂಥಿಂಥದ್ದು ಎಂದು ಕಲ್ಪಿಸುವ **ಸಂಕಲ್ಪ;** ಹೀಗೋ, ಹಾಗೋ ?– ಎಂದು ತೂಗಾಡುವ **ಸಂಶಯ,** ವಸ್ತುವನ್ನು ಬೇರೆಯ ವಿಧದಿಂದಲೇ ತಿಳಿಯಿಸುವ **ಭ್ರಾಂತಿ,** ಹಿಂದೆ ಆಗಿರುವದನ್ನು ನೆನಪಿಸಿಕೊಳ್ಳುವ **ಸ್ಮೃತಿ,** ಇದರಂತೆ ಅದು ಎಂದು ಹೋಲಿಸುವ **ಸಾದೃಶ್ಯ,** ವಸ್ತುವನ್ನು ಇದ್ದದ್ದು ಇದ್ದಂತೆ ನಿಶ್ಚಯಿಸುವ **ನಿಶ್ಚಯ,** ಹೀಗಿರಬೇಕೆಂದು ಕಲ್ಪಿಸುವ **ಊಹೆ,** ಯಾವದನ್ನೂ ನಿಶ್ಚಯಿಸದೆ ಇರುವ **ಅನಿಶ್ಚಯ**– ಮುಂತಾದ ಅನುಭವಗಳು **ಸವಿಕಲ್ಪಕಜ್ಞಾನದ** ಭೇದಗಳು. ಹೀಗೆ ಮಾಡುವೆನೆಂಬ ಜ್ಞಾನವೇ ಸಂಕಲ್ಪವೆಂದು ಕೆಲವರು ವಿವರಿಸಿದ್ದಾರೆ. ಅದು ಕ್ರಿಯಾರೂಪವಾದ್ದರಿಂದ ಅದನ್ನು ಸವಿಕಲ್ಪಕಜ್ಞಾನವೆನ್ನುವದು ಯುಕ್ತವಲ್ಲವೆಂದು ನಮ್ಮ ಅಭಿಪ್ರಾಯ.

## ಪ್ರಮಾಣಭೇದಗಳು

**ಪ್ರತ್ಯಕ್ಷಮೇಕಂ ಚಾರ್ವಾಕಾಃ ಕಣಾದಸುಗತೌ ಪುನಃ ।**
**ಅನುಮಾನಂ ಚ ತಚ್ಚಾಪಿ ಸಾಙ್ಖ್ಯಾಃ ಶಬ್ದಂ ಚ ತೇ ಅಪಿ ॥ ೧೭ ॥**
**ನ್ಯಾಯೈಕದೇಶಿನೋಽಪ್ಯೇವಮುಪಮಾನಂ ಚ ಕೇಚನ ।**
**ಅರ್ಥಾಪತ್ತ್ಯಾ ಸಹೈತಾನಿ ಚತ್ವಾರ್ಯಾಹ ಪ್ರಭಾಕರಃ ॥ ೧೮ ॥**
**ಅಭಾವಷಷ್ಠಾನ್ಯೇತಾನಿ ಭಾಟ್ಟಾ ವೇದಾನ್ತಿನಸ್ತಥಾ ।**
**ಸಂಭವೈತಿಹ್ಯಯುಕ್ತಾನಿ ತಾನಿ ಪೌರಾಣಿಕಾ ಜಗುಃ ॥ ೧೯ ॥**

೧೭–೧೯. ಚಾರ್ವಾಕರು **ಪ್ರತ್ಯಕ್ಷವೊಂದೇ** (ಪ್ರಮಾಣವೆಂದೂ) ಕಣಾದನೂ ಬುದ್ಧನೂ ಆ (ಪ್ರತ್ಯಕ್ಷ)ವನ್ನೂ **ಅನುಮಾನವನ್ನೂ,** ಸಾಂಖ್ಯರು ಅವೆರಡನ್ನೂ ಮತ್ತು **ಶಬ್ದವನ್ನೂ** ನ್ಯಾಯಮತದವರಲ್ಲಿ ಕೆಲವರೂ ಹೀಗೆಯೇ (ಪ್ರಮಾಣವೆನ್ನುವರು). ಮತ್ತೆ ಕೆಲವರು

(ನೈಯಾಯಿಕರು) **ಉಪಮಾನ**ವನ್ನೂ (ಪ್ರಮಾಣವೆನ್ನುತ್ತಾರೆ). ಪ್ರಭಾಕರ(ನೆಂಬ ಮೀಮಾಂಸಕನು) **ಅರ್ಥಾಪತ್ತಿ**ಯೊಡನೆ ಈ ನಾಲ್ಕನ್ನೂ (ಪ್ರಮಾಣವೆಂದು) ಹೇಳುತ್ತಾನೆ. ಭಾಟ್ಟರು **ಅಭಾವ**ವನ್ನು ಆರನೆಯದಾಗಿಟ್ಟುಕೊಂಡು ಈ (ಐದನ್ನೂ ಹೇಗೆ ಪ್ರಮಾಣವೆನ್ನುತ್ತಾರೋ) ವೇದಾಂತಿಗಳೂ (ಹಾಗೆಯೇ ಹೇಳುತ್ತಾರೆ). **ಸಂಭವ, ಐತಿಹ್ಯ** (ಇವೆರಡನ್ನೂ) ಸೇರಿಸಿಕೊಂಡು ಆ (ಆರನ್ನೂ ಪ್ರಮಾಣವೆಂದು ಪೌರಾಣಿಕರು ಹೇಳುತ್ತಾರೆ.

## ವಿವೇಚನೆ

ಸವಿಕಲ್ಪಕಜ್ಞಾನವನ್ನೇ ವಿಧವಿಧವಾಗಿ ಹೇಳಬೇಕಾದ ಪ್ರಸಂಗದಿಂದ ಇಲ್ಲಿ ಪ್ರಮಾಣಭೇದಗಳನ್ನು ಹೇಳುತ್ತಿದಾರೆ. ಚಾರ್ವಾಕರಿಂದ ಹಿಡಿದು ಪೌರಾಣಿಕರ ವರೆಗೆ ಪ್ರಮಾಣಗಳ ಸಂಖ್ಯೆ ಹೆಚ್ಚುತ್ತದೆ. ಒಟ್ಟನಲ್ಲಿ ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ, ಅಭಾವ, ಸಂಭವ, ಐತಿಹ್ಯ- ಎಂದು ಎಂಟು ಪ್ರಮಾಣಗಳಾಗುವವು.

ಇಲ್ಲಿ ಅರ್ಥಾಪತ್ತಿ ಎಂದರೆ (ಲೋಕದಲ್ಲಿ ಕಂಡದ್ದು ಹೊಂದುವದಕ್ಕಾಗಿ ಇನ್ನೊಂದನ್ನು ಕಲ್ಪಿಸುವ) **ದೃಷ್ಟಾರ್ಥಾಪತ್ತಿ** ; ವಾಕ್ಯದಲ್ಲಿ ಒಂದನ್ನು ಹೇಳಿರುವದರಿಂದ ಇನ್ನೊಂದನ್ನು ಕಲ್ಪಿಸುವದು ಎಂಬ) **ಶ್ರುತಾರ್ಥಾಪತ್ತಿ**. **ಅಭಾವ**ವೆಂದರೆ ಯೋಗ್ಯವಾಗಿರುವ ಯಾವ ಪ್ರಮಾಣಕ್ಕೂ ಸಿಕ್ಕದೆ ಇರುವದರಿಂದ ಪದಾರ್ಥವು ಇಲ್ಲವೆಂದು ತೋರಿಸುವ ಪ್ರಮಾಣವು. **ಸಂಭವ**ವೆಂದರೆ ನೂರರಲ್ಲಿ ಐವತ್ತು ಇರುವದು ಸಂಭಾವಿತವಾಗಿದೆ ಎಂಬಂತೆ ಕಲ್ಪಿಸುವದು. **ಐತಿಹ್ಯ**ವೆಂದರೆ 'ಈ ಮರದಲ್ಲಿ ದೆವ್ವವಿದೆ' ಎಂದು ಜನರು ಆಡಿಕೊಳ್ಳುವಂತೆ ನಂಬಿಕೆಯ ಆಧಾರವೆಂಬ ಪ್ರಮಾಣ.

ಇಲ್ಲಿ ವೇದಾಂತಿಗಳೂ ಆರು ಪ್ರಮಾಣಗಳನ್ನು ಒಪ್ಪುತ್ತಾರೆಂದು ಹೇಳಿರುವದು, ವೇದಾಂತಿಗಳ ದರ್ಶನಕ್ಕೆ ಈ ಆರೂ ಬೇಕೆಂದು ವೇದಾಂತಿಗಳು ಒಪ್ಪುತ್ತಾರೆಂಬ ಅಭಿಪ್ರಾಯದಿಂದ ಎಂದು ತಿಳಿಯಬಾರದು. ಪ್ರತಿವಾದಿಗಳೊಡನೆ ಚರ್ಚಿಸುವಾಗ ಅವರು ಒಪ್ಪುವ ಪ್ರಮಾಣಗಳನ್ನೆಲ್ಲ ಇವರೂ ಒಪ್ಪುತ್ತಾರೆ ಎಂದಿಷ್ಟೇ ಅರ್ಥ. **ವೇದಾಂತಿಗಳ ಮತದಲ್ಲಿ ಪ್ರಮಾಣಪ್ರಮೇಯವ್ಯವಹಾರವೇ ಅವಿದ್ಯಾಪೂರ್ವಕವಾಗಿ ಆಗಿರುತ್ತದೆ** ಎಂದು ಸೂತ್ರಭಾಷ್ಯದಲ್ಲಿ ಶಂಕರಾಚಾರ್ಯರು ಹೇಳಿರುತ್ತಾರೆ.

## ಪ್ರಮೇಯಭೇದಗಳು

**ದ್ರವ್ಯಂ ಗುಣಸ್ತಥಾ ಕರ್ಮ ಸಾಮಾನ್ಯಂ ಸವಿಶೇಷಕಮ್ ।**
**ಸಮವಾಯಂ ಚ ಕಾಣಾದಾಃ ಪದಾರ್ಥಾನ್ ಷಟ್ ಪ್ರಚಕ್ಷತೇ ॥ ೨೦ ॥**

**ನವ ದ್ರವ್ಯಾಣಿ ಭೂತಾನಿ ದಿಕ್ಕಾಲಾತ್ಮಮನಾಂಸಿ ಚ ।**
**ಚತುರ್ವಿಂಶತಿರೇವ ಸ್ಯುರ್ಗುಣಾಃ ಶಬ್ದಾದಿಪಞ್ಚಕಮ್ ॥ ೨೦ ॥**
**ಪರಿಮಾಣಂ ಚ ಸಙ್ಖ್ಯಾ ಚ ದ್ವೌ ಸಂಯೋಗವಿಭಾಗಕೌ ।**
**ಸ್ವಭಾವತಃ ಪೃಥಕ್ತ್ವಂ ಚ ಗುರುತ್ವಂ ದ್ರವತಾ ಪುನಃ ॥ ೨೧ ॥**
**ಪರತ್ವಂ ಚಾಪರತ್ವಂ ಚ ಸ್ನೇಹಃ ಸಂಸ್ಕಾರ ಇತ್ಯಪಿ ।**
**ಧೀರ್ದ್ವೇಷಸುಖದುಃಖೇಚ್ಛಾಧರ್ಮಾಧರ್ಮಪ್ರಯತ್ನಕಾಃ ॥ ೨೨ ॥**

೨೦–೨೨. ಕಣಾದಮತವನ್ನು (ಒಪ್ಪುವ ವೈಶೇಷಿಕರು) ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ– ಎಂದು **ಆರು ಪದಾರ್ಥ**ಗಳಿವೆಯೆನ್ನುತ್ತಾರೆ. (ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ– ಎಂಬ) ಭೂತಗಳು, ಮತ್ತು ದಿಕ್ಕು, ಕಾಲ, ಆತ್ಮ, ಮನಸ್ಸು– ಎಂದು ಒಂಬತ್ತು **ದ್ರವ್ಯಗಳು.**

**ಗುಣಗಳು ಇಪ್ಪತ್ತನಾಲ್ಕು.** ಶಬ್ದವೇ ಮುಂತಾದ (ಎಂದರೆ ಶಬ್ದ, ಸ್ಪರ್ಶ, ರೂಪ, ರಸ, ಗಂಧ– ಎಂಬ ಐದು, **ಪರಿಮಾಣವು, ಸಂಖ್ಯೆಯು, ಸಂಯೋಗವಿಭಾಗ** ಎಂಬೆರಡು, ಸ್ವಭಾವದಿಂದಲೇ (ಬೇರೆಯಾಗಿರುವ) **ಪೃಥಕ್ತ್ವ, ಗುರುತ್ವ**(ಭಾರ), **ದ್ರವತ್ವ,** (ಹರಿದು ಚಲಿಸುವ ಗುಣ), **ಪರತ್ವ, ಅಪರತ್ವ,** (ಕಾಲದೇಶಗಳಿಂದ ದೂರ, ಅಥವಾ ಹತ್ತಿರಇರುವಿಕೆ) **ಸ್ನೇಹ** (ಜಿಡ್ಡು), ಮತ್ತು **ಸಂಸ್ಕಾರ, ಬುದ್ಧಿ, ದ್ವೇಷ, ಸುಖ, ದುಃಖ, ಇಚ್ಛೆ, ಧರ್ಮ, ಅಧರ್ಮ, ಪ್ರಯತ್ನ**– ಹೀಗೆ (ಇಪ್ಪತ್ತುನಾಲ್ಕು).

**ಸಂಸ್ಕಾರಸ್ತ್ರಿವಿಧೋ ವೇಗ ಇಷ್ವಾದೇರ್ಗತಿಕಾರಣಮ್ ।**
**ದೃಷ್ಟಶ್ರುತಾನುಭೂತಾರ್ಥಸ್ಮೃತಿಹೇತುಶ್ಚ ಭಾವನಾ ॥ ೨೪ ॥**
**ಸ್ಥಿತಸ್ಥಾಪಕತಾ ನಾಮ ಪೂರ್ವಾವಸ್ಥಿತಿಕಾರಣಮ್ ।**
**ಆಕೃಷ್ಟಶಾಖಾಭೂರ್ಜಾದೌ ಸ್ಪಷ್ಟಮೇವೋಪಲಕ್ಷ್ಯತೇ ॥ ೨೫ ॥**

೨೪–೨೫. ಸಂಸ್ಕಾರವು ಮೂರು ಬಗೆ. ಬಾಣವೇ ಮುಂತಾದವು ಚಲಿಸುವದಕ್ಕೆ ಕಾರಣವಾಗಿರುವ **ವೇಗ;** ಕಂಡ, ಕೇಳಿದ ಅಥವಾ ಅನುಭವಿಸಿದ (ವಿಷಯವನ್ನು) ನೆನಪಿಸಿಕೊಳ್ಳುವದಕ್ಕೆ ಕಾರಣವಾದದ್ದು **ಭಾವನೆ.** ಮೊದಲನೆಯ ಸ್ಥಿತಿಗೆ ಕಾರಣವಾಗಿರುವ **ಸ್ಥಿತಸ್ಥಾಪಕತೆ** ಎಂಬ ಹೆಸರಿನ (ಸಂಸ್ಕಾರವು), ಎಳೆದ (ಮರದ)

ಕೊಂಬೆಯು ಹಿಂದಕ್ಕೆ ಹೋಗುವದು ಭುಜಪತ್ರೆ ಮುಂತಾದವು ಗಳಲ್ಲಿ ಸ್ಪಷ್ಟವಾಗಿಯೇ ಕಾಣುತ್ತದೆ.

**ಉತ್ಕ್ಷೇಪಣಮವಕ್ಷೇಪೋ ಗಮನಂ ಚ ಪ್ರಸಾರಣಮ್ ।**
**ಆಕುಞ್ಚನಮಿತಿ ಪ್ರಾಹುಃ ಕರ್ಮ ಪಞ್ಚವಿಧಂ ಬುಧಾಃ ॥ ೨೬ ॥**

೨೬. **ಉತ್ಕ್ಷೇಪಣ** (ಮೇಲಕ್ಕೇರಿಸುವದು), **ಅವಕ್ಷೇಪಣ** (ಕೆಳಕ್ಕೆ ಇಳಿಯಿಸುವದು), **ಗಮನ**, (ಹೋಗುವದು), **ಪ್ರಸಾರಣ** (ಹಿಗ್ಗಿಸುವದು, ಮುಂದಕ್ಕೆ ಹಾಕುವದು), **ಆಕುಞ್ಚನ** (ಹಿಂದಕ್ಕೆ ಜಗ್ಗುವದು, ಕುಗ್ಗಿಸುವದು) –ಎಂದು ಕರ್ಮವು ಐದು ಬಗೆಯೆಂದು ಬಲ್ಲವರು ಹೇಳುತ್ತಾರೆ.

**ಸಾಮಾನ್ಯಂ ದ್ವಿವಿಧಂ ಪ್ರೋಕ್ತಂ ಪರಂ ಚಾಪರಮೇವ ಚ ।**
**ಪರಂ ಸತ್ತೈವ ಸರ್ವತ್ರ ತದನುಸ್ಯೂತವರ್ತನಮ್ ॥ ೨೭ ॥**
**ದ್ರವ್ಯತ್ವಂ ಚ ಗುಣತ್ವಾದ್ಯಂ ಸಾಮಾನ್ಯಮಪರಂ ತಥಾ ।**
**ವಿಶೇಷಾಃ ಸ್ಯುರನನ್ತಾಸ್ತೇ ವ್ಯಾವೃತ್ತಿಜ್ಞಾನಹೇತವಃ ॥ ೨೮ ॥**

೨೭–೨೮. ಸಾಮಾನ್ಯವು–ಪರವೆಂದೂ ಅಪರವೆಂದೂ–ಎರಡು ವಿಧ. ಎಲ್ಲೆಲ್ಲಿಯೂ ಹಿಂಬಾಲಿಸಿಕೊಂಡೇ ಇರುವಿಕೆ ಎಂಬ **ಸತ್ತೆಯೇ ಪರಸಾಮಾನ್ಯವು.** ದ್ರವ್ಯತ್ವ, ಗುಣತ್ವ– ಮುಂತಾದದ್ದು **ಅಪರ ಸಾಮಾನ್ಯವು.** ಇನ್ನೊಂದಲ್ಲವೆಂಬ ಜ್ಞಾನಕ್ಕೆ ಕಾರಣವಾಗಿರುವ **ವಿಶೇಷಗಳೂ,** ಎಂದರೆ ಅವು ಅನಂತವಾಗಿರುವವು.

**ರೂಪಸ್ಯೇವ ಘಟೇ ನಿತ್ಯಃ ಸಂಬನ್ಧಃ ಸಮವಾಯಕಃ ।**
**ಕಾಲಾಕಾಶದಿಗಾತ್ಮಾನೋ ನಿತ್ಯಾಶ್ಚ ವಿಭವಶ್ಚ ತೇ ॥ ೨೯ ॥**

೨೯. ಗಡಿಗೆಯಲ್ಲಿ ಬಣ್ಣಕ್ಕಿರುವ (ಸಂಬಂಧ)ದಂತೆ ನಿತ್ಯ ವಾಗಿರುವ ಸಂಬಂಧವು **ಸಮವಾಯವು.** ಕಾಲ, ಆಕಾಶ, ದಿಕ್ಕು ಗಳು, ಆತ್ಮ– ಇವೆಲ್ಲ ನಿತ್ಯವೂ ವಿಭುಗಳೂ ಆಗಿರುತ್ತವೆ (ಎಂದರೆ ಮೂರ್ತದ್ರವ್ಯಗಳೊಡನೆ ಸಂಯೋಗಸಂಬಂಧದಿಂದ ಕೂಡಿಕೊಂಡಿರು ವವು).

**ಚತುರ್ವಿಧಾಃ ಪರಿಚ್ಛಿನ್ನಾ ನಿತ್ಯಾಶ್ಚ ಪರಮಾಣವಃ ।**
**ಇತಿ ವೈಶೇಷಿಕಮತೇ ಪದಾರ್ಥಾಃ ಷಟ್ ಪ್ರಕೀರ್ತಿತಾಃ ॥ ೩೦ ॥**

೩೦. (ಪೃಥಿವಿಯೇ ಮುಂತಾದವುಗಳ) ಪರಮಾಣುಗಳು ನಾಲ್ಕು ಬಗೆಯಾಗಿ (ಒಂದಕ್ಕಿಂತ ಒಂದು) ಬೇರೆಯಾಗಿರುವವು. ಅವು ನಿತ್ಯವೂ ಆಗಿವೆ.

ಹೀಗೆ ವೈಶೇಷಿಕಮತದಲ್ಲಿ ಪದಾರ್ಥಗಳು ಆರೆಂದು ಹೇಳಿದೆ.

**ವಿವೇಚನೆ**

ಜ್ಞಾನಶಕ್ತಿಯಿಂದ ಜ್ಞಾತೃ, ಜ್ಞಾನ, ಜ್ಞೇಯರೂಪವಾದ ಜಗತ್ತು ಆಗಿದೆ ಎಂದು ಹಿಂದೆ (೧೪ನೆಯ ಶ್ಲೋಕದಲ್ಲಿ ಹೇಳಿತ್ತು). ಜ್ಞಾನದ ವಿವರವನ್ನು ತಿಳಿಯಿಸಿದ ಬಳಿಕ ಜ್ಞೇಯದ ವಿವರಣೆಗೆ ಪ್ರಾರಂಭಮಾಡಿ ಇಲ್ಲಿಯವರೆಗೆ ಜ್ಞೇಯವು ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ- ಎಂದು ಆರು ಪದಾರ್ಥಗಳೆಂದು ವೈಶೇಷಿಕರು ವಿಂಗಡಿಸಿರುತ್ತಾರೆಂದು ಹೇಳಿದ್ದಾಯಿತು. ಆದೇಕೊ, ಇಲ್ಲಿ ಅಭಾವದ ವಿಮರ್ಶೆಯನ್ನು ಮಾಡಿರುವದಿಲ್ಲ.

ಇದೇ ಜ್ಞೇಯವನ್ನು ಸಾಂಖ್ಯರು ಹೇಗೆ ವಿಂಗಡಿಸುತ್ತಾರೆಂಬುದನ್ನು ಇನ್ನು ಮುಂದೆ ಹೇಳಲಾಗುವದು.

**ಮಾಯಾ ಪ್ರಧಾನಮವ್ಯಕ್ತಮವಿದ್ಯಾಜ್ಞಾನಮಕ್ಷರಮ್ ।**
**ಅವ್ಯಾಕೃತಂ ಚ ಪ್ರಕೃತಿಸ್ತಮ ಇತ್ಯಭಿಧೀಯತೇ ॥ ೩೧ ॥**

೩೧. ಮಾಯೆ, ಪ್ರಧಾನ, ಅವ್ಯಕ್ತ, ಅವಿದ್ಯೆ, ಅಜ್ಞಾನ, ಅಕ್ಷರ, ಅವ್ಯಾಕೃತ, ಪ್ರಕೃತಿ, ತಮ- ಎಂದು (ಪ್ರಕೃತಿಯು ಬಗೆಬಗೆಯಾಗಿ) ಉಕ್ತವಾಗಿದೆ.

**ವಿವೇಚನೆ**

ಇಲ್ಲಿ ಹೇಳಿರುವಂತೆ ಸಾಂಖ್ಯರು ಪ್ರಧಾನವನ್ನು ಬೇರೆಬೇರೆಯ ಹೆಸರುಗಳಿಂದ ಒಂದೇ ಕಡೆಯಲ್ಲಿ ಹೇಳಿದ್ದಾರೆಯೆ ?-ಎಂಬುದನ್ನು ಮೂಲಗ್ರಂಥಗಳ ಅವಲೋಕನದಿಂದ ನಿಶ್ಚಯಿಸಬೇಕು. **ಪಂಚಪಾದಿಕೆಯಲ್ಲಿ** ಇವನ್ನೆಲ್ಲ **'ಅವಿದ್ಯಾಶಕ್ತಿ'** ಎಂಬ ಹೆಸರಿನಿಂದ ವರ್ಣಿಸಿರುವದನ್ನು ಇಲ್ಲಿ ಮನಸ್ಸಿಗೆ ತಂದುಕೊಳ್ಳಬೇಕು.

**ಮಾಯಾಯಾಂ ಬ್ರಹ್ಮಚೈತನ್ಯಪ್ರತಿಬಿಮ್ಬಾನುಷಙ್ಗತಃ ।**
**ಮಹತ್ಕಾಲಪುಮಾಂಸಃ ಸ್ಯುರ್ಮಹತ್ತತ್ತ್ವಾದಹಙ್ಕೃತಿಃ ॥ ೩೨ ॥**

೩೨. ಮಾಯೆಯಲ್ಲಿ ಬ್ರಹ್ಮಚೈತನ್ಯಪ್ರತಿಬಿಂಬದ ಸಂಬಂಧದಿಂದ ಮಹತ್ತು, ಕಾಲ, ಪುರುಷ-ಇವರುಂಟಾಗುವರು ; ಮಹತ್ತತ್ತ್ವದಿಂದ ಅಹಂಕಾರವಾಗುವದು.

## ವಿವೇಚನೆ

ಈ ವಿವರವಂತೂ ಸಾಂಖ್ಯಮತದಲ್ಲಿಲ್ಲವೇ ಇಲ್ಲ. ಏಕೆಂದರೆ ಸಾಂಖ್ಯರು ಪ್ರಕೃತಿಪುರುಷರಿಗಿಂತ ವ್ಯತಿರಿಕ್ತವಾಗಿ ಬ್ರಹ್ಮವನ್ನಾಗಲಿ ಈಶ್ವರನನ್ನಾಗಲಿ ಒಪ್ಪುವದೇಇಲ್ಲ. ಬ್ರಹ್ಮಚೈತನ್ಯದ ಪ್ರತಿಬಿಂಬವು ಮಾಯೆಯಲ್ಲಿ ಆಗಿರುವದರಿಂದ ಮಹತ್ತತ್ತ್ವವಾಗಿದೆ ಎಂಬುದು ಸಾಂಖ್ಯರ ಸಿದ್ಧಾಂತವೇ ಅಲ್ಲ. ಪ್ರಧಾನವೇ ಮಹತ್ತತ್ತ್ವವಾಗಿ ಪರಿಣಮಿಸುತ್ತದೆ ಎಂಬುದು ಅವರ ಮತ. ಬ್ರಹ್ಮದ ಪ್ರತಿಬಿಂಬವು ಮಾಯೆಯಲ್ಲಾಗುವದೆಂಬ ವಾದವನ್ನು **ವ್ಯಾಖ್ಯಾನಪ್ರಸ್ಥಾನಕಾರರು** ಕೆಲವರು ಒಪ್ಪಿರುತ್ತಾರೆ.

**ತಾಮಸಾತ್ ಸ್ಯಾದಹಙ್ಕಾರಾದ್ ಖಾನಿಲಾಗ್ನ್ಯಮ್ಬುಭೂಮಯಃ ।**
**ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗನ್ಧೋಽಪ್ಯನುಕ್ರಮಾತ್ ॥ ೩೩ ॥**
**ಇನ್ದ್ರಿಯಾಣಾಂ ಚ ವಿಷಯಾ ಭೂತಾನಾಮಪಿ ತೇ ಗುಣಾಃ ।**
**ದೇವಾಃ ಸದಾಶಿವಶ್ಚೇಶೋ ರುದ್ರೋ ವಿಷ್ಣುಶ್ಚತುರ್ಮುಖಃ ॥ ೩೪ ॥**

೩೩-೩೪. **ತಾಮಸಾಹಂಕಾರದಿಂದ** ಆಕಾಶ, ವಾಯು, ಅಗ್ನಿ, ಅಪ್ಪು, ಪೃಥ್ವಿ- ಅವುಗಳಿಂದ ಯಥಾಕ್ರಮವಾಗಿ ಶಬ್ದ, ಸ್ಪರ್ಶ, ರೂಪ, ರಸ, ಗಂಧ- ಇವುಗಳು ಆಗುತ್ತವೆ. ಅವು (ಶ್ರೋತ್ರವೇ ಮುಂತಾದ) ಇಂದ್ರಿಯಗಳಿಗೆ **ವಿಷಯಗಳೂ** ಭೂತಗಳಿಗೆ **ಗುಣಗಳೂ** (ಆಗಿರುತ್ತವೆ). (ಇವುಗಳಿಗೆ ಅಧಿಷ್ಠಾತೃಗಳಾದ) **ದೇವತೆಗಳು** ಸದಾಶಿವ, ಈಶ, ರುದ್ರ, ವಿಷ್ಣು, ನಾಲ್ಮೊಗ(ನಾದ ಬ್ರಹ್ಮ).

**ಸಾತ್ತ್ವಿಕಾತ್ ಸ್ಯಾದಹಙ್ಕಾರಾದನ್ತಃಕರಣಧೀನ್ದ್ರಿಯಮ್ ।**
**ಮನೋ ಬುದ್ಧಿರಹಙ್ಕಾರಶ್ಚಿತ್ತಂ ಕರಣಮಾನ್ತರಮ್ ॥ ೩೫ ॥**
**ಸಂಶಯೋ ನಿಶ್ಚಯೋ ಗರ್ವಃ ಸ್ಮರಣಂ ವಿಷಯಾ ಅಮೀ ।**
**ಚನ್ದ್ರಃ ಪ್ರಜಾಪತೀ ರುದ್ರಃ ಕ್ಷೇತ್ರಜ್ಞ ಇತಿ ದೇವತಾಃ ॥ ೩೬ ॥**
**ಶ್ರೋತ್ರಂ ತ್ವಕ್ ಚಕ್ಷುಷೀ ಜಿಹ್ವಾ ಘ್ರಾಣಂ ಜ್ಞಾನೇನ್ದ್ರಿಯಂ ವಿದುಃ ।**
**ದಿಗ್ವಾತಸೂರ್ಯವರುಣಾ ನಾಸತ್ಯಾ ದೇವತಾಃ ಸ್ಮೃತಾಃ ॥ ೩೭ ॥**

೩೫-೩೭. **ಸಾತ್ತ್ವಿಕಾಹಂಕಾರದಿಂದ** ಅಂತಃಕರಣವೂ ಜ್ಞಾನೇಂದ್ರಿಯಗಳೂ ಆಗುವವು. ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ-ಇದೇ **ಅಂತಃಕರಣ;** ಸಂಶಯ, ನಿಶ್ಚಯ, ಅಭಿಮಾನ, ಸ್ಮೃತಿ -ಇವು (ಮನಸ್ಸೇ ಮುಂತಾದ ರೂಪದ ಅಂತಃಕರಣಕ್ಕೆ ಕ್ರಮವಾಗಿ)

**ವಿಷಯಗಳು.** ಚಂದ್ರ, ಪ್ರಜಾಪತಿ, ರುದ್ರ, ಕ್ಷೇತ್ರಜ್ಞ- ಎಂಬಿವರು (ಈ ನಾಲ್ಕಕ್ಕೂ ಅಧಿಷ್ಠಾತೃ) **ದೇವತೆಗಳು.** ಶ್ರೋತ್ರ, ತ್ವಕ್ಕು, ಚಕ್ಷುಸ್ಸು, ಜಿಹ್ವೆ, ಘ್ರಾಣ-ಇವನ್ನೇ **ಜ್ಞಾನೇಂದ್ರಿಯಗ**ಳೆಂದು ಬಲ್ಲವರೆನ್ನುತ್ತಾರೆ. ದಿಕ್ಕುಗಳು, ವಾಯು, ಸೂರ್ಯ, ವರುಣ, ಅಶ್ವಿನೀ ದೇವತೆಗಳು- (ಇವರು ಈ ಜ್ಞಾನೇಂದ್ರಿಯಗಳಿಗೆ ಕ್ರಮವಾಗಿ) **ದೇವತೆಗಳು.**

**ರಾಜಸಾತ್ ಸ್ಯುರಹಙ್ಕಾರಾತ್ ಕರ್ಮೇನ್ದ್ರಿಯಸಮೀರಣಾಃ ।**
**ಕರ್ಮೇನ್ದ್ರಿಯಾಣಿ ವಾಕ್ಪಾಣಿಃ ಪಾದಂ ಪಾಯುರುಪಸ್ಥಕಮ್ ॥ ೩೮ ॥**
**ವಚನಾದಾನಗಮನವಿಸರ್ಗಾನನ್ದಸಂಜ್ಞಕಾಃ ।**
**ವಿಷಯಾ ದೇವತಾಸ್ತೇಷಾಂ ವಹ್ನೀನ್ದ್ರೋಪೇನ್ದ್ರಮೃತ್ಯುಕಾಃ ॥ ೩೯ ॥**

೩೮-೩೯. **ರಾಜಸಾಹಂಕಾರದಿಂದ** ಕರ್ಮೇಂದ್ರಿಯಗಳೂ ವಾಯುಗಳೂ ಉಂಟಾಗುವವು. ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥ-(ಇವು) **ಕರ್ಮೇಂದ್ರಿಯಗಳು.** ಮಾತನಾಡುವದು, ಹಿಡಿದುಕೊಳ್ಳುವದು, ನಡೆಯುವದು, (ದೇಹದಿಂದ ಹೊರಕ್ಕೆ ಮಲಮೂತ್ರಾದಿಗಳನ್ನು ಬಿಡುವದು), ಸುಖ- ಇವು (ಕ್ರಮವಾಗಿ) ಆ (ಕರ್ಮೇಂದ್ರಿಯಗಳ) **ವಿಷಯಗಳು.** ಅಗ್ನಿ, ಇಂದ್ರ, ಉಪೇಂದ್ರ, ಮೃತ್ಯು, ಪ್ರಜಾಪತಿ- (ಇವರು ಇವುಗಳಿಗೆ ಕ್ರಮವಾಗಿ ಅಧಿಷ್ಠಾತೃ) **ದೇವತೆಗಳು.**

**ಪ್ರಾಣೋಽಪಾನಃ ಸಮಾನಶ್ಚೋದಾನವ್ಯಾನೌ ಚ ವಾಯವಃ ॥ ೩೯½ ॥**[1]
**ಭೂತೈಸ್ತು ಪಞ್ಚಭಿಃ ಪ್ರಾಣೈಶ್ಚತುರ್ದಶಭಿರಿನ್ದ್ರಿಯೈಃ ।**
**ಚತುರ್ವಿಂಶತಿತತ್ತ್ವಾನಿ ಸಾಙ್ಖ್ಯಶಾಸ್ತ್ರವಿದೋ ವಿದುಃ ॥ ೪೦ ॥**

೪೦. ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನ- (ಈ ಐದೂ) ವಾಯುಗಳು. (ಅಂತಃಕರಣಗಳು ನಾಲ್ಕು, ಜ್ಞಾನೇಂದ್ರಿಯಗಳು ಐದು, ಕರ್ಮೇಂದ್ರಿಯಗಳು ಐದು- ಹೀಗೆ) ಹದಿನಾಲ್ಕು ಇಂದ್ರಿಯಗಳು, ಐದು ಭೂತಗಳು, ಐದು ಪ್ರಾಣಗಳು (ಇವುಗಳೊಡನೆ ಸೇರಿದರೆ) ಇಪ್ಪತ್ತುನಾಲ್ಕು ತತ್ತ್ವಗಳು (ಎಂದು) ಸಾಂಖ್ಯಶಾಸ್ತ್ರವನ್ನು ಬಲ್ಲವರು ಅಭಿಪ್ರಾಯಪಡುತ್ತಾರೆ.

---

1. ಈ ಶ್ಲೋಕಾರ್ಧವನ್ನು ಮುಂದೆ ೩೧ನೆಯ ಪುಟದಲ್ಲಿರುವ ೪೬ನೆಯ ಶ್ಲೋಕಾರ್ಧಕ್ಕೆ ಸೇರಿಸಿಕೊಳ್ಳಿರಿ.

## ವಿವೇಚನೆ

ಇಲ್ಲಿ ಹೇಳಿರುವ ಅಧ್ಯಾತ್ಮ(ಶ್ರೋತ್ರಾದಿ)ಗಳಿಗೆ ಅಧಿಷ್ಠಾತೃದೇವತೆಗಳನ್ನು ಬರೆದಿರುವದನ್ನು **ಪಂಚೀಕರಣವಾರ್ತಿಕದಲ್ಲಿರುವ** ಪಟ್ಟಿಗೆ (ಪು. ೪೪) ಹೋಲಿಸಿ. ಈವಿಷಯಕ್ಕೆ ಪೀಠಿಕೆಯನ್ನು ನೋಡಿರಿ.

**ಮಹಾನ್ ಕಾಲಃ ಪ್ರಧಾನಂ ಚ ಮಾಯಾವಿದ್ಯೇ ಚ ಪೂರುಷಃ ।**
**ಇತಿ ಪೌರಾಣಿಕಾಃ ಪ್ರಾಹುಸ್ತ್ರಿಂಶತ್ತತ್ತ್ವಾನಿ ತೈಃ ಸಹ** ॥ ೪೧ ॥

೪೧. ಆ ಇಪ್ಪತ್ತನಾಲ್ಕರೊಡನೆ ಮಹತ್ತು, ಕಾಲ, ಪ್ರಧಾನ, ಮಾಯೆ, ಅವಿದ್ಯೆ- ಇವೆರಡು, ಪುರುಷ- (ಇವೂ ಸೇರಿದರೆ) **ಮೂವತ್ತು ತತ್ತ್ವ**ಗಳು ಎಂದು **ಪೌರಾಣಿಕರು** ಹೇಳುತ್ತಾರೆ.

## ವಿವೇಚನೆ

ಪ್ರಧಾನವನ್ನು ಸಾಂಖ್ಯರೂ ಒಪ್ಪಿದರೂ ಹಿಂದೆ ಹೇಳಿರುವ ಸಾಂಖ್ಯರ ತತ್ತ್ವಗಳ ಪಟ್ಟಿಯಲ್ಲಿ ಅದನ್ನು ಕೈಬಿಟ್ಟಿದೆ ಎಂಬುದನ್ನು ಲಕ್ಷಿಸಬೇಕು. ಇಲ್ಲಿರುವಂತೆ ಯಾವ ಪುರಾಣದಲ್ಲಿ ಹೇಳಿದೆ ?- ಎಂಬುದನ್ನು ಗ್ರಂಥಕಾರರು ಸ್ಪಷ್ಟವಾಗಿ ಹೇಳಿಲ್ಲ. ಪುರುಷನೆಂದರೆ ಜೀವ.

**ಬಿನ್ದುನಾದೌ ಶಕ್ತಿಶಿವೌ ಶಾನ್ತಾತೀತೌ ತತಃ ಪರಮ್ ।**
**ಷಟ್ತ್ರಿಂಶತ್ತತ್ತ್ವಮಿತ್ಯುಕ್ತಂ ಶೈವಾಗಮವಿಶಾರದೈಃ** ॥ ೪೨ ॥

೪೨. ಇವುಗಳಲ್ಲದೆ ಬಿಂದುನಾದಗಳು, ಶಕ್ತಿಶಿವರು, ಶಾನ್ತಾತೀತಗಳು (ಇವುಗಳನ್ನು ಸೇರಿಸಿದರೆ) ಮೂವತ್ತಾರು ತತ್ತ್ವಗಳ ಒಟ್ಟಾಗುವದೆಂದು ಶೈವಾಗಮವನ್ನು ಬಲ್ಲವರು ಹೇಳುತ್ತಾರೆ.

## ವಿವೇಚನೆ

ಇಲ್ಲಿ ಹೇಳಿರುವ ಪಾರಿಭಾಷಿಕಶಬ್ದಗಳಿಗೆ ಆಗಮಗಳನ್ನು ಬಲ್ಲವರು ಅರ್ಥವನ್ನು ಹೇಳಬೇಕು. ವ್ಯಾಖ್ಯಾನದಲ್ಲಿ ಹೀಗಿದೆ : **ಬಿಂದು**ವೆಂದರೆ ಎಲ್ಲಕ್ಕೂ ಆಧಾರವಾದ **ಸದಾಶಿವತತ್ತ್ವವು.** ಪ್ರಣವರೂಪದಿಂದ ಸರ್ವಾರ್ಥವನ್ನೂ ಬೆಳಗಿ ತೋರುವ ಅವಸ್ಥಾಂತರವನ್ನು ಪಡೆದಾಗ ಅದಕ್ಕೇ **ನಾದ**ವೆಂದು ಹೆಸರು; **ಶಕ್ತಿ** ಎಂದರೆ ಮಾಯೆ, ಅವಿದ್ಯೆ- ಇವೆರಡಕ್ಕಿಂತಲೂ ಬೇರೆಯಾಗಿರುವ ಎಲ್ಲಕ್ಕೂ ಆಧಾರವಾಗಿರುವ ಸಾಮರ್ಥ್ಯವು. **ಶಿವ**ನೆಂದರೆ ಶಕ್ತಿವಂತನಾದ **ಮಹೇಶ್ವರನು.**

## 'ಬೀಜಸ್ಯಾನ್ತರಿವ' ಎಂಬ ಮೂಲದ ಅರ್ಥ

**ಸರ್ವೇ ವಿಕಲ್ಪಾಃ ಪ್ರಾಗಾಸನ್ ಬೀಜೇಽಙ್ಕುರ ಇವಾತ್ಮನಿ ।**
**ಇಚ್ಛಾಜ್ಞಾನಕ್ರಿಯಾರೂಪಮಾಯಯಾ ತೇ ವಿಜೃಮ್ಭಿತಾಃ ॥ ೪೩ ॥**
**ಇಚ್ಛಾಜ್ಞಾನಕ್ರಿಯಾಪೂರ್ವಾ ಯಸ್ಮಾತ್ ಸರ್ವಾಃ ಪ್ರವೃತ್ತಯಃ ।**
**ಸರ್ವೇಽಪಿ ಜನ್ತವಸ್ತಸ್ಮಾದೀಶ್ವರಾ ಇತಿ ನಿಶ್ಚಿತಾಃ ॥ ೪೪ ॥**

೪೩–೪೪. (ಈ) ಎಲ್ಲಾ ವಿಕಲ್ಪಗಳೂ ಬೀಜದಲ್ಲಿ ಮೊಳಕೆಯು ಇರುವಂತೆ ಆತ್ಮನಲ್ಲಿ ಮೊದಲು ಇದ್ದವು. ಇಚ್ಛಾಜ್ಞಾನಕ್ರಿಯಾ ರೂಪವಾದ ಮಾಯೆಯಿಂದ ಅವು ಹೊರಹೊಮ್ಮಿಸಲ್ಪಟ್ಟಿರುತ್ತವೆ. (ಪ್ರಾಣಿಗಳ) ಪ್ರವೃತ್ತಿಗಳೆಲ್ಲ ಇಚ್ಛಾಜ್ಞಾನಕ್ರಿಯಾಪೂರ್ವಕವಾಗಿಯೇ ಆಗುತ್ತಿರುವವಷ್ಟೆ ? ಆದ್ದರಿಂದ ಎಲ್ಲಾ ಜೀವರೂ ಈಶ್ವರ ಸ್ವರೂಪರೇ ಎಂದು ನಿಶ್ಚಯವಾಗುತ್ತದೆ.

### ವಿವೇಚನೆ

ವಾದಿಗಳು ಜಗತ್ತನ್ನು ಎಷ್ಟು ತತ್ತ್ವಗಳೆಂದಾದರೂ ವಿಕಲ್ಪಿಸಲಿ, ಜಗತ್ತೆಲ್ಲವೂ ಬೀಜದಲ್ಲಿ ಮೊಳಕೆಯು ಹೇಗೆ ಹುದುಗಿಕೊಂಡಿರುವದೋ ಹಾಗೆ ಇದ್ದುಕೊಂಡಿರುತ್ತದೆ. ಸೃಷ್ಟಿಕಾಲಕ್ಕೆ ಮಾಯಾಶಕ್ತಿಯು ಅವನ್ನು ಹೊರಕ್ಕೆ ತಳ್ಳಿ ತೋರಿಸುತ್ತದೆ ಎಂಬುದನ್ನು ಸ್ತೋತ್ರದಲ್ಲಿ '**ಬೀಜಸ್ಯಾನ್ತರಿವಾಙ್ಕುರೋ**' ಎಂಬ ವಿಶೇಷಣದಿಂದ ಹೇಳಲಾಗಿದೆ ಎಂದು ಅಭಿಪ್ರಾಯ. ಹೀಗೆ ಮಾಯೆಯನ್ನು ಇಚ್ಛಾಜ್ಞಾನಕ್ರಿಯಾಶಕ್ತಿರೂಪವಾದದ್ದೆಂದು ವರ್ಣಿಸಿರುವದು ಭಾಷ್ಯದಲ್ಲಿ ಎಲ್ಲಿಯೂ ಕಾಣುವದಿಲ್ಲ.

ಜೀವರು ಯಾವ ಕಾರ್ಯದಲ್ಲಿ ತೊಡಗಿದರೂ ಅವರ ಪ್ರವೃತ್ತಿಗಳು ಇಚ್ಛಾಜ್ಞಾನಕ್ರಿಯಾಪೂರ್ವಕವಾಗಿಯೇ ಆಗುತ್ತಿರುವದರಿಂದ ಅವರು ಈಶ್ವರಸ್ವರೂಪರೇ ಎಂದು ಕಲ್ಪಿಸಬಹುದು– ಎಂದು ಇಲ್ಲಿ ಹೇಳಿರುತ್ತದೆ. ಕ್ರಿಯೆಯೇ ಪ್ರವೃತ್ತಿಯಾಗಿರುವದರಿಂದ ಇಲ್ಲಿ ಪ್ರವೃತ್ತಿಗಳು ಕ್ರಿಯಾಪೂರ್ವಕವಾಗಿರುತ್ತವೆ ಎಂದಿರುವದರ ಆಶಯವೇನೆಂಬುದು ತಿಳಿಯುವಂತಿಲ್ಲ.

## 'ಯೋಗೀವ' ಎಂಬ ದೃಷ್ಟಾಂತದ ಪ್ರಯೋಜನ

**ಬೀಜಾದ್ ವೃಕ್ಷಸ್ತರೋರ್ಬೀಜಂ ಪಾರಂಪರ್ಯೇಣ ಜಾಯತೇ ।**
**ಇತಿ ಶಙ್ಕಾನಿವೃತ್ತ್ಯರ್ಥಂ ಯೋಗಿದೃಷ್ಟಾನ್ತಕೀರ್ತನಮ್ ॥ ೪೫ ॥**

೪೫. ಬೀಜದಿಂದ ಮರವೂ ಮರದಿಂದ ಬೀಜವೂ ಪರಂಪರೆಯಿಂದ ಹುಟ್ಟುತ್ತದೆಯಲ್ಲ !– ಎಂಬ ಶಂಕೆಯ ನಿವೃತ್ತಿಗಾಗಿ ಯೋಗಿಯ ದೃಷ್ಟಾಂತವನ್ನು ಕೊಟ್ಟಿದೆ.

## ವಿವೇಚನೆ

ಮೂಲದಲ್ಲಿರುವ 'ಮಾಯಾವೀವ ವಿಜೃಂಭಯತ್ಯಪಿ' ಎಂಬ ಮಾಯಾವಿಯ ದೃಷ್ಟಾಂತವನ್ನು ಇದಕ್ಕೇ ಕೊಟ್ಟಿದೆ ಎಂದು ಹೇಳಬಹುದಾಗಿತ್ತು. ಆದರೆ ಮಾಯಾವಿಯು ಮಣಿಮಂತ್ರಾದಿಗಳನ್ನು ಸಾಧನವಾಗಿ ಉಪಯೋಗಿಸುತ್ತಾನೆಂಬ ಕಾರಣದಿಂದ ಅದನ್ನು ಉಪೇಕ್ಷಿಸಿರಬಹುದೆಂದು ಕಾಣುತ್ತದೆ. ಪರಮಾತ್ಮನು ನೇರಾಗಿ ತನ್ನಿಂದಲೇ ಎಲ್ಲವನ್ನೂ ಸೃಷ್ಟಿಸುತ್ತಾನೆಯೇ ಹೊರತು ಮತ್ತೊಂದು ಸಾಧನವನ್ನುಪಯೋಗಿಸುವ ನಿಮಿತ್ತಕಾರಣಮಾತ್ರನಾಗಿಲ್ಲ – ಎಂಬುದನ್ನು ತಿಳಿಯಿಸುವದೇ ಇಲ್ಲಿ ಮುಖ್ಯವಾಗಿರುವ ಉದ್ದೇಶ.

**ವಿಶ್ವಾಮಿತ್ರಾದಯಃ ಪೂರ್ವೇ ಪರಿಪಕ್ವಸಮಾಧಯಃ ॥ ೪೬ ॥[1]**
**ಉಪಾದಾನೋಪಕರಣಪ್ರಯೋಜನವಿವರ್ಜಿತಾಃ ।**
**ಸ್ವೇಚ್ಛಯಾ ಸಸೃಜುಃ ಸ್ವರ್ಗಂ ಸರ್ವಭೋಗೋಪಬೃಂಹಿತಮ್ ॥ ೪೭ ॥**
**ಈಶ್ವರೋಽನನ್ತಶಕ್ತಿತ್ವಾತ್ ಸ್ವತನ್ತ್ರೋಽನ್ಯಾನಪೇಕ್ಷಕಃ ।**
**ಸ್ವೇಚ್ಛಾಮಾತ್ರೇಣ ಸಕಲಂ ಸೃಜತ್ಯವತಿ ಹನ್ತಿ ಚ ॥ ೪೮ ॥**

೪೬–೪೮. ವಿಶ್ವಾಮಿತ್ರನೇ ಮೊದಲಾದ ಪ್ರಾಚೀನ(ಯೋಗಿಗಳು) ಸಮಾಧಿಯು ಪರಿಪಕ್ವವಾದಾಗ (ಕಾರ್ಯಕ್ಕೆ ಬೇಕಾದ) ಉಪಾದಾನ, ಆಗಬೇಕಾದ ಪ್ರಯೋಜನ, ಉಪಕರಣ– ಇವುಗಳನ್ನು ಉಪಯೋಗಿಸದೆಯೇ ತಮ್ಮ ಇಚ್ಛಾಮಾತ್ರದಿಂದ ಸಕಲಭೋಗಗಳಿಂದ ಪುಷ್ಟಿಗೊಂಡ ಸ್ವರ್ಗವನ್ನು ಸೃಷ್ಟಿಸಿದರು. ಈಶ್ವರನು ಅನಂತಶಕ್ತಿಗಳುಳ್ಳವನಾಗಿರುವದರಿಂದ ಸ್ವತಂತ್ರವಾಗಿಯೇ ಮತ್ತೊಂದರ ಅಪೇಕ್ಷೆಯಿಲ್ಲದೆಯೇ ಎಲ್ಲವನ್ನೂ ಸೃಷ್ಟಿಸುತ್ತಾನೆ, ಕಾಪಾಡುತ್ತಾನೆ, ಮತ್ತು ಸಂಹರಿಸುತ್ತಾನೆ.

1. ಹಿಂದೆ ೨೮ನೆಯ ಪುಟದಲ್ಲಿರುವ ೪೫ನೆಯ ಅರ್ಧಶ್ಲೋಕವನ್ನು ಇಲ್ಲಿ ಲೆಕ್ಕಕ್ಕೆ ತೆಗೆದುಕೊಂಡರೆ ಈ ಅರ್ಧವೂ ಸೇರಿ ಒಂದು ಶ್ಲೋಕವಾಗುವದು.

## ವಿವೇಚನೆ

ಈಶ್ವರನಿಗೆ ಜಗತ್ತನ್ನು ಸೃಷ್ಟಿಸುವದಕ್ಕೂ ರಕ್ಷಣೆಯನ್ನೂ ಮತ್ತು ಲಯವನ್ನು ಮಾಡುವದಕ್ಕೂ ಯಾವ ಉಪಾದಾನ, ಉಪಕರಣ, ಪ್ರಯೋಜನಗಳ ಸಿರೀಕ್ಷೆಯೂ ಇಲ್ಲವೆಂಬುದನ್ನು ಇಲ್ಲಿ ಸೂಚಿಸಿರುತ್ತದೆ. ಬ್ರಹ್ಮಸೂತ್ರ (೨-೧-೨೪, ೨೫, ೨೬, ೩೧, ೩೩)ವನ್ನು ನೋಡಿರಿ.

## ಈಶ್ವರನ ಜ್ಞಾನೇಚ್ಛಾಕ್ರಿಯೆಗಳು

**ನ ಕಾರಕಾಣಾಂ ವ್ಯಾಪಾರಾತ್ ಕರ್ತಾ ಸ್ಯಾನ್ನಿತ್ಯ ಈಶ್ವರಃ ।**
**ನಾಪಿ ಪ್ರಮಾಣವ್ಯಾಪಾರಾದ್ ಜ್ಞಾತಾಸೌ ಸ್ವಪ್ರಕಾಶಕಃ ॥ ೪೯ ॥**
**ಜ್ಞಾತೃತ್ವಮಪಿ ಕರ್ತೃತ್ವಂ ಸ್ವಾತನ್ತ್ರ್ಯಾತ್ ತಸ್ಯ ಕೇವಲಮ್ ।**
**ಯಾ ಚೇಚ್ಛಾಶಕ್ತಿವೈಚಿತ್ರೀ ಸಾಸ್ಯ ಸ್ವಚ್ಛನ್ದಕಾರಿತಾ ॥ ೫೦ ॥**
**ಯಯಾ ಕರ್ತುಂ ನ ವಾ ಕರ್ತುಮನ್ಯಥಾ ಕರ್ತುಮರ್ಹತಿ ।**
**ಸ್ವತನ್ತ್ರಾಮೀಶ್ವರೇಚ್ಛಾಂ ಕೇ ಪರಿಚ್ಛೇತ್ತುಮಿಹೇಶತೇ ॥ ೫೧ ॥**
**ಶ್ರುತಿಶ್ಚ ಸೋಽಕಾಮಯತೇತೀಚ್ಛಯಾ ಸೃಷ್ಟಿಮೀಶಿತುಃ ।**
**ತಸ್ಮಾದಾತ್ಮನ ಆಕಾಶಃ ಸಂಭೂತ ಇತಿ ಚಾಬ್ರವೀತ್ ॥ ೫೨ ॥**

೪೯-೫೨. ಈಶ್ವರನು ನಿತ್ಯನಾದ್ದರಿಂದ ಕಾರಕಗಳನ್ನು ವ್ಯಾಪಾರಗೊಳಿಸುವದರಿಂದ ಕರ್ತೃವೆನಿಸುವದಿಲ್ಲ; ಸ್ವಪ್ರಕಾಶನಾದ್ದನಾದ್ದರಿಂದ ಪ್ರಮಾಣಗಳನ್ನು ವ್ಯಾಪಾರಗೊಳಿಸುವದರಿಂದ ಜ್ಞಾತೃವೆನಿಸುವದೂ ಇಲ್ಲ. ಜ್ಞಾತೃತ್ವವೂ ಕರ್ತೃತ್ವವೂ ಅವನಿಗೆ ಸ್ವಾತಂತ್ರ್ಯದಿಂದಲೇ ಇದ್ದುಕೊಂಡಿರುವವು. ಇಚ್ಛಾಶಕ್ತಿಯ ವೈಚಿತ್ರ್ಯವಿರುವದಲ್ಲ; ಅದುಕೂಡ ಈತನಲ್ಲಿ ಸ್ವತಂತ್ರವಾಗಿಯೇ ಇರುವದು; ಆ ಶಕ್ತಿಯಿಂದ ಈತನು ಮಾಡುವದಕ್ಕೂ ಮಾಡದೆ ಇರುವದಕ್ಕೂ ಬೇರೆಯ ಪ್ರಕಾರದಿಂದಲೇ ಮಾಡುವದಕ್ಕೂ ಶಕ್ತನಾಗಿರುತ್ತಾನೆ. ಈಶ್ವರನ ಇಂಥ ಸ್ವತಂತ್ರವಾದ ಇಚ್ಛೆಯನ್ನು (ಇಷ್ಟೇ ಎಂದು) ಯಾವನುತಾನೆ ಗೊತ್ತುಮಾಡಲಾಪನು? ಶ್ರುತಿಯುಕೂಡ 'ಅವನು ಕಾಮಿಸಿದನು' (ತೈ. ೨-೬), 'ಅವನಿಂದಲೇ ಆಕಾಶವುಂಟಾಯಿತು' (ತೈ. ೨-೧) ಎಂದು ಈಶ್ವರನ ಸೃಷ್ಟಿಯು ಅವನ ಇಚ್ಛೆಯಂತೆಯೇ ಆಗಿದೆ- ಎಂದು ಹೇಳುತ್ತಿದೆ.

## ವಿವೇಚನೆ

ಈಶ್ವರನ ಜ್ಞಾನವು ಅವನ ಸ್ವರೂಪವೇ ಆಗಿರುತ್ತದೆಯಾದ್ದರಿಂದ ಸಾಮಾನ್ಯರಂತೆ ಅವನು ಇಂದ್ರಿಯಗಳನ್ನು ಬಳಸಿಕೊಂಡು ಜ್ಞಾತೃವಾಗಬೇಕಾಗಿಲ್ಲ; ಈ ವಿಷಯಕ್ಕೆ ಸೂತ್ರದ ಈಕ್ಷತ್ಯಧಿಕರಣವನ್ನು ನೋಡಿ; ಕಾರಕಗಳನ್ನು ವ್ಯಾಪಾರಗೊಳಿಸಿ ಕುಂಬಾರನೇ ಮೊದಲಾದವರಂತೆ ಜಗತ್ತನ್ನು ಸೃಷ್ಟಿಸುವದೇ ಮುಂತಾದ ಕ್ರಿಯೆಗಳನ್ನು ಮಾಡಬೇಕಾದದ್ದೂ ಅವನಿಗೆ ಇರುವದಿಲ್ಲ; ಇವನ ಸಂನಿಧಿಮಾತ್ರದಿಂದಲೇ ಸೃಷ್ಟ್ಯಾದಿಗಳಾಗುವವು. ಇಚ್ಛಾಶಕ್ತಿಯೆಂಬುದೂ ಬಗೆಬಗೆಯಾಗಿ ತೋರಿಕೊಂಡರೂ ಮಿಕ್ಕವರಲ್ಲಿರುವಂತೆ ಅದು ಪ್ರವರ್ತಕದೋಷವಲ್ಲ. ಸೂತ್ರಭಾಷ್ಯದಲ್ಲಿ "ಅಯಸ್ಕಾಂತಮಣಿಯು ತಾನು ಪ್ರವೃತ್ತಿರಹಿತವಾಗಿದ್ದರೂ ಕಬ್ಬಿಣವನ್ನು ಪ್ರವರ್ತಿಸುವಂತೆ ಹೇಗೆ ಮಾಡುತ್ತದೆಯೋ; ಅಥವಾ ರೂಪಾದಿವಿಷಯಗಳು ತಾವು ಪ್ರವೃತ್ತಿರಹಿತವಾಗಿದ್ದರೂ ಚಕ್ಷುರಾದಿಗಳನ್ನು ಪ್ರವರ್ತಿಸುವಂತೆ ಹೇಗೆ ಮಾಡುವವೋ, ಹಾಗೆಯೇ ಈಶ್ವರನು ಪ್ರವೃತ್ತಿಯಿಲ್ಲದಿದ್ದರೂ ಸರ್ವಗತನೂ ಸರ್ವಾತ್ಮನೂ ಸರ್ವಜ್ಞನೂ ಸರ್ವಶಕ್ತಿಯುಳ್ಳವನೂ ಆಗಿರುವದರಿಂದ ಎಲ್ಲವನ್ನೂ ಪ್ರವರ್ತಿಸುವಂತೆ ಮಾಡಬಹುದಾದ್ದರಿಂದ ಇಲ್ಲಿ ಯಾವ ದೋಷವೂ ಇಲ್ಲ'' (ಸೂ. ಭಾ. ೨-೨-೨) ಎಂದು ವಿವರಿಸಿರುವದನ್ನು ಇಲ್ಲಿ ಹೋಲಿಸಿನೋಡಬೇಕು.

'**सोऽकामयत । बहु स्यां प्रजायेयेति**' (ಬಹುವಾಗುವೆನು, ಹುಟ್ಟುವೆನು, ಎಂದು ಆತನು ಕಾಮಿಸಿದನು) ಎಂಬ ಶ್ರುತಿಯನ್ನು ವಿವರಿಸುವಾಗ ಭಾಷ್ಯದಲ್ಲಿ ಹೀಗೆಂದು ಬರೆದಿದೆ: "ಮಿಕ್ಕವರನ್ನು ಪರವಶಗೊಳಿಸಿ ಕಾಮಾದಿಗಳು ಹೇಗೆ ಪ್ರವರ್ತಿಸುವಂತೆ ಮಾಡುವವೋ ಹಾಗೆ ಬ್ರಹ್ಮವನ್ನು ಅವು ಪ್ರವರ್ತಿಗೊಳಿಸುವದಿಲ್ಲ; ಮತ್ತೆ ಹೇಗೆಂದರೆ ಸತ್ಯಜ್ಞಾನಾನಂತಲಕ್ಷಣವಾಗಿ ಬ್ರಹ್ಮದ ಸ್ವರೂಪವೇ ಆಗಿರುವದರಿಂದ ವಿಶುದ್ಧವಾಗಿರುತ್ತವೆ; ಅವು ಬ್ರಹ್ಮವನ್ನು ಪ್ರವರ್ತಿಸುವದಿಲ್ಲ; ಜೀವರ ಕರ್ಮಗಳ ಅಪೇಕ್ಷೆಯಿಂದ ಬ್ರಹ್ಮವು ಆ ಕಾಮಗಳೇ ಪ್ರವರ್ತಿಸುವಂತೆ ಮಾಡುತ್ತದೆ. ಆದ್ದರಿಂದ ಬ್ರಹ್ಮವು ಅನಾಪ್ತಕಾಮವಲ್ಲ. ಮತ್ತೆ ಬೇರೆ ಸಾಧನಗಳನ್ನು ಬಯಸದೆ ಇರುವದರಿಂದಲೂ (ಬ್ರಹ್ಮವು ಅವುಗಳ ವಿಷಯದಲ್ಲಿ ಸ್ವತಂತ್ರವಾಗಿರುತ್ತದೆ)" (ತೈ. ಭಾ. ೨-೬. ಪು. ೨೯೮) '**तस्माद्वा एतस्मादात्मन आकाशः संभूतः**' (ತೈ. ೨-೧) ಎಂಬ ಶ್ರುತಿಯಲ್ಲಿ ಆತ್ಮನಿಂದಲೇ ಆಕಾಶವು ಹುಟ್ಟಿತು ಎಂದಿರುವದರಿಂದ ಮತ್ತೊಂದು ಉಪಾದಾನಕಾರಣವಿಲ್ಲದೆ ಬ್ರಹ್ಮವೇ ಆಕಾಶವಾಯಿತು ಎಂದು ಸೃಷ್ಟಿಯಲ್ಲಿ ಸ್ವಾತಂತ್ರ್ಯವನ್ನು ಹೇಳಿರುತ್ತದೆಯೆಂದು ಭಾವ.

## ಈಶ್ವರನು ನಿಮಿತ್ತಕಾರಣಮಾತ್ರನೆಂದರೆ ದೋಷ

**ನಿಮಿತ್ತಮಾತ್ರಂ ಚೇದಸ್ಯ ಜಗತಃ ಪರಮೇಶ್ವರಃ ।**
**ವಿಕಾರಿತ್ವಂ ವಿನಾಶಿತ್ವಂ ಭವೇದಸ್ಯ ಕುಲಾಲವತ್ ॥ ೫೩ ॥**

**ಬುದ್ಧ್ಯಾದಯೋ ನವಗುಣಾ ನಿತ್ಯಾ ಏವೇಶ್ವರಸ್ಯ ಚೇತ್ ।**
**ನಿತ್ಯೇಚ್ಛಾವಾನ್ ಜಗತ್ಸೃಷ್ಟ್ಯಾ ಪ್ರವರ್ತೇತೈವ ಸರ್ವದಾ ॥ ೨೪ ॥**
**ಪ್ರವೃತ್ತ್ಯುಪರಮಾಭಾವಾತ್ ಸಂಸಾರೋ ನೈವ ನಶ್ಯತಿ ।**
**ಮೋಕ್ಷೋಪದೇಶೋ ವ್ಯರ್ಥಃ ಸ್ಯಾದಾಗಮೋಽಪಿ ನಿರರ್ಥಕಃ ॥ ೨೫ ॥**

೨೩-೨೫. ಪರಮೇಶ್ವರನು ಈ ಜಗತ್ತಿಗೆ ಕೇವಲ ನಿಮಿತ್ತ ಕಾರಣವೇ-ಎಂದರೆ, ಕುಂಬಾರನಂತೆ ಅವನಿಗೆ ವಿಕಾರಿತ್ವವೂ ವಿನಾಶಿತ್ವವೂ ಆಗಬೇಕಾಗುವದು. ಈಶ್ವರನಿಗೆ ಬುದ್ಧಿಯೇ ಮುಂತಾದ ಒಂಬತ್ತು ಗುಣಗಳು ನಿತ್ಯವಾಗಿಯೇ ಇರುತ್ತವೆಯಲ್ಲ!- ಎಂದರೆ ಆಗ ಆತನ ಇಚ್ಛೆಯು ನಿತ್ಯವಾಗಿರುವದರಿಂದ (ಆತನು) ಯಾವಾಗಲೂ ಜಗತ್ತಿನ ಸೃಷ್ಟಿಯಲ್ಲಿ ತೊಡಗುತ್ತಲೇ ಇರುವನೆಂದಾಗುವದು. (ಆಗ ಆತನ) ಪ್ರವೃತ್ತಿಯು ನಿಲ್ಲುವದೆಂಬುದೇ ಇಲ್ಲವಾಗಿ ಸಂಸಾರವು ನಾಶವಾಗುವದೇಇಲ್ಲ (ವಾದ್ದರಿಂದ) ಮೋಕ್ಷೋಪದೇಶ(ವನ್ನು ಮಾಡಿರುವದು ವ್ಯರ್ಥವಾಗುವದು) ; ಶಾಸ್ತ್ರವೂ ನಿಷ್ಪ್ರಯೋಜನವೆಂದಾಗುವದು.

## ವಿವೇಚನೆ

ವೈಶೇಷಿಕರೇ ಮೊದಲಾದವರು ಹೇಳುವಂತೆ ಈಶ್ವರನು ಕೇವಲ ನಿಮಿತ್ತ ಕಾರಣ, (ಪರಮಾಣುವೇ ಮುಂತಾದವುಗಳು ಉಪಾದಾನಕಾರಣ) -ಎನ್ನುವವರ ಮತದಲ್ಲಿ ಬಹಳ ಅನಿಷ್ಟವು ಬಂದೊದಗುತ್ತದೆ (೧) ನಿಮಿತ್ತಕಾರಣವಾಗಿರುವ ಕುಂಬಾರನಿಗೆ ವಿಕಾರಿತ್ವವೂ ನಾಶವೂ ಇರುವದು ಲೋಕದಲ್ಲಿ ಕಂಡಿದೆಯಾದ್ದರಿಂದ ಆ ದೃಷ್ಟಾಂತದ ಬಲದಿಂದ ಈಶ್ವರನೂ ಮಾರ್ಪಡುತ್ತಾನೆಂದೂ ನಾಶವಾಗತಕ್ಕವನೆಂದೂ ಅನುಮಾನಿಸಬಹುದಾಗುವದು. (೨) ಅವನ ಗುಣಗಳು ನಿತ್ಯವಾಗಿರುವದರಿಂದ ಅವನೂ ನಿತ್ಯನೇ ಎಂದು ವೈಶೇಷಿಕರು ವಾದಿಸಬಹುದು. ಹಾಗಾದರೆ ಅವನ ಗುಣವಾದ ಇಚ್ಛೆಯೂ ನಿತ್ಯವೆಂದಾಗಿ ಅವನು ಇಚ್ಛೆಗೆ ವಶನಾಗಿ ಜಗತ್ತನ್ನು ಸೃಷ್ಟಿಸುತ್ತಲೇ ಇರಬೇಕಾಗುವದು ; ಆಗ ಸಂಸಾರವೂ ನಿತ್ಯವಾಗಿಯೇ ಇರಬೇಕಾಗುವದರಿಂದ ಶಾಸ್ತ್ರದಲ್ಲಿ ಮೋಕ್ಷವನ್ನುಪದೇಶಿಸಿರುವದಕ್ಕೆ ಪ್ರಯೋಜನವೇ ಇಲ್ಲವೆಂದಾಗುವದು. (೩) ನಿತ್ಯವಾದ ಸಂಸಾರವನ್ನು ನಾಶಗೊಳಿಸುವದು ಯಾರಿಂದಲೂ ಆಗದೆ ಇರುವದರಿಂದ ಮೋಕ್ಷಸಾಧನವನ್ನು ಉಪದೇಶಿಸುತ್ತಿರುವ ಶಾಸ್ತ್ರವೂ ವ್ಯರ್ಥವೆಂದಾಗುವದು. ಆದ್ದರಿಂದ ನಿಮಿತ್ತಕಾರಣವಾದವು ಯುಕ್ತವಲ್ಲ ಎಂದಭಿಪ್ರಾಯ.

## ಉಪಸಂಹಾರ

**ತಸ್ಮಾನ್ಮಾಯಾವಿಲಾಸೋಽಯಂ ಜಗತ್ಕರ್ತೃತ್ವಮೀಶಿತುಃ ।**
**ಬನ್ಧಮೋಕ್ಷೋಪದೇಶಾದಿವ್ಯವಹಾರೋಽಪಿ ಮಾಯಯಾ ॥ ೫೬ ॥**

೫೬. ಆದ್ದರಿಂದ ಈಶ್ವರನು ಜಗತ್ಕರ್ತೃವೆಂಬುದು ಮಾಯಾ ವಿಲಾಸವು ; ಬಂಧಮೋಕ್ಷಗಳು (ಶಾಸ್ತ್ರ, ಗುರು, ಶಿಷ್ಯ), ಉಪದೇಶ ಮುಂತಾದ ವ್ಯವಹಾರವೂ ಮಾಯೆಯಿಂದಲೇ.

### ವಿವೇಚನೆ

ವೇದಾಂತಮತದಲ್ಲಿ ಈ ದೋಷಗಳಿಲ್ಲವೆಂಬುದನ್ನು ಇಲ್ಲಿ ಹೇಳಿದೆ. ಮೂಲ ದಲ್ಲಿ 'ಮಾಯಾಕಲ್ಪಿತದೇಶಕಾಲಕಲನಾವೈಚಿತ್ರ್ಯಚಿತ್ರೀಕೃತಮ್' ಎಂದಿರುವದನ್ನು ಇಲ್ಲಿ ಆಧಾರವಾಗಿಟ್ಟುಕೊಂಡಿರುತ್ತದೆ. ಈ ಜಗತ್ತಿನ ಸೃಷ್ಟ್ಯಾದಿಗಳಿಗೆ ಈಶ್ವರನು ಕರ್ತೃವೆಂಬುದು ಮಾಯಾವಿಲಾಸಮಾತ್ರವೇ, ಎಂದರೆ ಪರಮಾರ್ಥವಲ್ಲ- ಎಂದು ಅಭಿಪ್ರಾಯ. ಶಾಸ್ತ್ರದಲ್ಲಿ ಬಂಧಮೋಕ್ಷಾದಿವ್ಯವಹಾರವಿರುವದು ಕಂಡುಬರುತ್ತದೆ ಯಲ್ಲ !- ಎಂದರೆ :

**ನ ನಿರೋಧೋ ನ ಚೋತ್ಪತ್ತಿರ್ನ ಬದ್ಧೋ ನ ಚ ಸಾಧಕಃ ।**
**ನ ಮುಮುಕ್ಷುರ್ನ ವೈ ಮುಕ್ತ ಇತ್ಯೇಷಾ ಪರಮಾರ್ಥತಾ॥** ಗೌ.ಕಾ.೨-೩೨
(ಪ್ರಲಯವಿಲ್ಲ, ಸೃಷ್ಟಿಯಿಲ್ಲ ; ಬದ್ಧನಾದರೂ ಇಲ್ಲ ; ಸಾಧಕನೂ ಇಲ್ಲ ; ಮುಮುಕ್ಷುವಾದವನೂ ಇಲ್ಲ, ಮುಕ್ತನೂ ಇಲ್ಲ ಇದೇ ಪರಮಾರ್ಥವು).

**ಪ್ರಪಞ್ಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ ।**
**ಮಾಯಾಮಾತ್ರಮಿದಂ ದ್ವೈತಮದ್ವೈತಂ ಪರಮಾರ್ಥತಃ॥** ಗೌ.ಕಾ.೧-೧೭
(ಪ್ರಪಂಚವು ನಿಜವಾಗಿದ್ದರಲ್ಲವೆ, ಅದರ ನಿವೃತ್ತಿಯೂ ಆಗುತ್ತಿತ್ತು ? ಈ ದ್ವೈತವು ಮಾಯಾಮಾತ್ರವು, ಪರಮಾರ್ಥವಾಗಿ ಅದ್ವೈತವೇ)- ಎಂಬ ಗೌಡಪಾದರ ಉಕ್ತಿ ಯಂತೆ ಜಗತ್ತು ಸೃಷ್ಟಿಯಾಗುವದೆಂಬುದೂ ಮಾಯಿಕ, ಬಂಧಮೋಕ್ಷವ್ಯವಹಾರ ವೂ ಮಾಯಿಕ, ಶಾಸ್ತ್ರೋಪದೇಶವೂ ಮಾಯಿಕ. ಪರಮಾರ್ಥದೃಷ್ಟಿಯಿಂದ ಎಲ್ಲವೂ ಅದ್ವೈತವೆಂಬುದೇ ವೇದಾಂತಸಿದ್ಧಾಂತವಾದ್ದರಿಂದ ಅದರಲ್ಲಿ ಯಾವ ದೋಷವನ್ನೂ ಕಲ್ಪಿಸುವದಕ್ಕಾಗುವದಿಲ್ಲ- ಎಂದು ಅಭಿಪ್ರಾಯ.

**ಇತಿ ಶ್ರೀದಕ್ಷಿಣಾಮೂರ್ತಿಸ್ತೋತ್ರಾರ್ಥಪ್ರತಿಪಾದಕೇ ।**
**ಪ್ರಬನ್ಧೇ ಮಾನಸೋಲ್ಲಾಸೇ ದ್ವಿತೀಯೋಲ್ಲಾಸಸಂಗ್ರಹಃ ॥ ೫೭ ॥**

೫೭. ಇಂತು ದಕ್ಷಿಣಾಮೂರ್ತಿಸ್ತೋತ್ರದ ಅರ್ಥವನ್ನು ಪ್ರತಿ ಪಾದಿಸುವ ಪ್ರಬಂಧವಾದ ಮಾನಸೋಲ್ಲಾಸದಲ್ಲಿ ಎರಡನೆಯ ಉಲ್ಲಾಸದ ಸಂಗ್ರಹವು ಮುಗಿಯಿತು.

# ೩. ಸ್ಥಾವರಜಂಗಮಾತ್ಮಕವಾದ ಜಗತ್ತು ಪರಮಾತ್ಮನೇ

## ಅವತರಣಿಕೆ

**ಸತ್ತಾಸ್ಫುರತ್ತೇ ಭಾವೇಷು ಕುತ ಆಗತ್ಯ ಸಙ್ಗತೇ ।**
**ಬಿಮ್ಬಾದಿದರ್ಪಣನ್ಯಾಯಾದಿತ್ಥಂ ಪೃಚ್ಛನ್ ಪ್ರಬೋಧ್ಯತೇ ॥ ೧ ॥**

೧. ಇರವೂ ತೋರುವಿಕೆಯೂ ಬಿಂಬವೇ ಮುಂತಾದವುಗಳು ಕನ್ನಡಿಯನ್ನು ಸೇರಿಕೊಂಡಿರುವಂತೆ, ಎಲ್ಲಿಂದ ಬಂದು ಸೇರಿಕೊಂಡಿವೆ ? ಹೀಗೆಂದು ಕೇಳುತ್ತಿರುವ ಶಿಷ್ಯನಿಗೆ (ಇಲ್ಲಿ) ತಿಳಿಯಿಸಲಾಗುತ್ತಿದೆ.

## ವಿವೇಚನೆ

ಮೂಲದ ಒಂದನೆಯ ಶ್ಲೋಕದಲ್ಲಿ ಕನ್ನಡಿಯಲ್ಲಿ ತೋರುವ ನಗರಿಯಂತೆ ವಿಶ್ವವು ಹೊರಗೆ ಕಾಣುತ್ತಿದೆಯೆಂದು ಹೇಳಲಾಗಿ– ಅದರ ವಿಷಯಕ್ಕೆ ಅವತರಣಿಕೆಯಾಗಿ 'ಅಸ್ತಿ ಪ್ರಕಾಶತೇ' (೪) ಎಂಬ ಶ್ಲೋಕದಲ್ಲಿ ಪ್ರಶ್ನೆಯನ್ನು ಹಾಕಿ ಮುಂದೆ ಉತ್ತರವನ್ನು ಕೊಡಲಾಗಿತ್ತು. ಇಲ್ಲಿ ಮೂಲದಲ್ಲಿಯೇ ಆ ಅಭಿಪ್ರಾಯವನ್ನು ಹೊರಗೆಡಹಿದೆ –ಎಂಬುದನ್ನು ಸ್ಫುಟಗೊಳಿಸುವದಕ್ಕಾಗಿ ಮತ್ತೆ ಈ ಅವತರಣಿಕೆಯನ್ನು ಮಾಡಿದೆ.

**ಯಸ್ಯೈವ ಸ್ಫುರಣಂ ಸದಾತ್ಮಕಮಸತ್ಕಲ್ಪಾರ್ಥಗಂ ಭಾಸತೇ**
**ಸಾಕ್ಷಾತ್ ತತ್ತ್ವಮಸೀತಿ ವೇದವಚಸಾ ಯೋ ಬೋಧಯತ್ಯಾಶ್ರಿತಾನ್ ।**
**ಯತ್ಸಾಕ್ಷಾತ್ಕರಣಾದ್ ಭವೇನ್ನ ಪುನರಾವೃತ್ತಿರ್ಭವಾಮ್ಭೋನಿಧೌ**
**ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ ಶ್ರೀದಕ್ಷಿಣಾಮೂರ್ತಯೇ ॥ ೩ ॥**

೩. ಯಾವದರದ್ದೇ ಆಗಿರುವ ಸದ್ರೂಪವಾದ ಬೆಳಕು ಅಸತ್ತೆಂಬಂತಿರುವ ವಿಷಯಗಳಲ್ಲಿ ಸೇರಿಕೊಂಡು ತೋರಿಕೊಳ್ಳುತ್ತಿರುವದೋ, ನೇರಾಗಿ ಅದೇ ನೀನಾಗಿರುವೆ ಎಂದು ಯಾವಾತನು ತನ್ನನ್ನಾಶ್ರಯಿಸಿದವರಿಗೆ ವೇದವಾಕ್ಯದಿಂದ ತಿಳಿಯಹೇಳುತ್ತಾನೋ ಯಾವಾತನನ್ನು ಸಾಕ್ಷಾತ್ಕಾರಮಾಡಿಕೊಂಡದ್ದರಿಂದ ಸಂಸಾರಸಾಗರಕ್ಕೆ ಮತ್ತೆ ಹಿಂತಿರುಗಿ ಬರುವದಿಲ್ಲವೋ, ಆ ಶ್ರೀಗುರುಮೂರ್ತಿಯಾದ ಶ್ರೀದಕ್ಷಿಣಾಮೂರ್ತಿಗೆ ಈ ನಮಸ್ಕಾರ !

## ಇರವುತೋರಿಕೆಗಳಿಗೆ ಈಶ್ವರನೇ ಮೂಲ

**ಅಸತ್ಕಲ್ಪೇಷು ಭಾವೇಷು ಜಡೇಷು ಕ್ಷಣನಾಶಿಷು ।**
**ಅಸ್ತಿತ್ವಂ ಚ ಪ್ರಕಾಶತ್ವಂ ನಿತ್ಯಾತ್ಸಂಕ್ರಾಮತೀಶ್ವರಾತ್ ॥ ೨ ॥**

**ಆತ್ಮಸತ್ತ್ಯೈವ ಸತ್ತ್ಯೈಷಾಂ ಭಾವಾನಾಂ ನ ತತೋಽಧಿಕಾ ।**
**ತಥೈವ ಸ್ಫುರಣಂ ಚೈಷಾಂ ನಾತ್ಮಸ್ಫುರಣತೋಽಧಿಕಮ್   । ೩ ॥**

೨-೩. ಇಲ್ಲವೇಇಲ್ಲವೆಂಬಂತಿರುವ, ಜಡವಾಗಿರುವ ಕ್ಷಣ ಮಾತ್ರದಲ್ಲಿ ನಾಶವಾಗುವ ಸ್ವಭಾವವುಳ್ಳ ಪದಾರ್ಥಗಳಲ್ಲಿ ಇರುವಿಕೆ ಯೂ ತೋರುವಿಕೆಯೂ ನಿತ್ಯವಾಗಿರುವ ಈಶ್ವರನಿಂದಲೇ ಬಂದು ಸೇರಿಕೊಂಡಿರುತ್ತವೆ. ಇವುಗಳ ಇರವು, ಆತ್ಮನ ಇರವೇ ; ಅದಕ್ಕಿಂತ ಬೇರೆಯಲ್ಲ. ಹಾಗೆಯೇ ಇವುಗಳ ತೋರಿಕೆಯೂ ಆತ್ಮನ ತೋರುವಿಕೆ ಗಿಂತ ಬೇರೆಯಲ್ಲ.

## ವಿವೇಚನೆ

ಈ ಮೂಲದಲ್ಲಿರುವ ಅಭಿಪ್ರಾಯವನ್ನು ಆಕರ್ಷಣಮಾಡಿಕೊಂಡೇ ಹಿಂದೆ (೪, ೫ನೆಯ ಶ್ಲೋಕಗಳಲ್ಲಿ) ಪ್ರಶ್ನೆಯನ್ನು ತೆಗೆದಿತ್ತು. ಹೊರಗೆ ಪದಾರ್ಥಗಳು ತಮ್ಮ ರೂಪದಿಂದ ನಿಜವಾಗಿಲ್ಲವೇ ಇಲ್ಲವಾದರೂ ಈಶ್ವರನ ಸತ್ತಾಪ್ರಕಾಶಗಳೇ ಅವುಗಳಲ್ಲಿ ತೋರುತ್ತಿದ್ದು -ಇದು ಇದೆ, ತೋರುತ್ತಿದೆ ಎಂಬ ಭ್ರಾಂತಿಯನ್ನುಂಟು ಮಾಡುತ್ತಿರುತ್ತವೆ. ಅಸತ್ಕಲ್ಪ- 'ಇಲ್ಲವೆಂಬಂತಿರುವ' ಎಂಬ ವಿಶೇಷಣದಿಂದ ಇವಕ್ಕೆ ವ್ಯಾವಹಾರಿಕಸತ್ತೆಯೊಂದಿದೆ- ಎಂಬ ಅಭಿಪ್ರಾಯವು ಗ್ರಂಥಕರ್ತರಿಗೆ ಇದ್ದರೂ ಇರಬಹುದು.

**ಜ್ಞಾನಾನಿ ಬಹುರೂಪಾಣಿ ತೇಷಾಂ ಚ ವಿಷಯಾ ಅಪಿ ।**
**ಅಹಙ್ಕಾರೇಽನುಷಜ್ಯನ್ತೇ ಸೂತ್ರೇ ಮಣಿಗಣಾ ಇವ   ॥ ೪ ॥**

೪. ಅನೇಕರೂಪವಾಗಿರುವ ಜ್ಞಾನಗಳೂ ಅವುಗಳ ವಿಷಯ ಗಳೂ ಅಹಂಕಾರದಲ್ಲಿ- ಸೂತ್ರದಲ್ಲಿ ಮಣಿಸಮೂಹಗಳಂತೆ- (ಸೇರಿ ಕೊಂಡಿರುತ್ತವೆ).

**ಪ್ರಕಾಶಾಭಿನ್ನಮೇವೈತದ್ ವಿಶ್ವಂ ಸರ್ವಸ್ಯ ಭಾಸತೇ ।**
**ಲಹರೀಬುದ್ಬುದಾದೀನಾಂ ಸಲಿಲಾನ್ನ ಪೃಥಕ್‌ಸ್ಥಿತಿಃ   ॥ ೫ ॥**

೫. ಈ ವಿಶ್ವವು (ಚೈತನ್ಯ)ಪ್ರಕಾಶಕ್ಕಿಂತ ಅಭಿನ್ನವಾಗಿಯೇ ಪ್ರತಿಯೊಬ್ಬನಿಗೂ ತೋರುತ್ತಿರುತ್ತದೆ. ಅಲೆಗಳು, ಗುಳ್ಳೆಗಳು- ಮುಂತಾದವಕ್ಕೆ ನೀರಿಗಿಂತ ಬೇರೆಯ ಇರುವಿಕೆಯಿಲ್ಲ.

## ವಿವೇಚನೆ

ಇಮ ಗಡಿಗೆ, ಇದು ಬಟ್ಟೆ– ಎಂದು ಮುಂತಾಗಿ ಬೇರೆಬೇರೆಯಾಗಿ ವಿಷಯಗಳೂ ಇದು ಗಡಿಗೆಯ ಜ್ಞಾನ, ಇದು ಬಟ್ಟೆಯ ಜ್ಞಾನ– ಎಂದು ಅನೇಕ ಪ್ರಕಾರವಾಗಿ ಜ್ಞಾನಗಳೂ ತೋರುತ್ತಿರುತ್ತವೆ. ಇವು ಅಹಂಕಾರದಲ್ಲಿಯೇ (ನಾನೆಂಬುವದರಲ್ಲಿಯೇ) ತೋರುತ್ತಿರುತ್ತವೆ. 'ನಾನು ಇದನ್ನು ಅರಿಯುತ್ತೇನೆ' ಎಂದಲ್ಲವೆ ಪ್ರತಿಯೊಂದೂ ನಾನು ಎಂಬುದರಲ್ಲಿ ಸೇರಿಕೊಂಡೇ ತೋರುತ್ತಿರುತ್ತವೆ?– ಎಂದರ್ಥ.

ಇಲ್ಲಿ **'ಸೂತ್ರೇ ಮಣಿಗಣಾ ಇವ'** (ಗೀ. ೭–೭) ಎಂಬ ಭಗವದ್ಗೀತಾವಾಕ್ಯವನ್ನು ಉದಾಹರಿಸಿರುವದರಿಂದ 'ಅಹಂಕಾರ'ವೆಂದರೆ (ಹಿಂದೆ ೧–೧೫ರಲ್ಲಿ ಹೇಳಿರುವಂತೆ) ಪೂರ್ಣಾಹಂತೆಯೆಂದೇ ಅರ್ಥಮಾಡಬೇಕೆಂದು ತೋರುತ್ತದೆ. ವ್ಯಾಖ್ಯಾನಕಾರರು 'ಸಚ್ಚಿದಾತ್ಮನಲ್ಲಿ ತಾದಾತ್ಮ್ಯಾಧ್ಯಾಸದಿಂದ ಸಿದ್ಧವಾದ ಅಂತಃಕರಣವ್ಯಾಪ್ತಿಯಿಂದಲೇ ವಿಷಯಸತ್ತಾಸ್ಫುರಣಗಳು ತೋರುವವೇ ಹೊರತು ತಾವೇ ತೋರುತ್ತಿರುವದಿಲ್ಲ' ಎಂದು ಬರೆದಿರುವದು ಅಪ್ರಕೃತವೆಂದು ನಮ್ಮ ಅಭಿಪ್ರಾಯ. ಅಲೆ, ನೀರುಗುಳ್ಳೆ– ಮುಂತಾದವುಗಳ ಇರವು ನೀರಿನ ಅಧೀನವಾಗಿರುವಂತೆ ಲೋಕದಲ್ಲಿರುವ ವಸ್ತುಗಳ ಇರವೂ ಆತ್ಮನ ಚೈತನ್ಯರೂಪಸತ್ತೆಗೆ ಅಧೀನವಾಗಿರುವದೇ ಹೊರತು ಅವಕ್ಕೆ ಸ್ವತಂತ್ರವಾದ ಇರವು ಬೇರೆಯಿಲ್ಲವೆಂಬಿಷ್ಟರಮಟ್ಟಿಗೇ ಅಲೆಯೇ ಮುಂತಾದ ದೃಷ್ಟಾಂತವನ್ನು ಇಟ್ಟುಕೊಳ್ಳಬೇಕು. ಅಲೆ ಮುಂತಾದವುಗಳು ನೀರಿನ ಪರಿಣಾಮವಾಗಿರುವಂತೆ ವ್ಯಾವಹಾರಿಕಪದಾರ್ಥಗಳೂ ಚೈತನ್ಯದ ಪರಿಣಾಮವೆಂದೇನೂ ಅಭಿಪ್ರೇತವಲ್ಲವೆಂಬುದು ಸ್ಪಷ್ಟವೇ.

**ಜ್ಞಾನಮಾತ್ರೇವ ಯಜ್ಜ್ಞಾನಂ ಭಾವಾನಾವಿಶ್ಯ ವರ್ತತೇ ।**
**ಜ್ಞಾತಂ ಮಯೇತಿ ತತ್ ಪಶ್ಚಾತ್ ವಿಶ್ರಾಮ್ಯತ್ಯನ್ತರಾತ್ಮನಿ ॥ ೬ ॥**
**ಘಟಾದಿಕಾನಿ ಕಾರ್ಯಾಣಿ ವಿಶ್ರಾಮ್ಯನ್ತಿ ಮೃದಾದಿಷು ।**
**ವಿಶ್ವಂ ಪ್ರಕಾಶಾಭಿನ್ನತ್ವಾದ್ ವಿಶ್ರಾಮ್ಯೇತ್ ಪರಮೇಶ್ವರೇ ॥ ೭ ॥**
**ಸ್ವಗತೇನೈವ ಕಾಳಿಮ್ನಾ ದರ್ಪಣಂ ಮಲಿನಂ ಯಥಾ ।**
**ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯನ್ತಿ ಜನ್ತವಃ ॥ ೮ ॥**

೬–೮. 'ಅರಿಯುತ್ತಿದ್ದೇನೆ' ಎಂದು ಯಾವ ಜ್ಞಾನವು ಪದಾರ್ಥಗಳನ್ನು ಹೊಕ್ಕು ಇರುತ್ತದೆಯೋ ಅದು ಆಮೇಲೆ 'ನನ್ನಿಂದ ಅರಿಯಲ್ಪಟ್ಟಿತು' ಎಂದು ಅಂತರಾತ್ಮನಲ್ಲಿ ನಿಂತುಕೊಳ್ಳುತ್ತದೆ. ಗಡಿಗೆಯೇ ಮುಂತಾದ ಕಾರ್ಯಗಳು ಮೃದಾದಿಗಳಲ್ಲಿ ನಿಂತುಬಿಡುತ್ತವೆ; (ಹಾಗೆಯೇ) ವಿಶ್ವವು ಪ್ರಕಾಶಾತ್ಮಕವಾಗಿರುವದರಿಂದ ಪರಮೇಶ್ವರನಲ್ಲಿ ನಿಂತುಬಿಡುವದು. ತನ್ನಲ್ಲಿಯೇ ಇರುವ ಕಪ್ಪಿನಿಂದ

ಕನ್ನಡಿಯು ಹೇಗೆ ಮಲಿನವಾಗಿ (ತೋರು)ತ್ತದೆಯೋ, (ಹಾಗೆ) ಅಜ್ಞಾನದಿಂದ ಜ್ಞಾನವು ಮುಚ್ಚಿಹೋಗಿರುತ್ತದೆ; ಆದರಿಂದ ಜೀವರು ಭ್ರಾಂತರಾಗಿರುತ್ತಾರೆ.

## ವಿವೇಚನೆ

ಆತ್ಮನದೇ ಆಗಿರುವ ಜ್ಞಾನದ ಸಂಬಂಧದಿಂದಲೇ **'ಇದನ್ನು ಅರಿಯುತ್ತಿದೇನೆ'** ಎಂದು ಪದಾರ್ಥದಲ್ಲಿ 'ತೋರಿಕೆ'ಯುಂಟಾಗಿರುತ್ತದೆ; ಬಳಿಕ **'ನಾನು'** ಗಡಿಗೆಯನ್ನು ಅರಿತೆನು- ಎಂದು ನೋಡುವ ಆ ಆತ್ಮನಲ್ಲಿಯೇ ಅದು ಅರಿವಿನ ರೂಪದಿಂದ ಕೊನೆಗಾಣುವದು. ಈ ವಿವರಣೆಯು **'ಯಸ್ಯೈವ ಸ್ಫುರಣಮ್'** -ಎಂಬ ಮೂಲವನ್ನು ವಿವರಿಸುವದಕ್ಕೆ ಬಂದದ್ದು. ಮುಂದಿನ ಶ್ಲೋಕದಲ್ಲಿ ಇದು ಮೂಲದಲ್ಲಿಯೇ ವಿಶದವಾಗುವದು.

ಕನ್ನಡಿಗೆ ಹತ್ತಿಕೊಂಡಿರುವ ಮುಸುಕೇ ಕನ್ನಡಿಯ ಸ್ವಚ್ಛತೆಗೆ ಅಡ್ಡಿಯಾಗಿರುವಂತೆ ಆತ್ಮನನ್ನಾಶ್ರಯಿಸಿರುವ ಅಜ್ಞಾನವೇ ಜ್ಞಾನವು ತೋರುವದಕ್ಕೆ ಅಡ್ಡಿ ಎಂದಿರುವದನ್ನು ನೋಡಿದರೆ ಅಜ್ಞಾನವು ಆತ್ಮವನ್ನಾಶ್ರಯಿಸಿಕೊಂಡು ಆತ್ಮನನ್ನೇ ಮುಸುಕಿಕೊಂಡಿದೆ- ಎಂಬ ಅವಿದ್ಯಾಶಕ್ತಿವಾದದ ನೆನಪನ್ನು ತಂದುಕೊಡುವಂತಿದೆ. ಇಲ್ಲಿ ಉದಾಹರಿಸಿರುವ ಗೀತಾವಾಕ್ಯ (೫-೧೫)ವು ಈ ಅಭಿಪ್ರಾಯಕ್ಕೆ ಪ್ರಮಾಣವೆಂತ ಹಿಡಿಯುವದು ಎಷ್ಟರಮಟ್ಟಿಗೆ ಯುಕ್ತ? -ಎಂಬುದು ವಿಮರ್ಶೆಮಾಡಬೇಕಾದ ವಿಷಯ. **ಪೀಠಿಕೆಯನ್ನು ನೋಡಿ.**

## ಜೀವೇಶ್ವರಾಭೇದ

**ಘಟಾಕಾಶೋ ಮಹಾಕಾಶೋ ಘಟೋಪಾಧಿಕೃತೋ ಯಥಾ ।**
**ದೇಹೋಪಾಧಿಕೃತೋ ಭೇದೋ ಜೀವಾತ್ಮಪರಮಾತ್ಮನೋಃ ॥ ೯ ॥**

೯. ಘಟಾಕಾಶವು, ಮಹಾಕಾಶವು- ಎಂದು (ಬೇರೆಬೇರೆಯಾಗಿ ತೋರುವದು) ಹೇಗೆ ಗಡಿಗೆ ಎಂಬ ಉಪಾಧಿಯಿಂದಾಗಿರುತ್ತದೆಯೋ ಹಾಗೆಯೇ ಜೀವಾತ್ಮಪರಮಾತ್ಮರುಗಳಿಗಿರುವ ಭೇದವು ದೇಹವೆಂಬ ಉಪಾಧಿಯಿಂದಲೇ ಆಗಿರುತ್ತದೆ.

## ವಿವೇಚನೆ

ಘಟಾಕಾಶದೃಷ್ಟಾಂತವನ್ನು ವಾರ್ತಿಕದಲ್ಲಿ ಆಗಾಗ್ಗೆ ಜೀವಪರಮಾತ್ಮೈಕತ್ವವನ್ನು ಬೋಧಿಸುವದಕ್ಕೆ ಬಳಸುತ್ತಿರುತ್ತದೆ.

## ತತ್ತ್ವಮಸಿವಾಕ್ಯದಿಂದ ಆತ್ಮೈಕತ್ವಬೋಧೆ

ತತ್ತ್ವಮಸ್ಯಾದಿವಾಕ್ಯೈಸ್ತು ತಯೋರೈಕ್ಯಂ ಪ್ರದರ್ಶ್ಯತೇ ।
ಸೋಽಯಂ ಪುರುಷ ಇತ್ಯುಕ್ತೇ ಪುಮಾನೇಕೋ ಹಿ ದೃಶ್ಯತೇ ॥ ೧೦ ॥

ಯಜ್ಜಗತ್ಕಾರಣಂ ತತ್ತ್ವಂ ತತ್ಪದಾರ್ಥಸ್ಸ ಉಚ್ಯತೇ ।
ದೇಹಾದಿಭಿಃ ಪರಿಚ್ಛಿನ್ನೋ ಜೀವಸ್ತು ತ್ವಂಪದಾಭಿಧಃ ॥ ೧೧ ॥

ತದ್ದೇಶಕಾಲಾವಸ್ಥಾದೌ ದೃಷ್ಟಃ ಸ ಇತಿ ಕಥ್ಯತೇ ।
ತಥೈತದ್ದೇಶಕಾಲಾದೌ ದೃಷ್ಟೋಽಯಮಿತಿ ಕೀರ್ತ್ಯತೇ ॥ ೧೨ ॥

ಮುಖ್ಯಂ ತದೇತದ್ವೈಶಿಷ್ಟ್ಯಂ ವಿಸೃಜ್ಯ ಪದಯೋರ್ದ್ವಯೋಃ ।
ಪುಂಮಾತ್ರಂ ಲಕ್ಷಯತ್ಯೇಕಂ ಯಥಾ ಸೋಽಯಂ ಪುಮಾನ್ ವಚಃ ॥

ಪ್ರತ್ಯಕ್ತ್ವಂ ಚ ಪರಾಕ್ತ್ವಂ ಚ ತ್ಯಕ್ತ್ವಾ ತತ್ತ್ವಮಸೀತಿ ವಾಕ್ ।
ತಥೈವ ಲಕ್ಷಯತ್ಯೈಕ್ಯಂ ಜೀವಾತ್ಮಪರಮಾತ್ಮನೋಃ ॥ ೧೪ ॥

೧೦–೧೪. 'ತತ್ತ್ವಮಸಿ' ಮುಂತಾದ ವಾಕ್ಯಗಳಿಂದಲಾದರೊ, ಆ ಇಬ್ಬರ ಐಕ್ಯವನ್ನು ತಿಳಿಯಿಸಲಾಗಿರುತ್ತದೆ. 'ಅವನೇ ಈ ಮನುಷ್ಯನು' ಎಂದರೆ ಒಬ್ಬನು ಮನುಷ್ಯನು ಕಾಣಿಸುತ್ತಾನಲ್ಲವೆ? ಯಾವದು ಜಗತ್ಕಾರಣವಾದ ತತ್ತ್ವವೋ ಅದು 'ತತ್' ಎಂಬ ಪದದ ಅರ್ಥವೆನಿಸುತ್ತದೆ; ದೇಹವೇ ಮುಂತಾದವುಗಳಿಂದ ಕಟ್ಟುವಡೆದಿರುವ ಜೀವನಾದರೊ, 'ತ್ವಂ'ಪದ– ನೀನು ಎಂಬ ಪದದಿಂದ ಹೇಳಲ್ಪಡುತ್ತಾನೆ. ಆ ದೇಶ (ಆ)ಕಾಲ, (ಆ) ಅವಸ್ಥೆ– ಮುಂತಾದವುಗಳಲ್ಲಿ ಕಂಡವನನ್ನು 'ಅವನು' ಎನ್ನುತ್ತಾರೆ; ಹಾಗೆಯೇ ಈ ದೇಶ, (ಈ) ಕಾಲ– ಮುಂತಾದವುಗಳಲ್ಲಿ ಕಂಡುಬಂದವನನ್ನು 'ಇವನು' ಎನ್ನುತ್ತಾರೆ. (ದೃಷ್ಟಾಂತದಲ್ಲಿ) ಎರಡು ಪದಗಳ ಅದು, ಇದು– ಎಂಬ (ವಿಶೇಷಣಗಳಿಂದ) ಕೂಡಿರುವಿಕೆಯೆಂಬ ಮುಖ್ಯವಾದ ಅರ್ಥವನ್ನು ಬಿಟ್ಟು, ಬರಿಯ ಮನುಷ್ಯನನ್ನು 'ಅವನೇ ಈ ಮನುಷ್ಯನು' ಎಂಬ ವಾಕ್ಯವು ಲಕ್ಷಣೆಯಿಂದ ಹೇಗೆ ತಿಳಿಯಿಸುತ್ತದೆಯೋ, ಹಾಗೆಯೇ 'ತತ್ತ್ವಮಸಿ' ಎಂಬ ವಾಕ್ಯವು (ದಾರ್ಷ್ಟಾಂತಿಕದಲ್ಲಿ) ಪ್ರತ್ಯಕ್ತ್ವ (ಒಳಗಿರುವಿಕೆ)ವನ್ನೂ ಪರಾಕ್ತ್ವ (ಹೊರಗಿರುವಿಕೆ)ವನ್ನೂ ಬಿಟ್ಟು ಜೀವಾತ್ಮಪರಮಾತ್ಮರ ಐಕ್ಯವನ್ನು ಲಕ್ಷಣೆಯಿಂದ ತಿಳಿಯಿಸುತ್ತದೆ.

## ವಿವೇಚನೆ

'ತತ್ ತ್ವಮಸಿ' ಎಂಬ ವಾಕ್ಯದಲ್ಲಿ ಮುಖ್ಯಾರ್ಥದಿಂದ ಜೀವಾತ್ಮಪರಮಾತ್ಮರ ಐಕ್ಯವೇ ತಿಳಿಯಬರುತ್ತದೆಯಾದರೂ ಪರಸ್ಪರವಿರುದ್ಧವಾದ (ಜೀವಪರಮಾತ್ಮರ) ಐಕ್ಯವು ಹೊಂದುವದಿಲ್ಲವಾದ್ದರಿಂದ ಮುಖ್ಯಾರ್ಥವನ್ನು ಬಿಟ್ಟು ಲಕ್ಷ್ಯಾರ್ಥವನ್ನೇ ತೆಗೆದುಕೊಳ್ಳಬೇಕು- ಎಂಬುದು ಅಭಿಪ್ರಾಯ. ಹೀಗೆ ಇಂಥ ವಾಕ್ಯಗಳಲ್ಲಿ ವಾಚ್ಯಾರ್ಥವನ್ನು ಬಿಟ್ಟು ಲಕ್ಷಣಾರ್ಥವನ್ನು ಸ್ವೀಕರಿಸಬೇಕು- ಎಂಬುದು ಉಪನಿಷದ್ಭಾಷ್ಯದಲ್ಲಾಗಲಿ ಸೂತ್ರಭಾಷ್ಯದಲ್ಲಾಗಲಿ ಕಂಡುಬರುವದಿಲ್ಲ. **ಪೀಠಿಕೆಯನ್ನು ನೋಡಿ.**

**ಸಾಮಾನಾಧಿಕರಣ್ಯಾಖ್ಯಃ ಸಂಬನ್ಧಃ ಪದಯೋರಿಹ ।**
**ವಿಶೇಷಣವಿಶೇಷ್ಯತ್ವಂ ಸಂಬನ್ಧಃ ಸ್ಯಾತ್ ಪದಾರ್ಥಯೋಃ ॥ ೧೫ ॥**
**ಲಕ್ಷ್ಯಲಕ್ಷಣಸಂಯೋಗಾದ್ವಾಕ್ಯಮೈಕ್ಯಂ ಚ ಬೋಧಯೇತ್ ॥ ೧೫½ ॥**

೧೫-೧೫½. **ಸಾಮಾನಾಧಿಕರಣ್ಯ**ವೆಂಬುದೇ ಇಲ್ಲಿ ಪದಗಳಿಗೆ ಸಂಬಂಧವು. ಪದಾರ್ಥಗಳಿಗೆ **ವಿಶೇಷಣವಿಶೇಷ್ಯತ್ವ**ವೆಂಬ ಸಂಬಂಧವಿರುತ್ತದೆ. (ತತ್ತ್ವಮಸಿ)ವಾಕ್ಯವು **ಲಕ್ಷ್ಯಲಕ್ಷಣಗಳ** ಸಂಯೋಗದಿಂದ ಐಕ್ಯವನ್ನು ಬೋಧಿಸುತ್ತದೆ.

**ಗಙ್ಗಾಯಾಂ ಘೋಷ ಇತಿವನ್ನ ಜಹಲ್ಲಕ್ಷಣಾ ಭವೇತ್ ॥ ೧೬ ॥**
**ನಾಜಹಲ್ಲಕ್ಷಣಾಪಿ ಸ್ಯಾತ್ ಶ್ವೇತೋ ಧಾವತಿ ವಾಕ್ಯವತ್ ।**
**ತತ್ತ್ವಮಸ್ಯಾದಿವಾಕ್ಯಾನಾಂ ಲಕ್ಷಣಾ ಭಾಗಲಕ್ಷಣಾ ॥ ೧೭ ॥**
**ಸೋಽಯಂ ಪುರುಷ ಇತ್ಯಾದಿವಾಕ್ಯಾನಾಮಿವ ಕೀರ್ತಿತಾ ।**
**ಭಿನ್ನವೃತ್ತಿನಿಮಿತ್ತಾನಾಂ ಶಬ್ದಾನಾಮೇಕವಸ್ತುನಿ ॥ ೧೮ ॥**
**ಪ್ರವೃತ್ತಿಸ್ತು ಸಮಾನಾಧಿಕರಣತ್ವಮಿಹೋಚ್ಯತೇ ॥ ೧೮½ ॥**

೧೬-೧೮½. ಗಂಗೆಯಲ್ಲಿ ಹಳ್ಳಿ ಎಂಬಂತೆ (ಇಲ್ಲಿ) **ಜಹಲ್ಲಕ್ಷಣೆ**ಯಾಗಲಾರದು. 'ಬಿಳಿಯದು ಓಡುತ್ತಿದೆ' ಎಂಬ ವಾಕ್ಯದಂತೆ **ಅಜಹಲ್ಲಕ್ಷಣೆ**ಯೂ ಆಗಲಾರದು. 'ತತ್ತ್ವಮಸಿ' ಮುಂತಾದ ವಾಕ್ಯಗಳಿಗೆ ಭಾಗಲಕ್ಷಣೆಯೇ ಇಲ್ಲಿ ಲಕ್ಷಣೆ. ಹೇಗೆ 'ಆತನೇ ಈ ಮನುಷ್ಯನು' ಎಂಬುದೇ ಮುಂತಾದ ವಾಕ್ಯಗಳಲ್ಲಿ (ಭಾಗಲಕ್ಷಣೆ ಇರುವದೋ ಹಾಗೆಯೇ ಇಲ್ಲಿ) ಎಂದು ಹೇಳುತ್ತಾರೆ. ಬೇರೆಬೇರೆಯ (ವಸ್ತುಗಳಲ್ಲಿ) ಪ್ರವೃತ್ತಿನಿಮಿತ್ತಗಳಿರುವ ಶಬ್ದಗಳಿಗೆ ಒಂದೇ ವಸ್ತು

ವಿನಲ್ಲಿ ಪ್ರವೃತ್ತಿಯಿರುವದಾದರೊ, ಇಲ್ಲಿ **ಸಾಮಾನಾಧಿಕರಣ್ಯ**ವೆನಿಸುತ್ತದೆ.

## ವಿವೇಚನೆ

ಇಲ್ಲಿ ಹೇಳಿರುವಂತೆ ಪದಗಳಿಗೆ ಸಾಮಾನಾಧಿಕರಣ್ಯ, ಪದಾರ್ಥಗಳಿಗೆ ವಿಶೇಷಣವಿಶೇಷ್ಯಭಾವಸಂಬಂಧ – ಇವನ್ನು ಹೇಳಿರುವದು ವಾರ್ತಿಕಕಾರರ **"ನೈಷ್ಕರ್ಮ್ಯಸಿದ್ಧಿ"**ಯೇ ಮುಂತಾದ ಗ್ರಂಥಗಳಲ್ಲಿಯೂ ಇದೆ. ಆದರೆ 'ಸೋಽಯಂ ಪುರುಷಃ' (ಆತನೇ ಈ ಮನುಷ್ಯನು) ಎಂಬ ವಾಕ್ಯವನ್ನು ಉದಾಹರಣೆಯಾಗಿ ಕೊಟ್ಟಿರುವದು **"ಪಂಚಪಾದಿಕೆ"**ಯೇ ಮುಂತಾದ ಗ್ರಂಥಗಳಲ್ಲಿ ಕಾಣಬರುತ್ತದೆ. ಜಹಲ್ಲಕ್ಷಣೆ, ಅಜಹಲ್ಲಕ್ಷಣೆ– ಇವೆರಡನ್ನೂ ಬಿಟ್ಟು ಭಾಗ (ಅಥವಾ ಭಾಗತ್ಯಾಗ) ಲಕ್ಷಣೆಯನ್ನು ತತ್ತ್ವಮಸ್ಯಾದಿವಾಕ್ಯಗಳಲ್ಲಿ ಸ್ವೀಕರಿಸಬೇಕು ಎಂಬ ವಿವರವು **"ವೇದಾಂತಸಾರ"**ವೇ ಮುಂತಾದ ಈಚಿನ ಗ್ರಂಥಗಳಲ್ಲಿ ಮಾತ್ರ ಕಾಣಬರುತ್ತದೆ.

## ತತ್ತ್ವಮಸಿವಾಕ್ಯಕ್ಕೆ ಹೊಂದದ ಕೆಲವು ಅರ್ಥಗಳು

**ಪರಸ್ಯಾಂಶೋ ವಿಕಾರೋ ವಾ ಜೀವೋ ವಾಕ್ಯೇನ ನೋಚ್ಯತೇ ॥ ೧೯ ॥**
**ಜೀವಾತ್ಮನಾ ಪ್ರವಿಷ್ಟತ್ವಾತ್ ಸ್ವಮಾಯಾಸೃಷ್ಟಮೂರ್ತಿಷು ।**
**ನಿರಂಶೋ ನಿರ್ವಿಕಾರೋಽಸೌ ಶ್ರುತ್ಯಾ ಯುಕ್ತ್ಯಾ ಚ ಗಮ್ಯತೇ ॥ ೨೦ ॥**
**ಘಟಾಕಾಶೋ ವಿಕಾರೋ ವಾ ನಾಂಶೋ ವಾ ವಿಯತೋ ಯಥಾ ।**
**ತ್ವಮಿನ್ದ್ರೋಽಸೀತಿವದ್ ವಾಕ್ಯಂ ನ ಖಲು ಸ್ತುತಿತತ್ಪರಮ್ ॥ ೨೧ ॥**
**ನ ಸಾದೃಶ್ಯಪರಂ ವಾಕ್ಯಂ ಅಗ್ನಿರ್ಮಾಣವಕಾದಿವತ್ ।**
**ನ ಕಾರ್ಯಕಾರಣತ್ವಸ್ಯ ಸಾಧನಂ ಮೃದ್ಘಟಾದಿವತ್ ॥ ೨೨ ॥**
**ನ ಜಾತಿವ್ಯಕ್ತಿಗಮಕಂ ಗೌಃ ಖಣ್ಡ ಇತಿವದ್ ವಚಃ ।**
**ಗುಣಗುಣ್ಯಾತ್ಮಕಂ ವಾಕ್ಯಂ ನೈತನ್ನೀಲೋತ್ಪಲಾದಿವತ್ ॥ ೨೩ ॥**
**ನೋಪಾಸನಾಪರಂ ವಾಕ್ಯಂ ಪ್ರತಿಮಾಸ್ವೀಶಬುದ್ಧಿವತ್ ।**
**ನ ಚೌಪಚಾರಿಕಂ ವಾಕ್ಯಂ ರಾಜವದ್ ರಾಜಪೂರುಷೇ ॥ ೨೪ ॥**
**ಜೀವಾತ್ಮನಾ ಪ್ರವಿಷ್ಟೋಽಸಾವೀಶ್ವರಃ ಶ್ರೂಯತೇ ಯತಃ ॥ ೨೪ಕ್ಕೆ ॥**

೧೯–೨೪ಕ್ಕೆ. (೧) ಜೀವನು ಪರಮಾತ್ಮನ ಅಂಶವೆಂದಾಗಲಿ ವಿಕಾರವೆಂದಾಗಲಿ (ಈ) ವಾಕ್ಯವು ಹೇಳುತ್ತಿಲ್ಲ ; ಏಕೆಂದರೆ ತನ್ನ ಮಾಯೆಯಿಂದ ಸೃಷ್ಟವಾಗಿರುವ ಸಾಕಾರಪದಾರ್ಥಗಳಲ್ಲಿ ಜೀವಾತ್ಮರೂಪದಿಂದ ಹೊಕ್ಕಿರುತ್ತಾನೆ. (೨) ಆ ಪರಮಾತ್ಮನು ಅಂಶಗಳಿಲ್ಲ

ದವನೆಂದೂ ಯಾವ ವಿಕಾರವೂ ಇಲ್ಲದವನೆಂದೂ ಶ್ರುತಿಯಿಂದಲೂ ಯುಕ್ತಿಯಿಂದಲೂ ತಿಳಿಯಬರುತ್ತದೆ; ಏಕೆಂದರೆ ಘಟಾಕಾಶವು ಆಕಾಶದ ವಿಕಾರವೂ ಅಲ್ಲ, ಅಂಶವೂ ಅಲ್ಲ. (೩) ಈ ವಾಕ್ಯವು 'ನೀನು ಇಂದ್ರನಾಗಿರುವೆ' ಎಂಬ (ವಾಕ್ಯ)ದಂತೆ (ಜೀವನನ್ನು) ಸ್ತುತಿಸುವದರಲ್ಲಿ ತಾತ್ಪರ್ಯವುಳ್ಳದ್ದಲ್ಲವಷ್ಟೆ? (೪) 'ಬ್ರಹ್ಮಚಾರಿಯು ಬೆಂಕಿಯಾಗಿರುತ್ತಾನೆ'- ಎಂಬ ವಾಕ್ಯದಂತೆ ಸಾದೃಶ್ಯವನ್ನು ಹೇಳು ವದರಲ್ಲಿಯೂ ತಾತ್ಪರ್ಯವುಳ್ಳದ್ದಲ್ಲ. (೫) 'ಗಡಿಗೆಯು ಮಣ್ಣು' ಎಂಬುದೇ ಮುಂತಾದ (ವಾಕ್ಯ)ಗಳಂತೆ ಕಾರ್ಯಕಾರಣತ್ವವನ್ನು (ಜೀವಪರಮಾತ್ಮರಿಗೆ) ಸಾಧಿಸುವದಕ್ಕೂ ಬಂದಿಲ್ಲ. (೬) 'ಕುಂಟೆ ಎತ್ತು' ಎಂಬ (ವಾಕ್ಯ)ದಂತೆ (ಇದು) ಜಾತಿವ್ಯಕ್ತಿಗಳ (ಸಂಬಂಧವ) ನ್ನೂ ಹೇಳುತ್ತಿಲ್ಲ; (೭) ಕರಿಯ ನೈದಿಲೆ ಎಂಬಂತೆ ಗುಣಗುಣಿ(ಗಳ ಸಂಬಂಧವನ್ನು ಹೇಳುವ) ಸ್ವರೂಪದ್ದೂ ಅಲ್ಲ. (೮) ಪ್ರತಿಮೆಗಳಲ್ಲಿ ಈಶ್ವರಬುದ್ಧಿ(ಯನ್ನು ಹೇಳುವ ವಾಕ್ಯ)ದಂತೆ ಉಪಾಸನೆ(ಯನ್ನು ಹೇಳುವದರಲ್ಲಿ) ತಾತ್ಪರ್ಯವುಳ್ಳದ್ದೂ ಅಲ್ಲ. (೮) ರಾಜನ (ಪ್ರತಿನಿಧಿ ಯಾದ) ಮನುಷ್ಯನನ್ನು ರಾಜನೆಂದು (ಕರೆಯುವ) ವಾಕ್ಯದಂತೆ (ಗೌಣವೃತ್ತಿಯಿಂದ ಹೇಳುವ) ಉಪಚಾರೋಕ್ತಿಯೂ ಅಲ್ಲ. ಏಕೆಂದರೆ ಈ ಈಶ್ವರನು ಜೀವರೂಪದಿಂದ ಪ್ರವಿಷ್ಟನಾಗಿರುತ್ತಾ ನೆಂದು ಶ್ರುತಿಯಲ್ಲಿದೆ.

## ದೇಹಾದಿಗಳಲ್ಲಿರುವ ಆತ್ಮಬುದ್ಧಿಯು ಭ್ರಾಂತಿಮಾತ್ರವೇ

**ದೇಹೇನ್ದ್ರಿಯಮನೋಬುದ್ಧಿಪ್ರಾಣಾಹಙ್ಕಾರಸಂಹತೌ ॥ ೨೫ ॥**
**ಆತ್ಮಸಂಕಲನಾದಜ್ಞೈರಾತ್ಮತ್ವಂ ಪ್ರತಿಪಾದ್ಯತೇ ।**
**ವಹ್ನಿಧೀಃ ಕಾಷ್ಠಲೋಹಾದೌ ವಹ್ನಿಸಂಕಲನಾದ್ಯಥಾ ॥ ೨೬ ॥**

೨೫-೨೬. ದೇಹ, ಇಂದ್ರಿಯಗಳು, ಮನಸ್ಸು, ಬುದ್ಧಿ, ಪ್ರಾಣ, ಅಹಂಕಾರ- ಇವುಗಳ ಸಂಘಾತದಲ್ಲಿ, ಕಟ್ಟಿಗೆ, ಕಬ್ಬಿಣ- ಮುಂತಾದವುಗಳಲ್ಲಿ ಬೆಂಕಿಯು ಸೇರುವಿಕೆಯಿಂದ ಬೆಂಕಿಯೆಂಬ ಬುದ್ಧಿಯು ಹೇಗೆ ಉಂಟಾಗುವದೋ ಹಾಗೆ- ಆತ್ಮನು ಸೇರಿ ಕೊಂಡಿರುವದರಿಂದ ಅಜ್ಞರು (ಅವುಗಳೇ) ಆತ್ಮನೆನ್ನುತ್ತಿರುತ್ತಾರೆ.

## ವಿವೇಚನೆ

ದೃಷ್ಟಾಂತದಲ್ಲಿ ಜೆಂಕಿಯ ಬಿಸಿಯು ತೋರಿಕೊಳ್ಳುವದಕ್ಕೆ ಹೇಗೆ ಕಟ್ಟಿಗೆ ಕಬ್ಬಿಣ ಮುಂತಾದವುಗಳು ಉಪಾಧಿಯಾಗಿರುತ್ತವೆಯೋ ಹಾಗೆಯೇ ದೇಹಾದಿಗಳು ಆತ್ಮನ ತೋರಿಕೆಗೆ ಬೇಕಾದ ಉಪಾಧಿಗಳು. ಇದನ್ನರಿಯದೆ ಅವನ್ನೇ ಆತ್ಮನು ಎಂದು ಅವಿವೇಕಿಗಳು ಅಧ್ಯಾಸಮಾಡಿಕೊಂಡಿರುತ್ತಾರೆ ಎಂದು ಆಶಯ. ಮುಂದೆ ಪಂಚಕೋಶಗಳಲ್ಲಿ ಆತ್ಮಬುದ್ಧಿಯು ಹೇಗೆ ಭ್ರಾಂತಿಯಿಂದ ಉಂಟಾಗಿರುತ್ತದೆ ಎಂಬುದನ್ನು ವಿವರಿಸಿದೆ. ಈ ವಿವರಣೆಗೆ '**ದೇಹಂ ಪ್ರಾಣಮಪಿ**' ಇತ್ಯಾದಿಯಾಗಿ ಮುಂದೆ ಬರುವ (೫ನೆಯ) ಶ್ಲೋಕವೇ ಸೂಚಕವಾಗಿರುತ್ತದೆ.

**ದೇಹಮನ್ನಮಯಂ ಕೋಶಮಾವಿಶ್ಯಾತ್ಮಾ ಪ್ರಕಾಶತೇ |**
**ಸ್ಥೂಲೋ ಬಾಲಃ ಕೃಶಃ ಕೃಷ್ಣೋ ವರ್ಣಾಶ್ರಮವಿಕಲ್ಪವಾನ್ || ೨೭ ||**
**ಪ್ರಾಣಕೋಶೇಽಪಿ ಜೀವಾಮಿ ಕ್ಷುಧಿತೋಽಸ್ಮಿ ಪಿಪಾಸಿತಃ |**
**ಸಂಶಿತೋ(?) ನಿಶ್ಚಿತೋ ಮನ್ಯೇ ಇತಿ ಕೋಶೇ ಮನೋಮಯೇ ||೨೮||**
**ವಿಜ್ಞಾನಮಯಕೋಶಸ್ಥೋ ವಿಜಾನಾಮೀತಿ ತಿಷ್ಠತಿ |**
**ಆನನ್ದಮಯಕೋಶಾಖ್ಯೇ ತ್ವಹಙ್ಕಾರೇ ಪುರಾಕೃತೈಃ || ೨೯ ||**
**ಪುಣ್ಯೈರುಪಾಸನಾಭಿಶ್ಚ ಸುಖಿತೋಽಸ್ಮೀತಿ ಮನ್ಯತೇ |**
**ಏವಂ ಕಞ್ಚುಕಿತಃ ಕೋಶೈಃ ಕಞ್ಚುಕೈರಿವ ಪಞ್ಚಭಿಃ || ೩೦ ||**
**ಪರಿಚ್ಛಿನ್ನ ಇವಾಭಾತಿ ವ್ಯಾಪ್ತೋಽಪಿ ಪರಮೇಶ್ವರಃ || ೩೧ ||**

೨೭-೩೧. **ಅನ್ನಮಯಕೋಶ**ವಾದ ದೇಹವನ್ನು ಪ್ರವೇಶಿಸಿ ದಪ್ಪಗಿರುವವನು, ಹುಡುಗನು, ಬಡಕಲಾಗಿರುವವನು, ಕಪ್ಪಗಿರುವನನು, ವರ್ಣ, ಆಶ್ರಮ- ಮುಂತಾದ ವಿಕಲ್ಪಗಳುಳ್ಳವನು ಎಂದು ತೋರಿಕೊಳ್ಳುತ್ತಾನೆ. **ಪ್ರಾಣ(ಮಯ)ಕೋಶದಲ್ಲಿ**ಯೂ (ಪ್ರವೇಶಿಸಿ) ಬದುಕಿದ್ದೇನೆ, ಹಸಿವನ್ನುಳ್ಳವನಾಗಿದ್ದೇನೆ; ನೀರಡಿಕೆಯಾದವನಾಗಿರುವೆನು -ಎಂದೂ **ಮನೋಮಯಕೋಶ**ದಲ್ಲಿ (ಹೊಕ್ಕು) ಸಂಶಯವುಳ್ಳವನು, ನಿಶ್ಚಯವನ್ನು ಹೊಂದಿರುವೆನು, ಆಲೋಚಿಸುತ್ತೇನೆ- ಎಂದೂ (ತೋರಿಕೊಳ್ಳುತ್ತಾನೆ). **ವಿಜ್ಞಾನಮಯಕೋಶ**ದಲ್ಲಿದ್ದುಕೊಂಡು ಅರಿಯುತ್ತೇನೆ ಎಂಬ (ರೂಪದಿಂದ) ಇರುತ್ತಾನೆ. **ಆನಂದಮಯಕೋಶ**ವೆಂಬ ಅಹಂಕಾರದಲ್ಲಾದರೊ, ಹಿಂದೆ ಮಾಡಿದ ಪುಣ್ಯಕರ್ಮಗಳಿಂದಲೂ ಉಪಾಸನೆಗಳಿಂದಲೂ ಸುಖಿಯಾಗಿದ್ದೇನೆ ಎಂದು ಎಣಿಸಿಕೊಳ್ಳುತ್ತಾನೆ. ಹೀಗೆ ಕವಚಗಳಂತೆ ಇರುವ ಐದು

ಕೋಶಗಳಿಂದ ಮುಸುಕಲ್ಪಟ್ಟಿರುವ ಪರಮೇಶ್ವರನು (ಸ್ವರೂಪದಿಂದ) ಸರ್ವವ್ಯಾಪಿಯಾಗಿದ್ದರೂ ಅಳತೆಗೆ ಕಟ್ಟುಬಿದ್ದವನಂತೆ ಕಾಣುತ್ತಿರುತ್ತಾನೆ.

## ವಿವೇಚನೆ

ಇಲ್ಲಿರುವ ಪಂಚಕೋಶವಿವರಣೆಯನ್ನು ತೈತ್ತಿರೀಯಭಾಷ್ಯದಲ್ಲಿಯೂ ಆ ಭಾಷ್ಯದ ವಾರ್ತಿಕದಲ್ಲಿಯೂ ಇರುವ ವ್ಯಾಖ್ಯಾನಕ್ಕೆ ಹೋಲಿಸಿನೋಡಬೇಕು.

**ಯಥಾ ಸಲಿಲಮಾವಿಶ್ಯ ಬಹುಧಾ ಭಾತಿ ಭಾಸ್ಕರಃ** || ೩೧ ||
**ತಥಾ ಶರೀರಾಣ್ಯಾವಿಶ್ಯ ಬಹುಧಾ ಸ್ಫುರತೀಶ್ವರಃ** || ೩೧½ ||

೩೧-೩೧½. ನೀರನ್ನು ಹೊಕ್ಕಿರುವ ಸೂರ್ಯನು ಹೇಗೆ ಅನೇಕ ರೂಪವುಳ್ಳವನಾಗಿ ತೋರುತ್ತಾನೋ ಹಾಗೆಯೇ ಶರೀರಗಳನ್ನು ಹೊಕ್ಕ ಈಶ್ವರನು ಬಹುಪ್ರಕಾರದಿಂದ ತೋರಿಕೊಳ್ಳುತ್ತಾನೆ.

## ವಿವೇಚನೆ

ಹಿಂದೆ ಜೀವನ ಬೇರೆಬೇರೆಯ ಧರ್ಮಗಳ ಅಧ್ಯಾಸಕ್ಕೆ ಆಯಾ ಕೋಶಗಳ ಸಂಬಂಧವೇ ಕಾರಣವೆಂದು ಹೇಳಿದ್ದಾಗಿದೆ. ಇಲ್ಲಿ ಜೀವಬಹುತ್ವಕ್ಕೆ ಕಾರಣವೇನೆಂಬುದನ್ನು ಹೇಳಿದೆ. ಸೂತ್ರಭಾಷ್ಯದಲ್ಲಿರುವ **ಉಭಯಲಿಂಗಾಧಿಕರಣಭಾಷ್ಯ**ವನ್ನು ಇಲ್ಲಿ ಹೋಲಿಕೆಗೆ ಓದಬೇಕು. ಸೂರ್ಯನ ಪ್ರತಿಬಿಂಬಗಳು ಅನೇಕವಾಗಿರುವಂತೆ ಆತ್ಮನು ಕ್ಷೇತ್ರಗಳ ಸಂಬಂಧದಿಂದ ಅನೇಕವಾಗಿ ಕಾಣುತ್ತಾನೆ. (ಸೂ. ಭಾ. ೩-೨-೧೮) ಎಂಬುದಕ್ಕೆ ಉದಾಹರಿಸಿರುವ **'ಯಥಾ ಹ್ಯಯಂ ಜ್ಯೋತಿರಾತ್ಮಾ ವಿವಸ್ವಾನ್'** (?) ಎಂಬ ವಾಕ್ಯವನ್ನೂ ಪ್ರತಿಬಿಂಬಗಳ ವಿಷಯಕ್ಕೆ ಅಲ್ಲಿ ಮಾಡಿರುವ ವಿಮರ್ಶೆಯನ್ನೂ ಮನಸದಂದುಕೊಳ್ಳುವದರಿಂದ ಪ್ರಯೋಜನವುಂಟು. ಗ್ರಂಥಕರ್ತರಿಗೆ ಆ ಶಾಸ್ತ್ರವಚನವು ಹೃದಯದಲ್ಲಿದ್ದರೂ ಇರಬಹುದು.

## ಆತ್ಮನ ತಟಸ್ಥಸ್ವರೂಪಲಕ್ಷಣಗಳು

**ಕಾರಣತ್ವಂ ಚ ಕಾರ್ಯತ್ವಂ ತಟಸ್ಥಂ ಲಕ್ಷಣಂ ತಯೋಃ** || ೩೨ ||
**ಶಾಖಾಯಾಂ ಚನ್ದ್ರ ಇತಿವನ್ನೈವ ಮುಖ್ಯಮಿದಂ ಮತಮ್ ।**
**ಮಹಾಪ್ರಕಾಶ ಇತ್ಯುಕ್ತಂ ಸ್ವರೂಪಂ ಚನ್ದ್ರಲಕ್ಷಣಮ್** || ೩೩ ||
**ಸಚ್ಚಿದಾನನ್ದರೂಪತ್ವಂ ಸ್ವರೂಪಂ ಲಕ್ಷಣಂ ತಯೋಃ ।**
**ಏಕಲಕ್ಷಣಯೋರೈಕ್ಯಂ ವಾಕ್ಯೇನ ಪ್ರತಿಪಾದ್ಯತೇ** || ೩೪ ||
**ತಸ್ಮಾದೇಕಪ್ರಕಾಶತ್ವಂ ಸರ್ವಾತ್ಮತ್ವಮಿತಿ ಸ್ಥಿತಮ್** || ೩೪½ ||

೩೨-೩೪. ಆ (ಪರಮಾತ್ಮಜೀವರುಗಳಿಗೆ ಕ್ರಮವಾಗಿ) ಕಾರಣತ್ವವೂ ಕಾರ್ಯತ್ವವೂ ಶ್ರುತಿಯಲ್ಲಿ (ಹೇಳಿರುವದು) 'ಕೊಂಬೆಯಮೇಲೆ ಚಂದ್ರನು (ಇದಾನೆ) ಎಂಬ ವಾಕ್ಯದಂತೆ **ತಟಸ್ಥಲಕ್ಷಣವು,** ಇದು ಮುಖ್ಯಲಕ್ಷಣವಲ್ಲವೇ ಅಲ್ಲ. 'ಮಹಾಪ್ರಕಾಶ(ಸ್ವರೂಪನು)' ಎಂದು ಹೇಳಿದರೆ ಚಂದ್ರನಿಗೆ ಸ್ವರೂಪಲಕ್ಷಣವು; (ಹಾಗೆಯೇ) ಸಚ್ಚಿದಾನಂದರೂಪತ್ವವೆಂಬುದು ಅವರಿಬ್ಬರಿಗೂ **ಸ್ವರೂಪಲಕ್ಷಣವು.** ಈ ಒಂದೇ ಲಕ್ಷಣವುಳ್ಳ ಇಬ್ಬರಿಗೂ ಐಕ್ಯವು (ತತ್ತ್ವಮಸಿ)ವಾಕ್ಯದಿಂದ ಪ್ರತಿಪಾದಿತವಾಗಿರುತ್ತದೆ. ಆದ್ದರಿಂದ ಪ್ರಕಾಶತ್ವವೊಂದೇ ಸರ್ವಾತ್ಮತ್ವವು ಎಂದು ಸಿದ್ಧವಾಯಿತು.

## ವಿವೇಚನೆ

ಹೀಗೆ ಕೂಟಸ್ಥಲಕ್ಷಣಸ್ವರೂಪಲಕ್ಷಣಗಳನ್ನು ವಿವೇಚಿಸಿ ಸ್ವರೂಪಲಕ್ಷಣಮಾತ್ರದಿಂದ ಐಕ್ಯವನ್ನು ಹೇಳಿದೆ- ಎಂಬ ಪರಿಭಾಷೆಯು ಭಾಷ್ಯದಲ್ಲಿಯೇ ಆಗಲಿ ವಾರ್ತಿಕಗಳಲ್ಲಿಯೇ ಆಗಲಿ ಕಂಡುಬರುವದಿಲ್ಲ. ಈಚಿನ ವ್ಯಾಖ್ಯಾನಪ್ರಸ್ಥಾನಗಳಲ್ಲಿ ಇದು ಪ್ರಚುರವಾಗಿರುತ್ತದೆ.

## ಸರ್ವಾತ್ಮತ್ವವಿಚಾರ

**ದೇವತಿರ್ಯಙ್ಮನುಷ್ಯಾಣಾಂ ಪ್ರಕಾಶಾನ್ನ ಪೃಥಕ್ ಸ್ಥಿತಿಃ ॥ ೩೫ ॥**
**ಜೀವಃ ಪ್ರಕಾಶಾಭಿನ್ನತ್ವಾತ್ ಸರ್ವಾತ್ಮೇತ್ಯಭಿಧೀಯತೇ ।**
**ಏವಂ ಪ್ರಕಾಶರೂಪತ್ವಪರಿಜ್ಞಾನೇ ದೃಢೀಕೃತೇ ॥ ೩೬ ॥**
**ಪುನರಾವೃತ್ತಿರಹಿತಃ ಕೈವಲ್ಯಂ ಪದಮಶ್ನುತೇ ।**
**ಸಕೃತ್ ಪ್ರಸಕ್ತಮಾತ್ರೋಽಪಿ ಸರ್ವಾತ್ಮತ್ವೇ ಯದೃಚ್ಛಯಾ ॥ ೩೭ ॥**
**ಸರ್ವಪಾಪವಿನಿರ್ಮುಕ್ತಃ ಶಿವಲೋಕೇ ಮಹೀಯತೇ ।**
**ಸರ್ವಾತ್ಮಭಾವನಾ ಯಸ್ಯ ಪರಿಪಕ್ವಾ ಮಹಾತ್ಮನಃ ॥ ೩೮ ॥**
**ಸಂಸಾರತಾರಕಃ ಸಾಕ್ಷಾತ್ ಸ ಏವ ಪರಮೇಶ್ವರಃ ॥ ೩೯ ॥**

೩೫-೩೯. ದೇವತೆಗಳು, ತಿರ್ಯಕ್ಪ್ರಾಣಿಗಳು, ಮನುಷ್ಯರು -ಇವರಿಗೆ ಪ್ರಕಾಶಕ್ಕಿಂತ ಬೇರೆಯಾಗಿ ಸ್ಥಿತಿಯಿರುವದಿಲ್ಲ. ಜೀವನು ಪ್ರಕಾಶಕ್ಕಿಂತ ಭಿನ್ನನಲ್ಲವಾದ್ದರಿಂದ ಸರ್ವಾತ್ಮನು ಎನ್ನಿಸಿಕೊಳ್ಳುತ್ತಾನೆ. ಹೀಗೆ ಪ್ರಕಾಶರೂಪತ್ವದ ಜ್ಞಾನವು ದೃಢವಾದರೆ ಮತ್ತೆ (ಸಂಸಾರಕ್ಕೆ) ಹಿಂತಿರುಗುವಿಕೆಯಿಲ್ಲದ ಕೈವಲ್ಯಪದವನ್ನು ಪಡೆದು

ಕೊಳ್ಳುತ್ತಾನೆ. ಸರ್ವಾತ್ಮದಲ್ಲಿ ಆಕಸ್ಮಾತ್ತಾಗಿ ಒಮ್ಮೆ ಸೇರಿಕೊಂಡರೂ ಸರ್ವಪಾಪಗಳಿಂದಲೂ ಮುಕ್ತನಾಗಿ ಶಿವಲೋಕದಲ್ಲಿ ಪೂಜ್ಯನಾಗುತ್ತಾನೆ. ಯಾವ ಮಹಾತ್ಮನಿಗೆ ಸರ್ವಾತ್ಮಭಾವನೆಯು ಪರಿಪಕ್ವವಾಗುವದೋ ಅವನೇ ಸಂಸಾರತಾರಕನಾದ ಸಾಕ್ಷಾತ್ ಪರಮೇಶ್ವರನು.

**ವಿವೇಚನೆ**

ಚಿನ್ಮಾತ್ರಪ್ರಕಾಶಕ್ಕಿಂತ ತಾನು ಬೇರೆಯಲ್ಲ ಎಂಬ ತಿಳಿವಳಿಕೆಯೇ ಸರ್ವಾತ್ಮತ್ವವು ಎಂದು ಇಲ್ಲಿ ಹೇಳಿರುತ್ತದೆ. ಮುಂದೆ '**ಸರ್ವಾತ್ಮತ್ವಮಿತಿ ಸ್ಫುಟೀಕೃತಮ್**' (೧೦) ಎಂಬ ಶ್ಲೋಕದ ವಿವರಣೆಯು ಬಂದಾಗ ಇದರ ವಿಚಾರವನ್ನು ಮತ್ತೆ ವಿಮರ್ಶೆಗೆ ತೆಗೆದುಕೊಳ್ಳುವೆವು. ಸರ್ವಾತ್ಮತ್ವಭಾವನೆಯು ಪರಿಪಕ್ವವಾಗುವದೆಂತಹರೆನೆಂಬುದನ್ನೂ ಮತ್ತೆ ಅಲ್ಲಿ ವಿಚಾರಕ್ಕೆ ತೆಗೆದುಕೊಳ್ಳುವೆವು.

**ಇತಿ ಶ್ರೀ ದಕ್ಷಿಣಾಮೂರ್ತಿಸ್ತೋತ್ರಾರ್ಥಪ್ರತಿಪಾದಕೇ ।**
**ಪ್ರಬನ್ಧೇ ಮಾನಸೋಲ್ಲಾಸೇ ತೃತೀಯೋಲ್ಲಾಸಸಂಗ್ರಹಃ ॥ ೩೯ ॥**

೩೯. ಇಂತು ಶ್ರೀದಕ್ಷಿಣಾಮೂರ್ತಿಸ್ತೋತ್ರದ ಅರ್ಥವನ್ನು ಪ್ರತಿಪಾದಿಸುವ ಪ್ರಬಂಧವಾದ ಮಾನಸೋಲ್ಲಾಸದಲ್ಲಿ ಮೂರನೆಯ ಉಲ್ಲಾಸಸಂಗ್ರಹವು ಮುಗಿಯಿತು.

# ೪. ಸ್ವಯಂಪ್ರಕಾಶನಾದ ಈಶ್ವರನ ಜ್ಞಾನ

## ಅವತರಣಿಕೆ

**ಸ್ವತಃ ಸನ್ತಃ ಪ್ರಕಾಶನ್ತೇ ಭಾವಾ ಘಟಪಟಾದಯಃ ।**
**ನೇಶ್ವರಸ್ಯ ಸಮಾವೇಶಾದಿತ್ಯಸ್ಯೋತ್ತರಮುಚ್ಯತೇ ॥ ೧ ॥**

೧. ಗಡಿಗೆ, ಬಟ್ಟೆ- ಮುಂತಾದ ವಸ್ತುಗಳು ತಾವೇ ಇದ್ದು ಕೊಂಡಿರುವದರಿಂದ ತೋರಿಕೊಳ್ಳುತ್ತಿರುವವೇ ಹೊರತು ಈಶ್ವರನು (ಒಳ)ಹೊಕ್ಕಿರುವದರಿಂದಲ್ಲ- ಎಂಬ (ಶಂಕೆಗೆ) ಉತ್ತರವನ್ನು (ಇಲ್ಲಿ) ಹೇಳಲಾಗುತ್ತದೆ.

**ನಾನಾಚ್ಛಿದ್ರಘಟೋದರಸ್ಥಿತಮಹಾದೀಪಪ್ರಭಾಭಾಸ್ವರಂ ।**
**ಜ್ಞಾನಂ ಯಸ್ಯ ತು ಚಕ್ಷುರಾದಿಕರಣದ್ವಾರಾ ಬಹಿಃ ಸ್ಪನ್ದತೇ ॥**
**ಜಾನಾಮೀತಿ ತಮೇವ ಭಾನ್ತಮನುಭಾತ್ಯೇತತ್ ಸಮಸ್ತಂ ಜಗತ್ ।**
**ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ ಶ್ರೀದಕ್ಷಿಣಾಮೂರ್ತಯೇ ॥ ೪ ॥**

೪. ಅನೇಕ ವಿಧವಾದ ರಂಧ್ರಗಳುಳ್ಳ ಗಡಿಗೆಯೊಳಗಿರುವ ದೊಡ್ಡದೀಪದ ಬೆಳಕಿನಂತೆ ಬೆಳಗುತ್ತಿರುವ ಯಾವಾತನ ಜ್ಞಾನವು ಚಕ್ಷುಸ್ಸೇ ಮುಂತಾದ ಕರಣಗಳ ಮೂಲಕವಾಗಿ ಹೊರಕ್ಕೆ ಹೊರಟುಬರುತ್ತಿರುವದೋ, 'ಅರಿಯುತ್ತಿದೇನೆ' ಎಂದು ತೋರಿಕೊಳ್ಳುತ್ತಿರುವ ಆತನನ್ನೇ ಅನುಸರಿಸಿಕೊಂಡು ಈ ಜಗತ್ತೆಲ್ಲವೂ ತೋರಿಕೊಳ್ಳುತ್ತಿರುವದೋ ಆ ಶ್ರೀಗುರುಮೂರ್ತಿಯಾದ ಶ್ರೀದಕ್ಷಿಣಾಮೂರ್ತಿಗೆ ಈ ನಮಸ್ಕಾರ !

## ಆತ್ಮನ ಅನುಸಂಧಾನವಿಲ್ಲದಿದ್ದರೆ ಏನು ಅನಿಷ್ಟ ?

**ಅಸ್ಯಾಯಂ ಭಾವಃ—**
**ಅಹಮಿತ್ಯನುಸನ್ಧಾತಾ ಜಾನಾಮೀತಿ ನ ಚೇತ್ ಸ್ಫುರೇತ್ ।**
**ಕಸ್ಯ ಕೋ ವಾ ಪ್ರಕಾಶೇತ ಜಗಚ್ಚ ಸ್ಯಾತ್ ಸುಷುಪ್ತವತ್ ॥ ೨ ॥**

೨. ಈ ಶ್ಲೋಕಕ್ಕೆ ಇದು ಭಾವವು : ಅರಿಯುವಾತನು 'ಅರಿಯುತ್ತಿದೇನೆ' ಎಂದು ತೋರಿಕೊಳ್ಳದೆ ಇದ್ದರೆ ಯಾವನಿಗೆ ಯಾವ (ಪದಾರ್ಥವು)ತಾನೆ ತೋರೀತು? ಮತ್ತು ಜಗತ್ತು ಗಾಢ ನಿದ್ರೆಯಂತೆ ಆಗಿಬಿಟ್ಟೀತು !

## ವಿವೇಚನೆ

'ನಾನು ಇದನ್ನು ಅರಿಯುತ್ತಿದೇನೆ'- ಎಂಬ ಅನುಸಂಧಾನವಿರುವದರಿಂದಲೇ ಎಲ್ಲವೂ ತೋರುತ್ತಿದೆ. ಅದಿಲ್ಲದಿದ್ದರೆ ಏನುತಾನೆ ತೋರಬೇಕು ? ಜ್ಞಾತೃವಿಗಲ್ಲವೆ

ಜ್ಞೇಯವು ತೋರುವದು ? ನಿದ್ರೆಯಲ್ಲಿ ಜ್ಞಾತೃವಿನ ಅರಿವೂ ಇಲ್ಲ; ಆದ್ದರಿಂದಲೇ ಏನೂ ತೋರುವದೇ ಇಲ್ಲ ಎಂದರ್ಥ. ಸುಷುಪ್ತಿಯ ವಿಚಾರದ ವಿಮರ್ಶೆಯನ್ನು ಮುಂದೆ (೬–೭ನೆಯ ಶ್ಲೋಕಗಳ) ವಿವರಣೆಯಲ್ಲಿ ವಿವೇಚನೆಗೆ ಮತ್ತೆ ತೆಗೆದುಕೊಳ್ಳಲಾಗುವದು.

## ಜಡವಸ್ತುಗಳಿಗೆ ಸ್ವತಃ ಪ್ರಕಾಶವಿಲ್ಲ

**ಪ್ರಾಗೂರ್ಧ್ವಂ ಚಾಸತಾಂ ಸತ್ತ್ವಂ ವರ್ತಮಾನೇಽಪಿ ನ ಸ್ವತಃ ।**
**ತಸ್ಮಾದೀಶೇ ಸ್ಥಿತಂ ಸತ್ತ್ವಂ ಪ್ರಾಗೂರ್ಧ್ವತ್ವವಿವರ್ಜಿತೇ ॥ ೩ ॥**

೩. ಹುಟ್ಟುವದಕ್ಕೆ ಮುಂಚೆಯೂ (ನಾಶವಾದ)ಮೇಲೂ ಇಲ್ಲದಿರುವ ಬಾಹ್ಯಪದಾರ್ಥಗಳಿಗೆ ಈಗಿನ ಕಾಲದಲ್ಲಿಯೂ ಸ್ವತಃ ಇರುವಿಕೆಯಿಲ್ಲ. ಆದ್ದರಿಂದ ಸತ್ತ್ವವು ಹಿಂದೆಮುಂದೆ ಎಂಬುದಿಲ್ಲದ ಈಶ್ವರನಲ್ಲಿಯೇ ಇದೆ.

**ಸ್ವಯಮೇವ ಪ್ರಕಾಶೇರನ್ ಜಡಾ ಯದಿ ವಿನೇಶ್ವರಮ್ ।**
**ಸರ್ವಂ ಸರ್ವಸ್ಯ ಭಾಸೇತ ನ ವಾ ಭಾಸೇತ ಕಿಞ್ಚನ ॥ ೪ ॥**

**ತಸ್ಮಾತ್ ಸರ್ವಜ್ಞಮಜ್ಞಂ ವಾ ಜಗತ್ ಸ್ಯಾದೇಕರೂಪಕಮ್ ।**
**ತುಲ್ಯೇ ಸ್ವಯಂಪ್ರಕಾಶತ್ವೇ ಜಡಚೇತನಯೋರ್ಮಿಥಃ ॥ ೫ ॥**

**ತುಲ್ಯಮೇವ ಪ್ರಸಜ್ಯೇರನ್ ಗ್ರಾಹ್ಯಗ್ರಾಹಕತಾದಯಃ ।**
**ಇನ್ದ್ರಿಯಾಣಾಮನಿಯಮಾಚ್ಚಾಕ್ಷುಷಾಸ್ಸ್ಯೂ ರಸಾದಯಃ ॥ ೬ ॥**

೪–೬. ಜಡವಸ್ತುಗಳು ಈಶ್ವರನಿಲ್ಲದೆ ತಾವೇ ತೋರಿಕೊಳ್ಳಬಹುದಲ್ಲ ! ಎನ್ನುವದಾದರೆ ಪ್ರತಿಯೊಂದು ವಸ್ತುವೂ ಪ್ರತಿಯೊಬ್ಬನಿಗೂ ಕಾಣಬಹುದಾಗುವದು, ಅಥವಾ ಯಾವದೊಂದೂ ಕಾಣಬಾರದಾಗುವದು. ಆ ಕಾರಣದಿಂದ ಈ ಜಗತ್ತು ಸರ್ವಜ್ಞವೇ, ಅಥವಾ ಇದೆಲ್ಲವೂ ಏನೂ ಅರಿಯಲಾರದ್ದೇ– ಎಂದು ಒಂದೇ ರೂಪದ್ದಾಗಿರಬೇಕಾಗಿತ್ತು ! ಸ್ವಯಂಪ್ರಕಾಶತ್ವವು ಜಡಚೇತನಗಳೆರಡಕ್ಕೂ ಸಮಾನವಾಗಿದ್ದರೆ ಗ್ರಾಹ್ಯತ್ವ, ಗ್ರಾಹಕತ್ವ– ಮುಂತಾದವುಗಳು ಸಮಾನವಾಗಿಯೇ ಇರಬೇಕಾಗಿಬಂದು ಅನಿಷ್ಟಪ್ರಸಂಗವಾದೀತು ! ಇಂದ್ರಿಯಗಳು (ಇಂಥವೇ) ಎಂಬ ನಿಯಮವಿಲ್ಲದ್ದರಿಂದ ರುಚಿಯೇ ಮುಂತಾದವುಗಳು (ಕೂಡ) ಚಕ್ಷುರಿಂದ್ರಿಯಕ್ಕೇ ಗೋಚರವಾದಾವು !

## ವಿವೇಚನೆ

ಕೇವಲ ತರ್ಕದೃಷ್ಟಿಯಿಂದ ನೋಡಿದರೂ ತಾವೇ ಪ್ರಕಾಶಿಸುವ ವಸ್ತುಗಳು ಒಂದು ಕಾಲದಲ್ಲಿ ಒಬ್ಬನಿಗೆ ತೋರುವದು, ಮತ್ತೊಬ್ಬನಿಗೆ ತೋರದಿರುವದು- ಹೀಗೆ ಆಗುವದಕ್ಕೆ ಕಾರಣವೇ ಇಲ್ಲ. ಅವು ಇರುತ್ತಿರಲೇಬಹುದು, ಅಥವಾ ತೋರಲೇಬಾರದು. ಸ್ವಭಾವವು ಮಾರ್ಪಡುವದು ಹೇಗೆ? ಹೀಗೆಯೇ ಜಡವಸ್ತುಗಳಿಗೂ ಸ್ವಯಂಪ್ರಕಾಶತ್ವವಿದೆ ಎನ್ನುವದಾದರೆ ಇದು ಗ್ರಾಹಕವಾದ ಇಂದ್ರಿಯ, ಇದು ಗ್ರಾಹ್ಯವಾದ ವಿಷಯ- ಎಂಬ ವಿಂಗಡವಾಗಲಿ, ಇಂಥ ಇಂದ್ರಿಯಕ್ಕೆ ಇಂಥದ್ದೇ ನಿಯತವಾಗಿ ವಿಷಯ- ಎಂಬ ವಿಂಗಡವಾಗಲಿ ಇರುತ್ತಿರಲಿಲ್ಲ- ಎಂಬ ಅನಿಷ್ಟವೂ ಪ್ರಸಕ್ತವಾಗುತ್ತಿತ್ತು ಎಂದು ಅಭಿಪ್ರಾಯ.

ಈ ಭಾಗದಲ್ಲಿ ಜಡವಸ್ತುಗಳೂ ತಾವೇ ತೋರುತ್ತವೆಯೆಂದೂ ಆತ್ಮನಂತೆ ಅವುಗಳೂ ಸ್ವಯಂಪ್ರಕಾಶವೆಂದೂ ಮಾಡಿದ ಆಕ್ಷೇಪವೇ ಅನುಭವವಿರುದ್ಧವಾಗಿರುತ್ತದೆಯಾದ್ದರಿಂದ ಈ ಸ್ವಯಂಪ್ರಕಾಶತ್ವವಿಷಯದ ಆಕ್ಷೇಪವನ್ನು ಎತ್ತಿ ತರ್ಕದಿಂದ ಅದನ್ನು ಖಂಡಿಸುವದಕ್ಕೆ ಹೊರಟಿರುವದೇ ಸರಿಯಲ್ಲವೆಂದು ನಮಗೆ ತೋರುತ್ತದೆ. ಹೀಗೆ ಸಾಧಿಸುವದಕ್ಕೆ ಹೊರಟಿರುವದು ವ್ಯಾಖ್ಯಾನಪ್ರಸ್ಥಾನದ ಗ್ರಂಥಗಳಲ್ಲಿ ಅಲ್ಲಲ್ಲಿ ಕಂಡುಬರುತ್ತದೆ.

## ಈಶ್ವರನ ಜ್ಞಾನವು ಜಡವಸ್ತುಗಳಲ್ಲಿ ತೋರುವ ಪ್ರಕಾರ

**ಮಲಿನಾಮಲಿನಾದರ್ಶಪಶ್ಚಾತ್ಪ್ರಾಗ್ಭಾಗತುಲ್ಯಯೋಃ |**
**ಕ್ರಿಯಾಶಕ್ತಿಜ್ಞಾನಶಕ್ತ್ಯೋರನ್ತಃಕರಣಭಾಗಯೋಃ ॥ ೭ ॥**
**ಪ್ರತಿಬಿಮ್ಬೇ ಸ್ಫುರನ್ನೀಶಃ ಕರ್ತಾ ಜ್ಞಾತೇತಿ ಮನ್ಯತೇ ॥ ೭½ ॥**

೭-೭½. ಮಲಿನವಾಗಿರುವ ಮತ್ತು ಮಲಿನವಿಲ್ಲದ ಕನ್ನಡಿಯ ಹಿಂದಿನ ಮತ್ತು ಮುಂದಿನ ಭಾಗದಂತೆ ಇರುವ, ಅಂತಃಕರಣದ ಭಾಗಗಳಾದ ಕ್ರಿಯಾಶಕ್ತಿ, ಜ್ಞಾನಶಕ್ತಿ- ಇವುಗಳ ಪ್ರತಿಬಿಂಬದಲ್ಲಿ ತೋರಿಕೊಳ್ಳುವ ಈಶ್ವರನು **ಕರ್ತೃ**ವೆಂದೂ **ಜ್ಞಾತೃ**ವೆಂದೂ ಎಣಿಸಲ್ಪಡುತ್ತಾನೆ.

## ವಿವೇಚನೆ

ಸರ್ವಜ್ಞನೂ ಸರ್ವಶಕ್ತನೂ ಆಗಿರುವ ಈಶ್ವರನೇ ಅಲ್ಪಜ್ಞನೂ ಅಲ್ಪಶಕ್ತಿಯುಳ್ಳವನೂ ಆಗಿರುವ ಜೀವನಾಗಿ ತೋರುವದಕ್ಕೇನು ಕಾರಣ ?- ಎಂಬ ಪ್ರಶ್ನೆಗೆ ಗ್ರಂಥಕರ್ತರು ಕಲ್ಪಿಸಿರುವ ಪ್ರಕ್ರಿಯೆಯಿದು. ಮಲಿನವಾಗಿರುವ ಕನ್ನಡಿಯ ಹಿಂಭಾಗದಲ್ಲಿ ತೋರಿಬರುವ ಪ್ರತಿಬಿಂಬಗಳು ಬೇರೆಬೇರೆಯಾಗಿ ಕಾಣುವಂತೆ

ಅಂತಃಕರಣದ ಅಂಶಗಳಾಗಿರುವ ಕ್ರಿಯಾಶಕ್ತಿಜ್ಞಾನಶಕ್ತಿಗಳ ವಿಭಾಗದಿಂದ ಆತ್ಮನಿಗೆ ಕರ್ತೃತ್ವವೂ ಜ್ಞಾತೃತ್ವವೂ ಬಂದಿರುತ್ತದೆ- ಎಂದು ಭಾವ. ಇಲ್ಲಿ ಅಂತಃಕರಣವೂ ಅಧ್ಯಸ್ತವೇ ಆಗಿರುತ್ತದೆ ಎಂಬುದನ್ನು ಹೇಳದೆ, 'ಉಪಾಧಿಯಿಂದ ಆತ್ಮನಿಗೆ ಕರ್ತೃತ್ವ ಜ್ಞಾತೃತ್ವಗಳು ತೋರುತ್ತವೆ ಎಂದು ಏಕೆ ವರ್ಣಿಸುವದಕ್ಕೆ ಆರಂಭಿಸಿದೆ ?'- ಎಂಬುದು ಸ್ಪಷ್ಟವಾಗಿ ಗೊತ್ತಾಗುವಂತಿಲ್ಲ. ಶರೀರೇಂದ್ರಿಯಮನಸ್ಸುಗಳಲ್ಲಿ 'ನಾನು', 'ನನ್ನದು'-ಎಂಬ ಅಧ್ಯಾಸವಾಗಿರುವದರಿಂದಲೂ ಸ್ವತಃ ಶರೀರೇಂದ್ರಿಯ ಗಳು ಅನೃತವಾಗಿರುವದರಿಂದಲೂ ಆತ್ಮನ ಕರ್ತೃತ್ವವೂ ಜ್ಞಾತೃತ್ವವೂ ಅಧ್ಯಾಸ ಕೃತವೆಂದು ಭಾಷ್ಯಕಾರರು ಹೇಳಿರುವದರ ಪರಾಮರ್ಶವು ಇಲ್ಲ.

## ಆತ್ಮಚೈತನ್ಯವು ಹೊರಹೊಮ್ಮುವ ಪ್ರಕಾರ

**ಬುದ್ಧಿಃ ಸತ್ತ್ವಗುಣೋತ್ಕರ್ಷಾನ್ನಿರ್ಮಲೋ ದರ್ಪಣೋ ಯಥಾ ॥ ೮ ॥**
**ಗೃಹ್ಣಾತಿ ವಿಷಯಚ್ಛಾಯಾಮಾತ್ಮಚ್ಛಾಯಾನುಭಾವತಃ ।**
**ಅನ್ತಃಕರಣಸಂಬನ್ಧಾನ್ನಿಖಿಲಾನೀನ್ದ್ರಿಯಾಣ್ಯಪಿ ॥ ೯ ॥**
**ರಥಾಙ್ಗನೇಮಿವಲಯೇ ಕೀಲಿಕಾ ಇವ ಕೀಲಿಕಾಃ ।**
**ನಾಡ್ಯೋಽನ್ತಃಕರಣೇ ಸ್ಯೂತಾ ಜಾಲಸಂಸ್ಯೂತಸೂತ್ರವತ್ ॥ ೧೦ ॥**
**ತಾಭಿಸ್ತು ಗೋಲಕಾನ್ತಾಭಿಃ ಪ್ರಸರ್ಪನ್ತಿ ಸ್ಫುಲಿಙ್ಗವತ್ ।**
**ಕರಣಾನಿ ಸಮಸ್ತಾನಿ ಯಥಾ ಸ್ವಂ ವಿಷಯಂ ಪ್ರತಿ ॥ ೧೧ ॥**

೮-೧೧. ಸತ್ತ್ವಗುಣದ ಹೆಚ್ಚಾಗಿರುವಿಕೆಯಿಂದ ಬುದ್ಧಿಯು ನಿರ್ಮಲವಾದ ಕನ್ನಡಿಯತೆ ಆತ್ಮನ ಪ್ರತಿಬಿಂಬದ ಪ್ರಭಾವದಿಂದ ವಿಷಯದ ಪ್ರತಿಬಿಂಬವನ್ನು ಹಿಡಿದುಕೊಳ್ಳುತ್ತದೆ. ಎಲ್ಲಾ ಇಂದ್ರಿಯ ಗಳೂ ಅಂತಃಕರಣದ ಸಂಬಂಧದಿಂದ, ಚಕ್ರದ ಹಳಿಯಲ್ಲಿಯೂ ಗುಂಭದಲ್ಲಿಯೂ ಸೇರಿಸಲ್ಪಟ್ಟ ಹಾರೆಕೋಲುಗಳಂತೆ ಇರುತ್ತವೆ. ನಾಡಿಗಳು ಬಲೆಯಲ್ಲಿ ಹೆಣೆದುಕೊಂಡಿರುವ ದಾರಗಳಂತೆ ಇರುತ್ತವೆ. ಗೋಳಕದವರೆಗೂ ಇರುವ ಆ ನಾಡಿಗಳ ಮೂಲಕ ಎಲ್ಲಾ ಇಂದ್ರಿಯ ಗಳೂ ತಮ್ಮತಮ್ಮ ವಿಷಯದ ಕಡೆಗೆ ಕಿಡಿಗಳಂತೆ ಹೊರಹೊಮ್ಮು ತ್ತವೆ.

### ವಿವೇಚನೆ

ಅಂತಃಕರಣವು ಸತ್ತ್ವಪ್ರಧಾನವಾಗಿರುವದರಿಂದ ಅದರಲ್ಲಿ ಉಂಟಾದ ಆತ್ಮಪ್ರತಿಬಿಂಬದ ಮಹಿಮೆಯಿಂದ ವಿಷಯಗಳ ಪ್ರತಿಬಿಂಬವನ್ನು ತನ್ನಲ್ಲಿ ತೋರಿಸು ತ್ತದೆ. ಇಂದ್ರಿಯಗಳು ಅಂತಃಕರಣಕ್ಕೂ ಇಂದ್ರಿಯಗೋಳಕಗಳಿಗೂ ಸಂಬಂಧ ವನ್ನುಂಟುಮಾಡಿಕೊಂಡು ಅಂತಃಕರಣದಿಂದ ಆಯಾ ಇಂದ್ರಿಯಗೋಳಕವಾದ

ಕಿವಿ, ಕಣ್ಣು– ಮುಂತಾದ ಸ್ಥಾನಗಳವರೆಗೂ ಹರಡಿಕೊಂಡಿವೆ. ಅವು ಗೋಳಕಗಳಿಂದ ಮುಂದಕ್ಕೆ ಆಯಾ ವಿಷಯದ ಕಡೆಗೆ ಕಿಡಿಗಳಂತೆ ಹಾರುತ್ತವೆ.

ಇಲ್ಲಿ ಆತ್ಮಚೈತನ್ಯದ ಸಂಬಂಧದಿಂದ ಅಂತಃಕರಣವೂ ಅದರ ಸಂಬಂಧದಿಂದ ಇಂದ್ರಿಯಗಳೂ ಚೈತನ್ಯಾಭಾಸವುಳ್ಳವಾಗಿವೆ– ಎಂದು ಹೇಳಿದೆ.

## ಇಂದ್ರಿಯಗಳಿಗೂ ನಾಡಿಗಳಿಗೂ ಸಂಬಂಧ

ದೇಹಸ್ಯ ಮಧ್ಯಮಂ ಸ್ಥಾನಂ ಮೂಲಾಧಾರಮಿತೀರ್ಯತೇ ।
ಗುದಾತ್ತು ದ್ವ್ಯಙ್ಗುಲಾದೂರ್ಧ್ವಂ ಮೇಢ್ರಾತ್ತು ದ್ವ್ಯಙ್ಗುಲಾದಧಃ ॥
ತ್ರಿಕೋಣೋಽಧೋಮುಖಾಗ್ರಶ್ಚ ಕನ್ಯಕಾಯೋನಿಸನ್ನಿಭಃ ।
ಯತ್ರ ಕುಣ್ಡಲಿನೀ ನಾಮ ಪರಾಶಕ್ತಿಃ ಪ್ರತಿಷ್ಠಿತಾ ॥ ೧೩ ॥

ಪ್ರಾಣಾಗ್ನಿಬಿನ್ದುನಾದಾನಾಂ ಸವಿತ್ರೀ ಸಾ ಸರಸ್ವತೀ ।
ಮೂಲಾಧಾರಾಗ್ರಕೋಣಸ್ಥಾ ಸುಷುಮ್ನಾ ಬ್ರಹ್ಮರನ್ಧ್ರಗಾ ॥ ೧೪ ॥
ಮೂಲೇಽರ್ಧಚ್ಛಿನ್ನವಂಶಾಭಾ ಷಡಾಧಾರಸಮನ್ವಿತಾ ।
ತತ್ಪಾರ್ಶ್ವಕೋಣಯೋರ್ಜಾತೇ ದ್ವೇ ಇಡಾಪಿಙ್ಗಲೇ ಸ್ಥಿತೇ ॥ ೧೫ ॥
ನಾಡೀಚಕ್ರಮಿತಿ ಪ್ರಾಹುಸ್ತಸ್ಮಾನ್ನಾಡ್ಯಃ ಸಮುದ್ಗತಾಃ ।
ಗಾನ್ಧಾರೀ ಹಸ್ತಿಜಿಹ್ವಾ ಚ ನಯನಾನ್ತಂ ಪ್ರಧಾವತಃ ॥ ೧೬ ॥
ನಾಡೀಚಕ್ರೇಣ ಸಂಸ್ಯೂತೇ ನಾಸಿಕಾನ್ತಮುಭೇ ಗತೇ ।

ನಾಭಿಮಣ್ಡಲಮಾಶ್ರಿತ್ಯ ಕುಕ್ಕುಟಾಣ್ಡಮಿವ ಸ್ಥಿತಮ್ ॥ ೧೭ ॥
ನಾಡೀಚಕ್ರಮಿತಿ ಪ್ರಾಹುಸ್ತಸ್ಮಾನ್ನಾಡ್ಯಸ್ಸಮುದ್ಗತಾಃ ।
ಪೂಷಾ ಚಾಲಮ್ಬುಷಾ ನಾಡೀ ಕರ್ಣದ್ವಯಮುಪಾಶ್ರಿತೇ ॥ ೧೮ ॥

ನಾಡೀ ಶುಕ್ಲಾಹ್ವಯಾ ತಸ್ಮಾದ್ಭ್ರೂಮಧ್ಯಮುಪಸರ್ಪತಿ ।
ಸರಸ್ವತ್ಯಾಹ್ವಯಾ ನಾಡೀ ಜಿಹ್ವಾನ್ತಂ ವಾಕ್ಪ್ರಸಾರಿಣೀ ॥ ೧೯ ॥

ನಾಡೀ ವಿಶ್ವೋದರೀ ನಾಮ ಭುಙ್ಕ್ತೇಽನ್ನಂ ಸಾ ಚತುರ್ವಿಧಮ್ ।
ಪೀತ್ವಾ ಪಯಸ್ವಿನೀ ತೋಯಂ ಕಣ್ಠಸ್ಥಾ ಕುರುತೇ ಕ್ಷುತಮ್ ॥ ೨೦ ॥

ನಾಡೀಚಕ್ರಾತ್ ಸಮುದ್ಭೂತಾ ನಾಡ್ಯಸ್ತಿಸ್ರಸ್ತ್ವಧೋಮುಖಾಃ ।
ರಾಕಾ ಶುಕ್ರಂ ಸಿನೀವಾಲೀ ಮೂತ್ರಂ ಮುಞ್ಚೇತ್ ಕುಹೂರ್ಮಲಮ್ ॥

ಭುಕ್ತಾನ್ನರಸಮಾದಾಯ ಶಙ್ಖಿನೀ ಧಮನೀ ಪುನಃ ।
ಕಪಾಲಕುಹರಂ ಗತ್ವಾ ಮೂರ್ಧ್ನಿ ಸಂಚಿನುತೇ ಸುಧಾಮ್ ॥ ೨೨ ॥

ಶತಂ ಚೈಕಾ ಚ ನಾಡ್ಯಸ್ಸ್ಯುಸ್ತಾಸಾಮೇಕಾ ಶಿರೋಗತಾ ।
ತಯೋರ್ಧ್ವಮಾಯನ್ಮುಕ್ತಸ್ಸ್ಯಾದಿತಿ ವೇದಾನ್ತಶಾಸನಮ್ ॥ ೨೩ ॥

೧೨-೨೪. ಗುದಸ್ಥಾನದಿಂದ ಎರಡು ಅಂಗುಲ ಮೇಲಕ್ಕೆ, ಶಿಶ್ನದಿಂದ ಎರಡು ಅಂಗುಲ ಕೆಳಕ್ಕೆ (ಇರುವ) ದೇಹದ ನಡುವಿನ ಭಾಗವು **ಮೂಲಾಧಾರ**ವೆನಿಸಿರುತ್ತದೆ. ಹುಡುಗಿಯ ಯೋನಿಯಂತೆ ಇರುವ ಕೆಳಗಡೆಗೆ ತುದಿಯುಳ್ಳ ತ್ರಿಕೋಣಾಕಾರವಾದ **ಕುಂಡಲಿನಿ** ಎಂಬ ಪರಶಕ್ತಿಯು ಅಲ್ಲಿದೆ. ಅದೇ ಪ್ರಾಣ, ಅಗ್ನಿಬಿಂದುನಾದಗಳ ಸ್ಫುಟೀಕರಿಸುವ **ಸರಸ್ವತಿಯು.** ಮೂಲಾಧಾರದ ಕೊನೆಯ ಮೂಲೆಯಲ್ಲಿದ್ದು ಬ್ರಹ್ಮರಂಧ್ರಕ್ಕೆ **ಸುಷುಮ್ನೆ**ಯು ಹೋಗಿರುತ್ತದೆ. (ಅದು) ಬುಡದಲ್ಲಿ ಅರ್ಧಸೀಳಿದ ಬಿದಿರಿನಂತೆ ಇದು **ಆರು ಆಧಾರ**ಗಳಿಂದ ಕೂಡಿರುತ್ತದೆ. ಆ (ತ್ರಿಕೋಣ)ದ ಮಗ್ಗುಲಿನ ಮೂಲಗಳಿಂದ ಹುಟ್ಟಿರುವ **ಇಡೆ, ಪಿಂಗಳೆ**-ಎಂಬ ಎರಡು ನಾಡಿಗಳಿರುವವು, (ಇವು ಮೂರೂ ಸೇರಿದ್ದನ್ನು) **ನಾಡೀಚಕ್ರ**ವೆನ್ನುತ್ತಾರೆ. ಅದರಿಂದ ನಾಡಿಗಳು ಹೊರ ಹೊರಟಿವೆ. **ಗಾಂಧಾರಿ, ಹಸ್ತಿಜಿಹ್ವೆ**- ಇವು ಕಣ್ಣುಗಳವರೆಗೂ ಹೋಗಿರುತ್ತವೆ. ನಾಡೀಚಕ್ರಕ್ಕೆ ಸಂಬಂಧಪಟ್ಟು ಎರಡೂ ಪಾದಗಳ ವರೆಗೂ ಹೋಗಿವೆ. ನಾಭೀಮಂಡಲವನ್ನು ಆಶ್ರಯಿಸಿಕೊಂಡು ಕೋಳಿ ಮೊಟ್ಟೆಯಂತೆ ಇರುವದನ್ನು **ನಾಡೀಚಕ್ರ**ವೆಂದು ಕರೆಯುತ್ತಾರೆ; ಅದರಿಂದ ನಾಡಿಗಳು ಹೊರಕ್ಕೆ ಬಂದಿರುತ್ತವೆ. **ಪೂಷಾ** ಮತ್ತು **ಅಲಂಬುಷಾ**-ಎಂಬ ಎರಡು ನಾಡಿಗಳು ನಾಲಗೆಯವರೆಗೆ ಚಾಚಿಕೊಂಡಿವೆ. ಎರಡು ಕಿವಿಗಳನ್ನು ಆಶ್ರಯಿಸಿಕೊಂಡಿರುತ್ತವೆ. ಅದರಿಂದ **ಶುಕ್ಲಾ** ಎಂಬ ಹೆಸರುಳ್ಳ ನಾಡಿಯು ಹುಬ್ಬಿನ ನಡುವೆಗೆ ಹೋಗಿ ಸೇರಿರುತ್ತದೆ. **ಸರಸ್ವತೀ** ಎಂಬ ಹೆಸರಿನ ನಾಡಿಯು ನಾಲಗೆಯಲ್ಲಿ ಮಾತನ್ನು ಹೊರಡಿಸುತ್ತದೆ. **ವಿಶ್ವೋದರೀ** ಎಂಬ ನಾಡಿಯು ನಾಲ್ಕು ವಿಧವಾದ ಅನ್ನವನ್ನು ಭೋಗಿಸುತ್ತದೆ. ಕತ್ತಿನಲ್ಲಿರುವ **ಪಯಸ್ವಿನಿ**ಯು ನೀರನ್ನು ಕುಡಿದು ಸೀನುವಿಕೆಯನ್ನು ಉಂಟುಮಾಡುತ್ತದೆ. ನಾಡೀಚಕ್ರದಿಂದ ಹುಟ್ಟಿದ ಮೂರು ನಾಡಿಗಳಾದರೋ ಕೆಳಕ್ಕೆ ತಿರುಗಿವೆ. (೧) **ರಾಕಾ** ರೇತಸ್ಸನ್ನು, (೨) **ಸಿನೀವಾಲಿಯು** ಮೂತ್ರವನ್ನು (೩) **ಕುಹೂ** ನಾಡಿಯು ಮಲವನ್ನೂ ಬಿಡುತ್ತದೆ. ಉಂಡ ಅನ್ನದ ರಸವನ್ನು ತೆಗೆದುಕೊಂಡು **ಶಂಖಿನೀ** ಎಂಬ ನಾಡಿಯಾದರೋ, ನೆತ್ತಿಯ ಸ್ಥಲವನ್ನು ಸೇರಿ, ಅಮೃತವನ್ನು ಆ ನೆತ್ತಿಯಲ್ಲಿ ಕೂಡಿಹಾಕುತ್ತದೆ.

"ಹೃದಯದಲ್ಲಿ ನೂರು ಮತ್ತು ಒಂದು ನಾಡಿಗಳಿರುತ್ತವೆ ; ಅವುಗಳೊಳಗೆ ಒಂದು (ನಾಡಿಯು) ತಲೆಯನ್ನು ಸೇರಿಕೊಂಡಿದೆ. ಆ ನಾಡಿಯಿಂದ ಊರ್ಧ್ವಲೋಕಕ್ಕೆ ಹೋದವನು ಅಮೃತತ್ವವನ್ನು ಹೊಂದುತ್ತಾನೆ"– ಎಂದು ವೇದಾಂತವು ಹೇಳುತ್ತಿದೆ.

## ವಿವೇಚನೆ

ಇಲ್ಲಿರುವ ನಾಡಿಗಳ ವಿವರಣೆಯನ್ನು ಯೋಗವನ್ನು ಬಲ್ಲವರಿಂದ ಮಾತ್ರವೇ ತಿಳಿದುಕೊಳ್ಳತಕ್ಕದ್ದಾಗಿದೆ. ತಟ್ಟನೆ ನೋಡಿದರೆ ಇಲ್ಲಿ ಪುನರುಕ್ತಿಗಳೂ ಇರುವಂತೆ ಕಾಣಿಸುತ್ತವೆ. ಮಾನಸೋಲ್ಲಾಸಕ್ಕೆ ವ್ಯಾಖ್ಯಾನವನ್ನು ಬರೆದಿರುವ **ರಾಮತೀರ್ಥ**ರೆಂಬವರು ಬರೆದಿರುವದನ್ನು ಇಲ್ಲಿ ಸಂಗ್ರಹವಾಗಿ ತಿಳಿಯಿಸುವೆವು :—

ಮೂಲಾಧಾರಕ್ಕೆ ಅಧಿಷ್ಠಾತೃವಾಗಿರುವ ಪರಶಕ್ತಿಯು ಮೂಲಪ್ರಕೃತಿ. ಅದಕ್ಕೆ ಕುಂಡಲಿನಿ ಎಂದು ಹೆಸರು ; ಅದು ಸರ್ಪಕುಂಡಲದ ಆಕಾರವುಳ್ಳದ್ದು, ಅದು ಪರಮಾತ್ಮನ ತೇಜಸ್ಸಿನಿಂದ ಬೆಳಗುತ್ತಿದೆ. ಪಂಚವೃತ್ತಿಗಳುಳ್ಳ ಪ್ರಾಣ, ಅನ್ನರಸವನ್ನು ಪಕ್ವಗೊಳಿಸುವ ಅಗ್ನಿ– ಇವೇ ಅಗ್ನೀಷೋಮರು– ಎಂದು ಪ್ರಖ್ಯಾತರಾಗಿರುತ್ತಾರೆ. ಮುಂದೆ ಹೇಳಲಿರುವ ಇಡಾಪಿಂಗಳೆಗಳಿಗೆ ಇವರೇ ದೇವತೆಗಳು ; ಬಿಂದುವೆಂದರೆ ಅವ್ಯಕ್ತರೂಪವಾಗಿರುವ ಧ್ವನ್ಯವಸ್ಥೆ ; ನಾದವೆಂದರೆ ಎಲ್ಲಾ ವರ್ಣಗಳಿಗೂ ಸಮಾನವಾಗಿರುವ ಓಂಕಾರಘೋಷವು ; ಕಿವಿಗಳನ್ನು ಮುಚ್ಚಿಕೊಂಡಾಗ ಅದನ್ನು ಕೇಳಬಹುದು. ಅದು ವರ್ಣರೂಪದಿಂದ ಅಭಿವ್ಯಕ್ತವಾದಾಗ **'ಸರಸ್ವತಿ'** ಎನಿಸುವದು.

ಮೂಲಾಧಾರದ ಮೂರು ಕೋಣಗಳೊಳಗೆ ಕೆಳಗಿನ ಮೂಲೆಯನ್ನಾಶ್ರಯಿಸಿಕೊಂಡು ಸುಷುಮ್ನೆಯು ಬ್ರಹ್ಮರಂಧ್ರದವರೆಗೂ ಹಬ್ಬಿಕೊಂಡಿರುತ್ತದೆ. ಅದು ಆರು ಆಧಾರಗಳಿಂದ ಕೂಡಿದೆ. ಅವೇ 'ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾ –ಎಂಬಿವು. ಇವುಗಳು ಅನುಕ್ರಮವಾಗಿ ನಾಲ್ಕು, ಆರು, ಹತ್ತು, ಹನ್ನೆರಡು, ಹದಿನಾರು, ಎರಡು (ಹೀಗೆ) ದಳಗಳುಳ್ಳ ಕಮಲರೂಪವಾಗಿ ಮೂಲಾಧಾರ, ಲಿಂಗ, ನಾಭಿ, ಹೃದಯ, ಕಂಠ, ಭ್ರೂಮಧ್ಯ– ಈ ಪ್ರದೇಶಗಳಲ್ಲಿರುವವು. ಇವೆಲ್ಲ ಯೋಗಿಗಮ್ಯ. ಮೂಲಾಧಾರದ ಎಡ, ಬಲಪಾರ್ಶ್ವಗಳಲ್ಲಿ ಇರುವ ಇಡಾಪಿಂಗಳೆಗಳು ಹಣೆಯ ಬುಡದವರೆಗೂ ಹರಡಿಕೊಂಡಿವೆ. ಇವುಗಳು ಮುಖ್ಯವಾದ ನಾಡಿಗಳು. ಈ ನಾಡೀಚಕ್ರದಿಂದ ಹೊರಟರುವ ಮುಖ್ಯನಾಡಿಗಳ ಹೆಸರನ್ನು ಮುಂದೆ ಹೇಳಿದೆ.

ಈ ನಾಡಿಗಳ ವಿವರವನ್ನು ಯಾವ ಮೂಲದ ಆಧಾರದಿಂದ ವ್ಯಾಖ್ಯಾನಕಾರರು ಬರೆದಿರಬಹುದೆಂಬುದು ಗೊತ್ತಾಗಲಿಲ್ಲ. **ಯೋಗಶಿಖೋಪನಿಷತ್ತಿ**ನಲ್ಲಿ 'ಅಥ ಯೋಗಂ ಪ್ರವಕ್ಷ್ಯಾಮಿ' ಎಂದು ಪ್ರಾರಂಭವಾಗಿರುವ ಭಾಗವನ್ನು ಇಲ್ಲಿ ನೋಡಬೇಕು ; ವೇದಾಂತಜಿಜ್ಞಾಸುಗಳಿಗೆ ಇದರ ವಿವರವನ್ನು ಅರಿತುಕೊಳ್ಳದ್ದರಿಂದ ಯಾವ ಹಾನಿಯೂ ಆಗುವಂತಿಲ್ಲ. ಕೊನೆಯಲ್ಲಿ ವರ್ಣಿಸಿರುವ ೨೩ನೆಯ ಶ್ಲೋಕ

ದಲ್ಲಿ **ಕಾಠಕೋಪನಿಷತ್ತಿನ** ವಾಕ್ಯದ ಅರ್ಥವಿದೆ. ಅಲ್ಲಿ ಮುಖ್ಯಾಮೃತತ್ವವನ್ನು ಹೊಗಳುವದಕ್ಕೆಂದೇ ಬ್ರಹ್ಮಲೋಕಕ್ಕೆ ಹೋಗುವ ಉಪಾಸಕರ ಮತ್ತು ಸಂಸಾರಿಗಳ ಗತಿಯನ್ನು ಅನುವಾದಮಾಡಿರುತ್ತದೆ– ಎಂದು ಭಾಷ್ಯದಲ್ಲಿ ಸ್ಪಷ್ಟವಾಗಿ ಹೇಳಿರುತ್ತದೆ. ಇಲ್ಲಿ ಮಾನಸೋಲ್ಲಾಸಕಾರರು ಅದನ್ನೇಕೆ ಪರಾಮರ್ಶಿಸಿಲ್ಲವೆಂಬುದು ತಿಳಿಯುವಂತಿಲ್ಲ.

## ಅವಸ್ಥಾತ್ರಯದಲ್ಲಿ ಜ್ಞಾನತಾರತಮ್ಯ

**ಯದಾ ಬುದ್ಧಿಗತೈಃ ಪುಣ್ಯೈಃ ಪ್ರೇರಿತೇನ್ದ್ರಿಯಮಾರ್ಗತಃ ।**
**ಶಬ್ದಾದೀನ್ ವಿಷಯಾನ್ ಭುಙ್ಕ್ತೇ ತದಾ ಜಾಗರಿತಂ ಭವೇತ್ ॥೨೪॥**
**ಸಂಹೃತೇಷ್ವಿನ್ದ್ರಿಯೇಷ್ವೇಷು ಜಾಗ್ರತ್ಸಂಸ್ಕಾರಜಾನ್ ಪುಮಾನ್ ।**
**ಮಾನಸಾನ್ ವಿಷಯಾನ್ ಭುಙ್ಕ್ತೇ ಸ್ವಪ್ನಾವಸ್ಥಾ ತದಾ ಭವೇತ್ ॥**
**ಮನಸೋಽಪ್ಯುಪಸಂಹಾರಃ ಸುಷುಪ್ತಿರಿತಿ ಕಥ್ಯತೇ ।**
**ತತ್ರ ಮಾಯಾಸಮಾಚ್ಛನ್ನಃ ಸನ್ಮಾತ್ರೋ ದೃಶ್ಯತೇ ಪುಮಾನ್ ॥ ೨೬ ॥**
**ಮೂಢೋ ಜಡೋಽಜ್ಞ ಇತ್ಯೇವಂ ಮಾಯಾವೇಶಾತ್ ಪ್ರಕಾಶತೇ ।**
**ಸುಖಮಸ್ವಾಪ್ಸಮಿತ್ಯೇವಂ ಪ್ರಬೋಧಸಮಯೇ ಪುಮಾನ್ ॥ ೨೭ ॥**
**ಸಚ್ಚಿದಾನಂದರೂಪಸ್ಸನ್ ಸಮ್ಯಗೇವ ಪ್ರಕಾಶತೇ ।**
**ಇತ್ಥಂ ಜಗತ್ಸಮಾವಿಶ್ಯ ಭಾಸಮಾನೇ ಮಹೇಶ್ವರೇ ॥ ೨೮ ॥**
**ಸೂರ್ಯಾದಯೋಽಪಿ ಭಾಸನ್ತೇ ಕಿಮುತಾನ್ಯೇ ಘಟಾದಯಃ ॥ ೨೮ತ್ತಿ ॥**

೨೪–೨೮ತ್ತಿ. ಬುದ್ಧಿಯಲ್ಲಿರುವ ಪುಣ್ಯಗಳಿಂದ ಪ್ರೇರಿತವಾದ ಇಂದ್ರಿಯಮಾರ್ಗಗಳಿಂದ ಶಬ್ದವೇ ಮುಂತಾದ ವಿಷಯಗಳನ್ನು ಯಾವಾಗ ಅನುಭವಿಸುತ್ತಾನೋ, ಆಗ **ಎಚ್ಚರ**ವಾಗಿರುತ್ತದೆ. ಈ ಇಂದ್ರಿಯಗಳು ಉಪಸಂಹೃತವಾಗಲು; ಎಚ್ಚರದ ಸಂಸ್ಕಾರದಿಂದ ಉಂಟಾದ ಮಾನಸವಿಷಯಗಳನ್ನು (ಯಾವಾಗ) ಅನುಭವಿಸುತ್ತಾನೋ ಆಗ **ಸ್ವಪ್ನಾವಸ್ಥೆ**ಯಾಗುತ್ತದೆ. ಮನಸ್ಸನ್ನು ಉಪಸಂಹರಿಸಿಕೊಳ್ಳುವದು **ತನಿನಿದ್ರೆ** ಎನ್ನಿಸಿಕೊಳ್ಳುತ್ತದೆ. ಆಗ ಮನುಷ್ಯನು ಮಾಯೆಯಿಂದ ಮುಸುಕಲ್ಪಟ್ಟು ಬರಿಯ ಸತ್ಸ್ವರೂಪವೊಂದರಲ್ಲಿಯೇ ಇದ್ದುಕೊಂಡು–ಮಾಯೆಯು ಮುಸುಕಿಕೊಂಡದ್ದರಿಂದ 'ಮೂಢನು', 'ಜಡನು', 'ಅಜ್ಞನು' –ಎಂದಿಂತು ತೋರುತ್ತಾನೆ. ಎಚ್ಚರದ ಸಮಯದಲ್ಲಿ ಸಚ್ಚಿದಾನಂದಸ್ವರೂಪನಾಗಿದ್ದುಕೊಂಡು ಜೀವನು 'ಸುಖವಾಗಿ ನಿದ್ರಿಸಿದೆನು' ಎಂದೂ (ಅರಿತುಕೊಳ್ಳುತ್ತಾನೆ). ಹೀಗೆ ಜಗತ್ತನ್ನು

ಒಳಹೊಕ್ಕು ಮಹೇಶ್ವರನು ತೋರಿಕೊಳ್ಳುತ್ತಿರುವಲ್ಲಿ, ಸೂರ್ಯನೇ ಮೊದಲಾದವರೂ ಬೆಳಗುತ್ತಿರುತ್ತಾರೆ, ಇನ್ನು ಗಡಿಗೆಯೇ ಮುಂತಾದವು (ಆತನ ಬೆಳಕಿನಿಂದ) ತೋರಿಕೊಳ್ಳುತ್ತಿರುವವೆಂದು ಹೇಳತಕ್ಕದ್ದೇನಿದೆ?

**ವಿವೇಚನೆ**

ಜಾಗ್ರತ್ಸ್ವಪ್ನಸುಷುಪ್ತಿಗಳೆಂಬ ಮೂರವಸ್ಥೆಗಳಲ್ಲಿಯೂ ಆತ್ಮನ ಚೈತನ್ಯದ ಬೆಳಕೇ ಹೊರಹೊಮ್ಮಿ ತೋರುತ್ತಿರುವದು. ಇದು ಮುಂದಿನ ಶ್ಲೋಕಗಳಲ್ಲಿ–ಮುಖ್ಯವಾಗಿ ಏಳನೆಯ ಶ್ಲೋಕದಲ್ಲಿ–ಸ್ಫುಟವಾಗುವದು. ಇಂದ್ರಿಯ, ಅಂತಃಕರಣ, ಮಾಯೆ– ಎಂಬ ಉಪಾಧಿಗಳಿಂದ ಆ ಪ್ರಕಾಶವು ತಾರತಮ್ಯದಿಂದ ತೋರಿಕೊಳ್ಳುವದು. ಸುಷುಪ್ತಿಯಲ್ಲಿ ಮಾಯೆಯ ಮುಸುಕಿರುವದೆಂಬುದು ಮುಂದೆ (೬ನೆಯ ಶ್ಲೋಕದಲ್ಲಿ) ಸ್ಫುಟವಾಗುವದು.

**ತಸ್ಮಾತ್ ಸತ್ತಾ ಸ್ಫುರತ್ತಾ ಚ ಭಾವಾನಾಮೀಶ್ವರಾಶ್ರಯಮ್ ॥ ೨೯ ॥**
**ಸತ್ಯಂ ಜ್ಞಾನಮನನ್ತಂ ಚ ಶ್ರುತ್ಯಾ ಬ್ರಹ್ಮೋಪದಿಶ್ಯತೇ ॥ ೨೯½ ॥**

೨೯–೨೯½. ಆದ್ದರಿಂದ ಪದಾರ್ಥಗಳ ಇರವೂ ತೋರಿಕೆಯೂ ಈಶ್ವರನನ್ನು ಆಶ್ರಯಿಸಿಕೊಂಡಿರುತ್ತದೆ. (ಆದ್ದರಿಂದಲೇ) 'ಬ್ರಹ್ಮವು ಸತ್ಯವೂ ಜ್ಞಾನವೂ ಅನಂತವೂ ಆಗಿದೆ' (ತೈ. ೨–೧)–ಎಂದು ಶ್ರುತಿಯಿಂದ ಉಪದಿಷ್ಟವಾಗಿರುತ್ತದೆ.

**ಆತ್ಮಜ್ಞಾನದ ತಾರತಮ್ಯ**

**ಜಾಗ್ರತ್ಸ್ವಪ್ನೋದ್ಭವಂ ಸರ್ವಮಸತ್ಯಂ ಜಡಮನ್ಧವತ್ ॥ ೩೦ ॥**
**ಈಶ್ವರಶ್ಚಾಹಮಿತ್ಯೇವಂ ಭಾಸತೇ ಸರ್ವಜನ್ತುಷು ।**
**ನಿರ್ವಿಕಲ್ಪಶ್ಚ ಶುದ್ಧಶ್ಚ ಮಲಿನಶ್ಚೇತ್ಯಹಂ ತ್ರಿಧಾ ॥ ೩೧ ॥**
**ನಿರ್ವಿಕಲ್ಪಂ ಪರಂ ಬ್ರಹ್ಮ ನಿರ್ಧೂತಾಖಿಲಕಲ್ಪನಮ್ ।**
**ಘೋಲ್ಯನ್ಧಕಾರಧೂಮಾಭ್ರನಿರ್ಮುಕ್ತಗಗನೋಪಮಮ್ ॥ ೩೨ ॥**
**ವಿವೇಕಸಮಯೇ ಶುದ್ಧಂ ದೇಹಾದೀನಾಂ ವ್ಯಪೋಹನಾತ್ ।**
**ಯಥಾನ್ತರಿಕ್ಷಂ ಸಂಕ್ಷಿಪ್ತನಕ್ಷತ್ರೈಃ ಕಿಞ್ಚಿದೀಕ್ಷ್ಯತೇ ॥ ೩೩ ॥**
**ದೇಹೇನ್ದ್ರಿಯಾದಿಸಂಸರ್ಗಾನ್ಮಲಿನಂ ಕಲುಷೀಕೃತಮ್ ।**
**ಯಥಾಽಽಕಾಶಂ ತಮೋರೂಢಂ ಸ್ಫುರತ್ಯೆನವಕಾಶವತ್ ॥ ೩೪ ॥**

೩೦–೩೪. ಎಚ್ಚರಕನಸುಗಳಲ್ಲಿ ಉಂಟಾಗಿರುವದೆಲ್ಲವೂ ಸುಳ್ಳಾಗಿರುವದು, ಕುರುಡನಂತೆ ಅಚೇತನವಾಗಿರುವದು, ಮತ್ತು ಈಶ್ವರನು

ಎಲ್ಲಾ ಪ್ರಾಣಿಗಳಲ್ಲಿಯೂ 'ನಾನು' ಎಂದು ತೋರಿಕೊಳ್ಳುತ್ತಿರುತ್ತಾನೆ. ನಿರ್ವಿಕಲ್ಪ, ಶುದ್ಧ, ಮಲಿನ- ಎಂದು ಅಹಂತೆಯು ಮೂರು ಬಗೆ. ಯಾವ ವಿಕಲ್ಪವೂ ಇಲ್ಲದ ಪರಬ್ರಹ್ಮವೇ ನಿರ್ವಿಕಲ್ಪವು. ಅದು ಧೂಳು, ಕತ್ತಲೆ, ಹೊಗೆ, ಮೋಡ- ಇವುಗಳಿಲ್ಲದ ಆಕಾಶದಂತೆ (ಇರುತ್ತದೆ). ದೇಹಾದಿಗಳನ್ನು ಅಲ್ಲಗಳೆಯುವದರಿಂದ ವಿವೇಚಿಸಿಕೊಳ್ಳುವ ಕಾಲದಲ್ಲಿ ಅದು 'ಶುದ್ಧ' (ಅಹಂತೆ); ರಾತ್ರಿಯಾಗಿರುವಾಗ ಅಂತರಿಕ್ಷವು ಹೇಗೆ ಸ್ವಲ್ಪ ಕುಗ್ಗಿದಂತೆ ಕಾಣುವದೋ ಹಾಗೆ, ದೇಹೇಂದ್ರಿಯಗಳೇ ಮುಂತಾದವುಗಳ ಸಂಬಂಧದಿಂದ ಕೊಳೆಯಾಗಿರುವದು ಮಲಿನ (ಅಹಂತೆ) ; ಹೇಗೆ ಕತ್ತಲೆಯು ಕವಿದುಕೊಂಡಿರುವ ಆಕಾಶವು ಅವಕಾಶವೇ ಇಲ್ಲದ್ದರಂತೆ ಕಾಣುವದೋ ಹಾಗೆ.

## ವಿವೇಚನೆ

ಉಪಾಧಿವಶದಿಂದ ಅಹಂತೆಯನ್ನು ಹೀಗೆ ಮೂರು ಬಗೆಯಾಗಿ ವಿಂಗಡಿಸಿರುವದು ಶಾಂಕರಭಾಷ್ಯದಲ್ಲಿಯೇ ಆಗಲಿ, ವಾರ್ತಿಕದಲ್ಲಿಯೇ ಆಗಲಿ ಕಾಣಬಂದಿಲ್ಲ.

## ಆತ್ಮನು ಈಶ್ವರನಾಗುವದು ಯಾವಾಗ ?

**ಅಹಮಿತ್ಯೈಶ್ವರಂ ಭಾವಂ ಯದಾ ಜೀವಃ ಪ್ರಬುಧ್ಯತೇ ।**
**ಸರ್ವಜ್ಞಃ ಸರ್ವಕರ್ತಾ ಚ ತದಾ ಜೀವೋ ಭವಿಷ್ಯತಿ　　॥ ೩೫ ॥**
**ಮಾಯಯಾಽಧಿಕಸಂಮೂಢಃ ವಿದ್ಯಯೇಶಃ ಪ್ರಕಾಶತೇ ।**
**ನಿರ್ವಿಕಲ್ಪಾನುಸನ್ಧಾನೇ ಸಮ್ಯಗಾತ್ಮಾ ಪ್ರಕಾಶತೇ　　॥ ೩೬ ॥**
**ಅವಿದ್ಯಾಖ್ಯತಿರೋಧಾನವ್ಯಪಾಯೇ ಪರಮೇಶ್ವರಃ ।**
**ದಕ್ಷಿಣಾಮೂರ್ತಿರೂಪೋಽಸೌ ಸ್ವಯಮೇವ ಪ್ರಕಾಶತೇ　　॥ ೩೭ ॥**

೩೫–೩೭. ಯಾವಾಗ ಜೀವನು (ತನ್ನ) ಈಶ್ವರತ್ವವನ್ನು 'ನಾನು' ಎಂದು ಅರಿತುಕೊಳ್ಳುವನೋ ಆಗ ಜೀವನು ಸರ್ವಜ್ಞನೂ ಸರ್ವಕರ್ತೃವೂ ಆಗುವನು. ಮಾಯೆಯಿಂದ ಹೆಚ್ಚಾಗಿ ಸಮ್ಮೂಢನಾದವನು ವಿದ್ಯೆಯಿಂದ ಈಶ್ವರನಾಗಿ ಬೆಳಗುವನು. ನಿರ್ವಿಕಲ್ಪಕವಾದ (ಅಹಂತೆಯ) ಅನುಸಂಧಾನದಿಂದ ಆತ್ಮನು ಚೆನ್ನಾಗಿ ತೋರಿಕೊಳ್ಳುತ್ತಾನೆ. ಅವಿದ್ಯೆ ಎಂಬ ಹೆಸರಿನ ತೆರೆಯು ಹೋಗಲು ಪರಮೇಶ್ವರನು ದಕ್ಷಿಣಾಮೂರ್ತಿರೂಪನಾಗಿ ತಾನೇ ಬೆಳಗುತ್ತಾನೆ.

## ವಿವೇಚನೆ

ಜೀವನು ಸರ್ವಜ್ಞನೂ ಸರ್ವಕರ್ತನೂ ಆಗುವದು ಹೇಗೆ ? – ಎಂಬ ಪ್ರಶ್ನೆಯನ್ನು ಹಾಕಿಕೊಂಡು ಅನಾದಿಮಾಯೆಯಿಂದ ಸುಪ್ತನಾದ ಜೀವನು ಎಚ್ಚರುವಾಗ –ಎಂದು (ಶ್ಲೋ. ೧–೧೩ರಲ್ಲಿ) ಗೌಡಪಾದಕಾರಿಕೆಯ ಉದಾಹರಣೆಯಿಂದ ತಿಳಿಸಲಾಗಿತ್ತು. ಇಲ್ಲಿ ಆದನ್ನು ವಿವರಿಸಿ ನಿರ್ವಿಕಲ್ಪವಾದ ಪರಬ್ರಹ್ಮವೇ ನಾನು – ಎಂಬ ಪೂರ್ಣಾಹಂತೆಯ ಅರಿವಾಗಿ ಅವಿದ್ಯೆಯ ಮರೆಯು ಹೋಗಲು ತಾನೇ ಪರಮೇಶ್ವರನೆಂಬುದು ನಿರ್ವಿಘ್ನವಾಗಿ ತೋರಿಕೊಳ್ಳುತ್ತದೆ – ಎಂದು ವಿವರಿಸಿದೆ.

**ಇತಿ ಶ್ರೀದಕ್ಷಿಣಾಮೂರ್ತಿಸ್ತೋತ್ರಾರ್ಥಪ್ರತಿಪಾದಕೇ ।**
**ಪ್ರಬನ್ಧೇ ಮಾನಸೋಲ್ಲಾಸೇ ಚತುರ್ಥೋಲ್ಲಾಸಸಂಗ್ರಹಃ ॥ ೩೮ ॥**

೩೮. ಇಂತು ಶ್ರೀದಕ್ಷಿಣಾಮೂರ್ತಿಸ್ತೋತ್ರದ ಅರ್ಥವನ್ನು ಪ್ರತಿಪಾದಿಸುವ ಪ್ರಬಂಧವಾದ ಮಾನಸೋಲ್ಲಾಸದಲ್ಲಿ ನಾಲ್ಕನೆಯ ಉಲ್ಲಾಸದ ಸಂಗ್ರಹವು ಮುಗಿಯಿತು.

# ೫. ಆತ್ಮತತ್ತ್ವದ ವಿಷಯಕ್ಕೆ ವಾದಿಗಳ ಭ್ರಮೆ

## ಅವತರಣಿಕೆ

**ಪ್ರಮಾಣಮೇಕಂ ಪ್ರತ್ಯಕ್ಷಂ ತತ್ತ್ವಂ ಭೂತಚತುಷ್ಟಯಮ್ ।**
**ಮೋಕ್ಷಶ್ಚ ಮರಣಾನ್ನಾನ್ಯಃ ಕಾಮಾರ್ಥೌ ಪುರುಷಾರ್ಥಕೌ ॥ ೧ ॥**
**ನ ಹಿ ಖಲ್ವೀಶ್ವರಃ ಕರ್ತಾ ಪರಲೋಕಕಥಾ ವೃಥಾ ।**
**ದೇಹಂ ವಿನಾಸ್ತಿ ಚೇದಾತ್ಮಾ ಕುಮ್ಭವದ್ದೃಶ್ಯತಾಂ ಪುರಃ ॥ ೨ ॥**
**ಹ್ರಸ್ವೋ ದೀರ್ಘೋ ಯುವಾ ಬಾಲ ಇತಿ ದೇಹೋಽಭಿದೃಶ್ಯತೇ ।**
**ಅಸ್ತಿ ಜಾತಃ ಪರಿಣತೋ ವೃದ್ಧಃ ಕ್ಷೀಣೋ ಜರನ್ಮೃತಃ ॥ ೩ ॥**
**ಇತ್ಯೇವಮುಕ್ತಾಸ್ತ್ವಷ್ಟಾವವಿಕಾರಾ ದೇಹಸಂಶ್ರಯಾಃ ।**
**ವರ್ಣಾಶ್ರಮವಿಭಾಗಶ್ಚ ದೇಹೇಷ್ವೇವ ಪ್ರತಿಷ್ಠಿತಃ ॥ ೪ ॥**
**ಜಾತಕರ್ಮಾದಿಸಂಸ್ಕಾರೋ ದೇಹಸ್ಯೈವ ವಿಧೀಯತೇ ।**
**ಶತಂ ಜೀವೇತಿ ದೇಹಸ್ಯ ಪ್ರಯುಞ್ಜನ್ತ್ಯಾಶಿಷಂ ಶುಭಾಮ್ ॥ ೫ ॥**
**ಇತಿ ಪ್ರಪಞ್ಚಂ ಚಾರ್ವಾಕೋ ವಞ್ಚಯತ್ಯಲ್ಪಚೇತನಃ ॥ ೫½ ॥**

೧–೫½. ಪ್ರತ್ಯಕ್ಷವೊಂದೇ ಪ್ರಮಾಣವು. ನಾಲ್ಕು ಭೂತಗಳ ಒಟ್ಟೇ ತತ್ತ್ವವು. ಮತ್ತು ಮೋಕ್ಷವೆಂದರೆ ಮರಣಕ್ಕಿಂತ ಬೇರೆಯಲ್ಲ. ಕಾಮಾರ್ಥಗಳೇ ಪುರುಷಾರ್ಥಗಳು. ಕರ್ತೃವಾದ ಈಶ್ವರನು ಇಲ್ಲವೇ ಇಲ್ಲ. ಪರಲೋಕದ ಮಾತು ವ್ಯರ್ಥ. ದೇಹವಲ್ಲದೆ ಬೇರೆಯಾಗಿ ಆತ್ಮನು ಇರುವನಾದರೆ ಗಡಿಗೆಯಂತೆ ಎದುರಿಗೆ ಕಾಣಲಿ! ಕುಳ್ಳನು, ಎತ್ತರವಾದವನು, ಹರೆಯದವನು, ಹುಡುಗನು – ಎಂದು ದೇಹವೇ ಕಾಣುತ್ತಿರುತ್ತದೆ. ಇದೆ, ಹುಟ್ಟಿತು, ಮಾರ್ಪಟ್ಟಿತು, ಬೆಳೆಯಿತು, ಸವೆಯಿತು, ಮುಪ್ಪಡಿಸಿ ಸವೆದು ಸತ್ತಿತು – ಎಂದಿಂತು ಪದಾರ್ಥಗಳ ಆರು ಮಾರ್ಪಾಡುಗಳೂ ದೇಹವನ್ನೇ ಆಶ್ರಯಿಸಿಕೊಂಡಿವೆ : ಮತ್ತು ವರ್ಣಾಶ್ರಮಗಳ ವಿಂಗಡವೂ ದೇಹಗಳಲ್ಲಿಯೇ ನೆಲೆನಿಂತಿದೆ. ಜಾತಕರ್ಮವೇ ಮುಂತಾದ ಸಂಸ್ಕಾರವು ದೇಹಕ್ಕೇ ವಿಹಿತವಾಗಿದೆ. 'ನೂರು(ವರ್ಷ) ಬದುಕಿರು' ಎಂದು ಒಳ್ಳೆಯ ಆಶೀರ್ವಾದವನ್ನು ದೇಹಕ್ಕೇ ಪ್ರಯೋಗಿಸುತ್ತಾರೆ– ಹೀಗೆಂದು ಅಲ್ಪಮತಿಯಾದ **ಚಾರ್ವಾಕನು** ಪ್ರಪಂಚವನ್ನು ಮರುಳುಗೊಳಿಸುತ್ತಿರುತ್ತಾನೆ.

ಕೇಚಿತ್ ಶ್ವಸಿಮಿ ಜೀವಾಮಿ ಕ್ಷುಧಿತೋಽಸ್ಮಿ ಪಿಪಾಸಿತಃ ॥ ೬ ॥
ಇತ್ಯಾದಿಪ್ರತ್ಯಯಬಲಾತ್ ಪ್ರಾಣ ಆತ್ಮೇತಿ ಮನ್ವತೇ ।
ಕೇಚಿತ್ ಶೃಣೋಮಿ ಪಶ್ಯಾಮಿ ಜಿಘ್ರಾಮ್ಯಾಸ್ವಾದಯಾಮ್ಯಹಮ್॥ ೭ ॥
ಇತೀನ್ದ್ರಿಯಾಣಾಮಾತ್ಮತ್ವಂ ಪ್ರತಿಯನ್ತಿ ತತೋಽಧಿಕಮ್ ।
ಜಾನಾಮಿಪ್ರತ್ಯಯಬಲಾದ್ ಬುದ್ಧಿರಿತ್ಯಪರೇ ಜಗುಃ ॥ ೮ ॥
ಮಾಯಾವ್ಯಾಮೂಢಚಿತ್ತಾನಾಂ ತೇಷಾಂ ದೂಷಣಮುಚ್ಯತೇ ॥ ೮½ ॥

೬-೮½. ಕೆಲವರು 'ಉಸಿರಾಡುತ್ತಿದೇನೆ', 'ಬದುಕಿದೇನೆ', 'ಹಸಿವುಳ್ಳವನಾಗಿದೇನೆ', 'ನೀರಡಿಕೆಯುಳ್ಳವನಾಗಿದೇನೆ' – ಇವೇ ಮುಂತಾದ ಪ್ರತ್ಯಯಗಳ ಬಲದಿಂದ ಪ್ರಾಣವೇ ಆತ್ಮವೆಂದು ಎಣಿಸು ತ್ತಾರೆ; ಕೆಲವರು 'ನಾನು ಕೇಳುತ್ತಿದೇನೆ', 'ಕಾಣುತ್ತಿದೇನೆ', 'ಮೂಸುತ್ತಿದೇನೆ', 'ಸವಿಯುತ್ತಿದೇನೆ' – ಎಂಬ (ಪ್ರತ್ಯಯಗಳ ಬಲದಿಂದ) ಆ (ಪ್ರಾಣಕ್ಕಿಂತ ಹೆಚ್ಚಾದ) ಆತ್ಮತ್ವವು ಇಂದ್ರಿಯ ಗಳಿಗಿದೆ – ಎಂದು ತಿಳಿಯುತ್ತಾರೆ. 'ಅರಿಯುತ್ತಿದೇನೆ' ಎಂಬ ಪ್ರತ್ಯಯದ ಬಲದಿಂದ ಬುದ್ಧಿಯು (ಆತ್ಮನು) ಎಂದು ಮತ್ತೆ ಕೆಲವರು ಹೇಳುತ್ತಾರೆ. ಮಾಯೆಯಿಂದ ಮರುಳಾಗಿರುವ ಚಿತ್ತವುಳ್ಳ ಅವರ (ಮತಗಳಲ್ಲಿರುವ) ದೋಷವನ್ನು (ಇಲ್ಲಿ) ಹೇಳಲಾಗುತ್ತಿದೆ :–

ದೇಹಂ ಪ್ರಾಣಮಪೀನ್ದ್ರಿಯಾಣ್ಯಪಿ ಚಲಾಂ ಬುದ್ಧಿಂ ಚ ಶೂನ್ಯಂ ವಿದುಃ ।
ಸ್ತ್ರೀಬಾಲಾನ್ಧಜಡೋಪಮಾಸ್ತ್ವಹಮಿತಿ ಭ್ರಾನ್ತಾ ಭೃಶಂ ವಾದಿನಃ ॥
ಮಾಯಾಶಕ್ತಿವಿಲಾಸಕಲ್ಪಿತಮಹಾವ್ಯಾಮೋಹಸಂಹಾರಿಣೇ ।
ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ ಶ್ರೀದಕ್ಷಿಣಾಮೂರ್ತಯೇ ॥ ೫ ॥

ಭಾವಾರ್ಥ:–ದೇಹವನ್ನು, ಪ್ರಾಣವನ್ನು, ಇಂದ್ರಿಯಗಳನ್ನು, ಚಂಚಲವಾದ ಬುದ್ಧಿ ಯನ್ನು, ಶೂನ್ಯವನ್ನು (ಯಾವಾತನನ್ನು) – ಹೆಂಗಸರು, ಹುಡುಗರು, ಕುರುಡರು, ತಿಳಿ ವಳಿಕೆಯಿಲ್ಲದವರು – ಇವರಂತಿರುವ ವಾದಿಗಳು ಹೆಚ್ಚಿನ ಭ್ರಾಂತಿಯುಳ್ಳವರಾಗಿ ಹೆಚ್ಚಾಗಿ ವಾದಿಸುತ್ತಾ – (ಇದೇ) ನಾನೆಂದು ಅರಿತಿರುವರೋ, ಮಾಯಾಶಕ್ತಿಯ ವಿಲಾಸದಿಂದ ಕಲ್ಪಿತವಾದ ಮಹಾಭ್ರಾಂತಿಯನ್ನು ನಾಶಗೊಳಿಸುವ ಶ್ರೀಗುರುಮೂರ್ತಿಯಾದ ಆ ಶ್ರೀದಕ್ಷಿಣಾಮೂರ್ತಿಗೆ ಈ ನಮಸ್ಕಾರ.

## ಇತರ ದರ್ಶನಗಳ ಖಂಡನವೂ ಸಿದ್ಧಾಂತವೂ

ಇದಮಸ್ಯ ತಾತ್ಪರ್ಯಮ್ –

ದೇಹಾದೀನಾಂ ಜಡಾರ್ಥಾನಾಂ ಪಾಷಾಣವದನಾತ್ಮನಾಮ್ ॥ ೯ ॥
ಕಥಂ ಭವೇದಹಂಭಾವಃ ಸಮಾವೇಶಂ ವಿನೇಶಿತುಃ ।

**ದೇಹಸ್ತಾವದಯಂ ನಾತ್ಮಾ ದೃಶ್ಯತ್ವಾಚ್ಚ ಜಡತ್ವತಃ ॥ ೧೦ ॥**
**ರೂಪಾದಿಮತ್ತ್ವಾದ್ ಸಾಂಶತ್ವಾದ್ ಭೌತಿಕತ್ವಾಚ್ಚ ಕುಮ್ಭವತ್ ।**
**ಮೂರ್ಛಾಸುಷುಪ್ತಿಮರಣೇಷ್ವಪಿ ದೇಹಃ ಪ್ರತೀಯತೇ ॥ ೧೧ ॥**
**ದೇಹಾದಿವ್ಯತಿರಿಕ್ತತ್ವಾತ್ತದಾತ್ಮಾ ನ ಪ್ರಕಾಶತೇ ।**
**ಯಥಾ ಜಗತ್ಪ್ರವೃತ್ತೀನಾಮಾದಿಕಾರಣಮಂಶುಮಾನ್ ॥ ೧೨ ॥**
**ಪುಮಾಂಸ್ತಥೈವ ದೇಹಾದಿಪ್ರವೃತ್ತೌ ಕಾರಣಂ ಪರಮ್ ।**
**ಮಮ ದೇಹೋಽಯಮಿತ್ಯೇವಂ ಸ್ತ್ರೀಬಾಲಾನ್ಧಾಶ್ಚ ಮನ್ವತೇ ॥ ೧೩ ॥**
**ದೇಹೋಽಹಮಿತಿ ನಾವೈತಿ ಕದಾಚಿದಪಿ ಕಶ್ಚನ ॥ ೧೩½ ॥**

೯-೧೩½. ಈ (ಶ್ಲೋಕಗಳ) ತಾತ್ಪರ್ಯವಿದು :-

ಕೆಲ್ಲಿನಂತೆ ಆತ್ಮನಿಗಿಂತ ಬೇರೆಯಾಗಿರುವ ದೇಹವೇ ಮುಂತಾದ ಜಡವಸ್ತುಗಳಿಗೆ ಈಶ್ವರನ ಪ್ರವೇಶವಿಲ್ಲದೆ ಅಹಂಭಾವವು ಎಲ್ಲಿಂದ ಹೇಗೆ ಆದೀತು ? ಮೊದಲನೆಯದಾಗಿ ಈ **ದೇಹವು** ಆತ್ಮನಲ್ಲ. ಏಕೆಂದರೆ (ಇದು) ಗಡಿಗೆಯಂತೆ ದೃಶ್ಯವಾಗಿರುತ್ತದೆ, ಜಡವಾಗಿರುತ್ತದೆ, ರೂಪವೇ ಮುಂತಾದ ಗುಣಗಳುಳ್ಳದ್ದಾಗಿರುತ್ತದೆ, ಅವಯವಗಳುಳ್ಳದ್ದಾಗಿರುತ್ತದೆ, (ಪಂಚ)ಭೂತಗಳ ಕಾರ್ಯಗಳಾಗಿರುತ್ತದೆ. ಮೂರ್ಛೆ, ತನಿನಿದ್ರೆ, ಸಾವು – ಈ (ಅವಸ್ಥೆ)ಗಳಲ್ಲಿಯೂ ದೇಹವು ಕಾಣುತ್ತಿರುತ್ತದೆ. ದೇಹಾದಿಗಳಿಂದ ಬೇರೆಯಾಗಿರುವದರಿಂದ ಆಗ ಆತ್ಮನು ತೋರುವದಿಲ್ಲ. ಹೇಗೆ ಸೂರ್ಯನು ಜಗತ್ತಿನ (ಎಲ್ಲಾ) ವ್ಯಾಪಾರಗಳಿಗೂ ಮೂಲಕಾರಣವಾಗಿರುತ್ತಾನೋ, ಹಾಗೆಯೇ ಆತ್ಮನು ದೇಹಾದಿಗಳ ವ್ಯಾಪಾರಗಳಿಗೆ ಮುಖ್ಯಕಾರಣನು. 'ಇದು ನನ್ನ ದೇಹವು' ಎಂದು ಹೆಂಗಸರು, ಹುಡುಗರು, ಕುರುಡರು ಕೂಡ ತಿಳಿಯುತ್ತಾರೆ. 'ದೇಹವೇ ನಾನು' ಎಂದು ಎಂದಿಗೂ ಯಾವನೂ ಬಗೆಯುವದಿಲ್ಲ.

## ವಿವೇಚನೆ

ಇಲ್ಲಿ ಮೂರ್ಛಾದಿಗಳಲ್ಲಿ ದೇಹವು ಕಂಡರೂ ಆತ್ಮನು ಕಾಣುವದಿಲ್ಲ – ಎಂಬ ವಾಕ್ಯಕ್ಕೆ ಆತ್ಮನ ಪ್ರಾಣಚೇಷ್ಟಾದಿಧರ್ಮಗಳು ಕಾಣುವದಿಲ್ಲ–ಎಂದು ಅರ್ಥವನ್ನು ಕಲ್ಪಿಸಬೇಕು. 'ನಾನು ಆತ್ಮನು, ಚೈತನ್ಯರೂಪನು, ದೇಹಾದಿಗಳ ಒಡೆಯನು' ಎಂದು ಸಾಮಾನ್ಯಜನರೂ ಅರಿಯುತ್ತಿದಾರಲ್ಲವೆ ? ಹಾಗೆ ಅರಿಯುವವನು ಯಾರು ? ಅರಿವು ಯಾರದು ?– ಎಂಬ ಶಂಕೆಗೆ ದೇಹಾತ್ಮವಾದದಲ್ಲಿ ಉತ್ತರವಿಲ್ಲ ಎಂದು ಭಾವ. ಸೂ. ಭಾ. ೩-೩-೫೪ನ್ನು ನೋಡಿರಿ.

## ಇಂದ್ರಿಯಗಳನ್ನು ಆತ್ಮನೆನ್ನಲಾಗದು

**ಇನ್ದ್ರಿಯಾಣ್ಯಪಿ ನಾತ್ಮಾನಃ ಕರಣತ್ವಾತ್ ಪ್ರದೀಪವತ್ ॥ ೧೪ ॥**
**ವೀಣಾದಿವಾದ್ಯವತ್ ಶ್ರೋತ್ರಂ ಶಬ್ದಗ್ರಹಣಸಾಧನಮ್ ।**
**ಚಕ್ಷುಸ್ತೇಜಃ ತ್ರಿತಯವದ್ ರೂಪಗ್ರಹಣಸಾಧನಮ್ ॥ ೧೫ ॥**
**ಗನ್ಧಸ್ಯ ಗ್ರಾಹಕಂ ಘ್ರಾಣಂ ಪುಷ್ಪಸಂಪುಟಕಾದಿವತ್ ।**
**ರಸಸ್ಯ ಗ್ರಾಹಿಕಾ ಜಿಹ್ವಾ ದಧಿ ಕ್ಷೌದ್ರಘೃತಾದಿವತ್ ॥ ೧೬ ॥**
**ಇನ್ದ್ರಿಯಾಣಿ ನ ಮೇ ಸನ್ತಿ ಮೂಕೋಽನ್ಧೋ ಬಧಿರೋಽಸ್ಮ್ಯಹಮ್ ।**
**ಇತ್ಯಾಹುರಿನ್ದ್ರಿಯೈರ್ಹೀನಾ ಜನಾಃ ಕಿಂ ತೇ ನಿರಾತ್ಮಕಾಃ ॥ ೧೬ ॥**

೧೪-೧೬. ದೀಪದಂತೆ ಸಾಧನ(ಮಾತ್ರ)ವಾಗಿರುವದರಿಂದ **ಇಂದ್ರಿಯಗಳುಕೂಡ** ಆತ್ಮಗಳಲ್ಲ. ವೀಣೆಯೇ ಮುಂತಾದ ವಾದ್ಯಗಳಂತೆ ಶ್ರೋತ್ರವು ಶಬ್ದವನ್ನು ಗ್ರಹಿಸುವದಕ್ಕೆ ಸಾಧನವು. (ಸೂರ್ಯ, ಚಂದ್ರ, ಅಗ್ನಿಗಳೆಂಬ) ಮೂರು ತೇಜಸ್ಸುಗಳು ರೂಪವನ್ನು ಗ್ರಹಿಸುವದಕ್ಕೆ ಸಾಧನವು. ವಾಸನೆಯನ್ನು ಹಿಡಿಯುವದಕ್ಕೆ ಹೂವಿನ ಸಂಪುಟವೇ ಮುಂತಾದವುಗಳಂತೆ ಘ್ರಾಣವು ಸಾಧನವು. ಜಿಹ್ವೆಯು ಮೊಸರು, ಜೇನುತುಪ್ಪ, ತುಪ್ಪ – ಮುಂತಾದವುಗಳಂಥ. ರಸವನ್ನು ಗ್ರಹಿಸತಕ್ಕದ್ದು. 'ನನಗೆ ಇಂದ್ರಿಯಗಳಿಲ್ಲ, ನಾನು ಮೂಕನೂ ಕುರುಡನೂ ಕಿವುಡನೂ ಆಗಿರುತ್ತೇನೆ'– ಎಂದು (ಆಯಾ) ಇಂದ್ರಿಯಗಳಿಲ್ಲದವರು ಹೇಳಿಕೊಳ್ಳುತ್ತಾರೆ. (ಹಾಗಾದರೆ) ಅವರು ಆತ್ಮನಿಲ್ಲದವರೇನು ?

### ವಿವೇಚನೆ

ಇಂದ್ರಿಯಗಳು 'ಆತ್ಮಗಳಲ್ಲ' – ಎಂದು ಬಹುವಚನವು ಇಲ್ಲಿ ವ್ಯರ್ಥವಾಗಿ ಪ್ರಯುಕ್ತವಾಗಿದೆ. 'ನಾನು ಇಂದ್ರಿಯಗಳು' ಎಂದಾಗಲಿ, 'ನಾನು ಅನೇಕ ರೂಪರಾದ ಆತ್ಮರಾಗಿದೇನೆ' ಎಂದಾಗಲಿ ಯಾರೂ ಬಗೆಯುವದೇ ಇಲ್ಲ.

ಶಬ್ದವನ್ನು ಗ್ರಹಿಸುವದಕ್ಕೆ ವೀಣೆಯೇ ಮುಂತಾದ ಶಬ್ದಾಶ್ರಯಗಳು ಬೇಕಾಗಿರುವಂತೆ ಶ್ರೋತ್ರವೂ ಬೇಕಾಗಿದೆ. ಹೀಗೆಯೇ ಚಕ್ಷುರಾದೀಂದ್ರಿಯಗಳೂ ತಮ್ಮ ತಮ್ಮ ಆಶ್ರಯವಾದ ವಿಷಯಗಳಂತೆಯೇ ಆಯಾ ವಿಷಯವನ್ನು ಗ್ರಹಿಸುವದಕ್ಕೆ ಬೇಕಾಗಿರುವ ಸಾಧನಮಾತ್ರ. ನಿಜವಾಗಿ ಆ ಕರಣಗಳನ್ನು ಬಳಸಿಕೊಳ್ಳುವ ಆತ್ಮನು ಬೇರೆಯಾಗಿರಬೇಕಷ್ಟೆ ! – ಎಂದು ಉದಾಹರಣೆಗಳಿಗೆ ಅಭಿಪ್ರಾಯವನ್ನು ಕಲ್ಪಿಸಬೇಕು.

ಕರಣವಿಲ್ಲದಿದ್ದರೂ ಮೂಕನೇ ಮೊದಲಾಗಿರುವ ಜೀವರು ಬೇರೆ ಇರುವದು ಲೋಕದಲ್ಲಿ ಕಂಡಿದೆ. ಆದ್ದರಿಂದ ಕರಣಗಳಿಗಿಂತ ಬೇರೆಯಾದ ಕರ್ತೃವಾದ ಆತ್ಮನನ್ನು ಇಲ್ಲವೆನ್ನುವದು ಸಲ್ಲದು – ಎಂದು ಕೊನೆಯ ವಾಕ್ಯದ ಅಭಿಪ್ರಾಯ.

## ಪ್ರಾಣವೂ ಆತ್ಮನಲ್ಲ

**ಪ್ರಾಣೋಽಪ್ಯಾತ್ಮಾ ನ ಭವತಿ ಜ್ಞಾನಾಭಾವಾತ್ಸುಷುಪ್ತಿಷು ।**
**ಜಾಗ್ರತ್ಸ್ವಪ್ನೋಪಭೋಗೋತ್ಥಶ್ರಮವಿಚ್ಛಿತ್ತಿಹೇತವೇ ॥ ೧೮ ॥**
**ಸುಷುಪ್ತಿಂ ಪುರುಷೇ ಪ್ರಾಪ್ತೇ ಶರೀರಮಭಿರಕ್ಷಿತುಮ್ ।**
**ಶೇಷಕರ್ಮೋಪಭೋಗಾರ್ಥಂ ಪ್ರಾಣಶ್ಚರತಿ ಕೇವಲಮ್ ॥ ೧೯ ॥**
**ಪ್ರಾಣಸ್ಯ ತತ್ರ ಚೈತನ್ಯಂ ಕರಣೋಪರಮೋ ಯದಿ ।**
**ಪ್ರಾಣೇ ವ್ಯಾಪ್ರಿಯಮಾಣೇ ತು ಕರಣೋಪರತಿಃ ಕಥಮ್ ॥ ೨೦ ॥**
**ಸಮ್ರಾಜಿ ಹಿ ರಣೋದ್ಯುಕ್ತೇ ವಿರಮನ್ತಿ ನ ಸೈನಿಕಾಃ ।**
**ತಸ್ಮಾನ್ನ ಕರಣಸ್ವಾಮೀ ಪ್ರಾಣೋ ಭವಿತುಮರ್ಹತಿ ॥ ೨೧ ॥**

೧೮–೨೧. ಪ್ರಾಣವೂ ಆತ್ಮನಾಗಲಾರದು. ಏಕೆಂದರೆ ಸುಷುಪ್ತಿಯೇ ಮುಂತಾದ ಅವಸ್ಥೆಗಳಲ್ಲಿ ಅರಿವು ಇರುವದಿಲ್ಲ. ಜಾಗ್ರತ್ಸ್ವಪ್ನಗಳನ್ನು ಅನುಭವಿಸಿದ್ದರಿಂದಾದ ಶ್ರಮದ ನಾಶಕ್ಕಾಗಿ ಮನುಷ್ಯನು ಸುಷುಪ್ತಿಯನ್ನು ಪಡೆಯಲಾಗಿ ಶರೀರವನ್ನು ಕಾಪಾಡಿಕೊಳ್ಳುವದಕ್ಕಾಗಿ ಉಳಿದಿರುವ ಕರ್ಮ(ಫಲವನ್ನು) ಅನುಭವಿಸುವದಕ್ಕಾಗಿ ಮಾತ್ರ ಪ್ರಾಣವು (ಆಗ) ಸಂಚರಿಸುತ್ತಿರುತ್ತದೆ.

ಅಲ್ಲಿ ಪ್ರಾಣಕ್ಕೆ ಅರಿವಿಲ್ಲದಿರುವದು ಕರಣಗಳು ಸುಮ್ಮನಿರುವದರಿಂದ ಎನ್ನುವದಾದರೆ, ಪ್ರಾಣವು ವ್ಯಾಪಾರಮಾಡುತ್ತಿದ್ದರೂ ಕರಣಗಳು ಸುಮ್ಮನಾಗುವದು ಹೇಗೆ ? ಚಕ್ರವರ್ತಿಯು (ತಾನೇ) ಯುದ್ಧದಲ್ಲಿ ಉದ್ಯುಕ್ತನಾಗಿರುವಲ್ಲಿ ಸೈನಿಕರು (ಯುದ್ಧವನ್ನು ಬಿಟ್ಟು ಸುಮ್ಮ) ನಿರುವದಿಲ್ಲವಷ್ಟೆ ? ಆದ್ದರಿಂದ ಪ್ರಾಣವೇ ಕರಣಗಳಿಗೆ ಒಡೆಯನೆಂದಾಗಲಾರದು.

## ವಿವೇಚನೆ

ಪ್ರಾಣದ ಬಲದಿಂದಲೇ ಕರಣಗಳು ಕೆಲಸಮಾಡುತ್ತಿರುವವಾದ್ದರಿಂದ ಅದೇ ಕರಣಗಳೆಲ್ಲಕ್ಕೂ ಒಡೆಯನಾದ ಆತ್ಮ–ಎಂದು ಕಲ್ಪಿಸುವದಕ್ಕೆ ಆಗುವದಿಲ್ಲ. ಇಲ್ಲಿ ಪ್ರಾಣವು ಕರಣಗಳೆಲ್ಲಕ್ಕಿಂತಲೂ ಶ್ರೇಷ್ಠವಾಗಿದ್ದರೂ ಅದೂ ಸ್ವತಂತ್ರವಲ್ಲವೆಂಬುದನ್ನು

ತಿಳಿಯಿಸಿದೆ. ಪ್ರಶ್ನೋಪನಿಷತ್ತಿನ ಎರಡನೆಯ ಪ್ರಶ್ನೆಯಲ್ಲಿ ಪ್ರಾಣದ ಮಹತ್ತ್ವವನ್ನು ವರ್ಣಿಸಿ ಮುಂದಿನ ಪ್ರಶ್ನೆಯಲ್ಲಿ ಪ್ರಾಣವೂ ಆತ್ಮನಿಂದಲೇ ಉಂಟಾಗುತ್ತದೆ ಎಂದು ಹೇಳಿರುವದನ್ನು ಲಕ್ಷಿಸಿರಿ.

## ಮನಸ್ಸೂ ಆತ್ಮನಲ್ಲ

**ಮನಸಃ ಪ್ರೇರಕೇ ಪುಂಸಿ ವಿರತೇ ವಿರಮನ್ತ್ಯತಃ ।**
**ಕರಣಾನಿ ಸಮಸ್ತಾನಿ ತೇಷಾಂ ಸ್ವಾಮೀ ತತಃ ಪುಮಾನ್ ॥ ೨೨ ॥**

೨೨. ಮನಸ್ಸಿನ ಪ್ರೇರಕನಾದ ಪುರುಷನು ಸುಮ್ಮನಾಗಲು ಎಲ್ಲಾ ಕರಣಗಳೂ ಸುಮ್ಮನಾಗುವವು. ಆದ್ದರಿಂದ ಅವುಗಳಿಗೆ ಪುರುಷನೇ ಒಡೆಯನು.

### ವಿವೇಚನೆ

ಆತ್ಮನ ಸಂಬಂಧವು ಇಂದ್ರಿಯಗಳಿಗಿಲ್ಲವಾಗಲು ಮನಸ್ಸೂ ಇತರ ಕರಣಗಳಂತೆ ನಿರ್ವ್ಯಾಪಾರವಾಗುತ್ತದೆ. ಆದ್ದರಿಂದ ಅದೂ ಆತ್ಮನಲ್ಲ – ಎಂದರ್ಥ. ಇಲ್ಲಿ ಆತ್ಮನು ಉಪರತನಾಗುವನೆಂದರೆ ಕರಣಗಳ ಸಂಬಂಧವು ಅವನಿಗಿಲ್ಲದೆ ಹೋಗುವದು – ಎಂದಿಷ್ಟೇ ಅರ್ಥ. ಏಕೆಂದರೆ ಆತ್ಮನು ಸಕ್ರಿಯನೆಂದೇನೂ ವೇದಾಂತಿಗಳು ಒಪ್ಪುವದಿಲ್ಲ.

## ಕ್ಷಣಿಕವಿಜ್ಞಾನವೂ ಆತ್ಮನಲ್ಲ

**ಬುದ್ಧಿಸ್ತು ಕ್ಷಣಿಕಾ ವೇದ್ಯಾ ಗಮನಾಗಮನಾನ್ವಿತಾ ।**
**ಆತ್ಮನಃ ಪ್ರತಿಬಿಮ್ಬೇನ ಭಾಸಿತಾ ಭಾಸಯೇಜ್ಜಗತ್ ॥ ೨೩ ॥**
**ಆತ್ಮನ್ಯುತ್ಪದ್ಯತೇ ಬುದ್ಧಿರಾತ್ಮನ್ಯೇವ ಪ್ರಲೀಯತೇ ।**
**ಪ್ರಾಗೂರ್ಧ್ವಂ ಚಾಸತೀ ಬುದ್ಧಿಃ ಸ್ವಯಮೇವ ನ ಸಿಧ್ಯತಿ ॥ ೨೪ ॥**
**ಜ್ಞಾನಾಚ್ಚೇತ್ ಪೂರ್ವಪೂರ್ವಸ್ಮಾದುತ್ತರೋತ್ತರಸಂಭವಃ ।**
**ಯುಗಪದ್ಬಹುಬುದ್ಧಿತ್ವಂ ಪ್ರಸಜ್ಯೇತ ಕ್ಷಣೇ ಕ್ಷಣೇ ॥ ೨೫ ॥**
**ಬುದ್ಧ್ಯನ್ತರಂ ನ ಜನಯೇತ್ ನಾಶೋತ್ತರಮಸತ್ತ್ವತಃ ॥ ೨೫½ ॥**

೨೩–೨೫½. ಕ್ಷಣಿಕವಾದ ಬುದ್ಧಿಯು ಬಂದೂಹೋಗೀ ಮಾಡುತ್ತಿರುವ ಆತ್ಮನ ಚೇತನದಿಂದ ಬೆಳಗುತ್ತಾ ಜಗತ್ತನ್ನೂ ಬೆಳಗಿಸುತ್ತಿರುವದು – (ಈ) ಬುದ್ಧಿಯು ಆತ್ಮನಲ್ಲಿ ಹುಟ್ಟುತ್ತದೆ, ಆತ್ಮನಲ್ಲಿಯೇ ಲಯವಾಗುತ್ತಿರುತ್ತದೆ. (ಹುಟ್ಟುವ) ಮೊದಲೂ (ಲಯವಾದ) ಬಳಿಕವೂ ಇಲ್ಲದ್ದರಿಂದ ಅದು

ಸ್ವಯಂಸಿದ್ಧವಲ್ಲ. ಹಿಂದುಹಿಂದಿನ ಜ್ಞಾನದಿಂದ ಮುಂದುಮುಂದಿನದು ಹುಟ್ಟುತ್ತದೆ- ಎನ್ನುವದಾದರೆ ಒಂದೊಂದು ಕ್ಷಣದಲ್ಲಿಯೂ ಒಂದೇ ಕಾಲದಲ್ಲಿ ಅನೇಕ ಬುದ್ಧಿಗಳು ಉಂಟಾಗಬಹುದಾಗುವದು. ನಾಶವಾದ ಬಳಿಕ (ತಾನೇ) ಇರುವದಿಲ್ಲವಾದ್ದರಿಂದ ಮತ್ತೊಂದು ಬುದ್ಧಿಯನ್ನುಂಟುಮಾಡಲಾರದೆಹೋಗಬೇಕಾದೀತು.

### ವಿವೇಚನೆ

ಕ್ಷಣಿಕವಿಜ್ಞಾನವೇ ಆತ್ಮನೆನ್ನುವದಾದರೆ ಅದು ಆಗಮಾಪಾಯಿಗಳುಳ್ಳದ್ದಾದ್ದರಿಂದ ಅದರಲ್ಲಿ ಕಾಣುವ ಅರಿವು ಬುದ್ಧಿಗಿಂತ ಬೇರೆಯಾಗಿರುವ (ಆತ್ಮ)ನಿಂದ ಬಂದು ಅದರಲ್ಲಿ ಸೇರುತ್ತದೆ ಎಂದು ಒಪ್ಪಬೇಕು. ಹುಟ್ಟುಹೊಂದುಗಳುಳ್ಳ ಬುದ್ಧಿಯು ನಡುವೆ ತಾನೇ ತೋರಿಕೊಳ್ಳುವದೆಂಬುದು ಯುಕ್ತವಲ್ಲ. ಹಿಂದಿನ ಕ್ಷಣದಲ್ಲಿದ್ದ ಜ್ಞಾನವು ತನ್ನ ಮುಂದಿನ ಜ್ಞಾನವನ್ನುಂಟುಮಾಡುವದೆನ್ನುವಹಾಗೂ ಇಲ್ಲ; ಏಕೆಂದರೆ ಅದು ಮತ್ತೊಂದು ಕ್ಷಣದವರೆಗೆ ಇರುವದಿಲ್ಲವಾದ್ದರಿಂದ ಅದೇ ಕ್ಷಣದಲ್ಲಿ ಮತ್ತೊಂದು ಬುದ್ಧಿಯನ್ನುಂಟುಮಾಡುತ್ತದೆಯೆಂದು ಒಪ್ಪಬೇಕಾಗುವದರಿಂದ ಇನ್ನೂ ಅನೇಕಬುದ್ಧಿಗಳು ಏತಕ್ಕೆ ಹುಟ್ಟುವದಿಲ್ಲ?- ಎಂಬ ಆಕ್ಷೇಪಕ್ಕೆ ಈ ವಾದದಲ್ಲಿ ಉತ್ತರವಿಲ್ಲ. ಒಂದು ಕ್ಷಣದಲ್ಲಿ ತೋರುವ ಬುದ್ಧಿಯು ಇನ್ನೊಂದು ಕ್ಷಣದವರೆಗೆ ಇರುತ್ತದೆ ಎಂದು ವಿಜ್ಞಾನವಾದಿಗಳು ಒಪ್ಪುವದಿಲ್ಲವಾದ್ದರಿಂದ ಮತ್ತೊಂದು ಬುದ್ಧಿಯನ್ನು ಹೇಗೆತಾನೆ ಉಂಟುಮಾಡೀತು?- ಎಂಬ ಶಂಕೆಗೂ ಇಲ್ಲಿ ಉತ್ತರವಿಲ್ಲ- ಎಂದು ಅಭಿಪ್ರಾಯ. ಇವೆಲ್ಲ ಕೇವಲ ತರ್ಕದಿಂದ ಮಾಡಿರುವ ಆಕ್ಷೇಪ- ಎಂಬುದನ್ನು ಹೇಳಬೇಕಾದದ್ದೇ ಇಲ್ಲ.

## ದೇಹಾದಿಸಂಘಾತವೇ ಆತ್ಮನೆನ್ನುವದು ಸರಿಯಲ್ಲ

**ಏಷಾಂ ಸಙ್ಘಾತ ಆತ್ಮಾ ಚೇದೇಕದೇಶೇ ಪೃಥಕ್ಕೃತೇ।**
**ನ ಚೈತನ್ಯಂ ಪ್ರಸಜ್ಯೇತ ಸಙ್ಘಾತಾಭಾವತಸ್ತದಾ ॥ ೨೬ ॥**

**ಭಿನ್ನದಿಗ್ಗತ್ಯಭಿಪ್ರಾಯೋ ಬಹುಚೇತನಪುಞ್ಜಿತಮ್।**
**ಸದ್ಯೋ ಭಿನ್ನಂ ಭವೇದೇತನ್ನಿಷ್ಕ್ರಿಯಂ ವಾ ಭವಿಷ್ಯತಿ ॥ ೨೭ ॥**

೨೬-೨೭. ಈ ದೇಹಾದಿಗಳ ಸಂಘಾತವೇ ಆತ್ಮನೆನ್ನುವದಾದರೆ (ಇವುಗಳಲ್ಲಿ) ಒಂದು ಭಾಗವು ಬೇರೆಯಾದರೆ ಅರಿವು ಇಲ್ಲವಾದೀತು! ಬಹುಚೇತನಗಳ ಗುಂಪು ಬೇರೆಬೇರೆ ಕಡೆಗೆ ಅಭಿ

ಸ್ತ್ರೀಯುವಿರುವಾಗ ಈ (ಸಂಘಾತವು) ಕೂಡಲೆ ಒಡೆದುಹೋಗ ಬೇಕಾಗಬಹುದು, ಅಥವಾ ಕ್ರಿಯಾರಹಿತವಾಗಿಯೂ ಇರಬಹುದು.

## ವಿವೇಚನೆ

ಕ್ಷಣಿಕವಿಜ್ಞಾನವಾದವನ್ನು ಕೇವಲ ತರ್ಕದಿಂದಲೇ ಖಂಡಿಸಿರುವಂತೆಯೇ ಇಲ್ಲಿಯೂ ದೇಹಾದಿಸಂಘಾತವೇ ಆತ್ಮನೆಂಬ ವಾದವನ್ನು ತರ್ಕದಿಂದಲೇ ಖಂಡಿಸಿದೆ. ಸಂಘಾತದ ಅವಯವಗಳಲ್ಲಿ ಯಾವದೊಂದು ತಪ್ಪಿದರೂ ಸಂಘಾತಕ್ಕೆ ಚೈತನ್ಯವಿಲ್ಲದೆಹೋಗಬೇಕಾಗುವದು ; ಎಲ್ಲಕ್ಕೂ ಚೈತನ್ಯವಿದೆ ಯೆಂದರೆ ಒಬ್ಬನಿಗೆ ಒಂದು ಅಭಿಪ್ರಾಯವಾದಾಗ ಮತ್ತೊಬ್ಬನಿಗೆ ಮತ್ತೊಂದು ಅಭಿಪ್ರಾಯವಾಗಿ ಸಂಘಾತವು ಸಂಘಾತವಾಗಿ ಉಳಿದುಕೊಳ್ಳುವದೇ ಅಸಾಧ್ಯ ವಾಗುವದು—ಎಂದು ಅಭಿಪ್ರಾಯ. ಸಂಘಾತಕ್ಕೆಲ್ಲ ಸಾಕ್ಷಿಯಲ್ಲಿ ನಿಲುಗಡೆ-ಎಂಬ ಅನುಭವವನ್ನು ಅದೇಕೊ, ಇಲ್ಲಿ ಉದಾಹರಿಸಿಲ್ಲ.

## ಆತ್ಮನ ಪರಿಮಾಣ

**ದೇಹಸ್ಯಾನ್ತರ್ಗತೋಽಪ್ಯಾತ್ಮಾ ವ್ಯಾಪ್ತ ಏವೇತಿ ಬುಧ್ಯತೇ ।**
**ಅಣುಪ್ರಮಾಣಶ್ಚೇದೇಷ ವ್ಯಾಪ್ನುಯಾನ್ನಾಖಿಲಂ ವಪುಃ ॥ ೨೮ ॥**

**ದೇಹಪ್ರಮಾಣಶ್ಚೇನ್ನ ಸ್ಯಾತ್ ಬಾಲಸ್ಯ ಸ್ಥವಿರಾದಿತಾ ।**
**ದೇಹವತ್ ಪರಿಣಾಮೀ ಸ್ಯಾತ್ ತದ್ವದೇವ ವಿನಙ್ಕ್ಷ್ಯತಿ ॥ ೨೯ ॥**

**ಕರ್ಮಣಾಂ ಪರಿಣಾಮೇನ ಕ್ರಿಮಿಹಸ್ತ್ಯಾದಿಮೂರ್ತಿಷು ।**
**ವ್ಯಾಪ್ತತ್ವಾತ್ ಪ್ರವಿಶತ್ಯಾತ್ಮಾ ಘಟಾದಿಷ್ವನ್ತರಿಕ್ಷವತ್ ॥ ೩೦ ॥**

**ಪರಮಾಣುಪ್ರಮಾಣೇಽಪಿ ಮನಸಿ ಪ್ರತಿಭಾಸತೇ ।**
**ಸ್ವಪ್ನೇ ಚರಾಚರಂ ವಿಶ್ವಮಾತ್ಮನ್ಯೇವ ಪ್ರತಿಷ್ಠಿತಮ್ ॥ ೩೧ ॥**

೨೮—೩೧. ದೇಹದೊಳಗೆ ಇರುವನಾದರೂ ಆತ್ಮನು ವ್ಯಾಪಿಯೆಂದೇ ಗೊತ್ತಾಗುತ್ತದೆ. ಇವನು ಅಣುಪರಿಮಾಣನಾಗಿದ್ದರೆ ಶರೀರವನ್ನೆಲ್ಲ ವ್ಯಾಪಿಸಿಕೊಂಡಿರಲಾರನು. ದೇಹದ ಪರಿಮಾಣದಷ್ಟೇ ಪರಿಮಾಣವುಳ್ಳವನಿವನು- ಎನ್ನುವದಾದರೆ ಹುಡುಗನಿಗೆ ವಾರ್ಧಕ್ಯವೇ ಮುಂತಾದ ಅವಸ್ಥೆಯು ಆಗಬಾರದಾಗುವದು ; ದೇಹದಂತೆಯೇ ಇವನೂ ಪರಿಣಾಮಿ- ಎಂದಾಗಿ ಅದರಂತೆ ನಾಶವಾಗಬಹುದಾಗು ವದು. ಕರ್ಮಗಳ ಪರಿಣಾಮದಿಂದ ಹುಳು,ಆನೆ-ಮುಂತಾದ ಶರೀರ

ಗಳಲ್ಲಿ ಆತ್ಮನು - ಆಕಾಶವು ಗಡಿಗೆ ಮುಂತಾದವುಗಳಲ್ಲಿ ಹೊಕ್ಕಿರುವಂತೆ-ವ್ಯಾಪಿಸಿಕೊಂಡು ಒಳಹೊಕ್ಕಿರುವನು. ಆತ್ಮನು ಪರಮಾಣುವಿನಷ್ಟು ಅಳತೆಯುಳ್ಳವನೆಂದರೂ ಮನಸ್ಸಿನಲ್ಲಿ ತೋರಿಕೊಳ್ಳುವನು. ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವೂ ಕನಸಿ(ನಲ್ಲಿರುವಂತೆ) ಆತ್ಮನಲ್ಲೇ ಇರುವದು.

### ವಿವೇಚನೆ

ಇಲ್ಲಿ ಆತ್ಮನ ಪರಿಮಾಣದ ವಿಚಾರವು ಮೂಲದಲ್ಲಿಲ್ಲವಾದರೂ ಮಾನಸೋಲ್ಲಾಸಕಾರರು ವಿಚಾರಕ್ಕೆ ತೆಗೆದುಕೊಂಡಿರುತ್ತಾರೆ. ಜೀವಾತ್ಮನು ಅಣುಪರಿಮಾಣನೆಂಬುದನ್ನು ಸೂತ್ರಭಾಷ್ಯದಲ್ಲಿ (ಸೂ.ಭಾ.೨-೩-೧೯ರಿಂದ ೩೧ರವರೆಗೆ) ವಿಚಾರಕ್ಕೆ ತೆಗೆದುಕೊಂಡಿರುವ ರೀತಿಯನ್ನು ಇದಕ್ಕೆ ಹೋಲಿಸಬೇಕು. ಆತ್ಮನು ಅಣುಪರಿಮಾಣನೆಂದರೆ ಶರೀರದಲ್ಲೆಲ್ಲ ಚೈತನ್ಯದ ಧರ್ಮವು ವ್ಯಾಪಿಸಿರುವದೆಂಬ ಅನುಭವಕ್ಕೆ ವಿರುದ್ಧವಾಗುತ್ತದೆ. ಜೈನರಂತೆ ದೇಹಪರಿಮಾಣದವನೆಂದರೆ ಹುಡುಗನ ಶರೀರಕ್ಕಿಂತ ಮುದುಕನ ಶರೀರವು ದೊಡ್ಡದಾಗಿರುವದರಿಂದ ಅದರಷ್ಟಾಗಿ ಪರಿಣಮಿಸಲಾರನು. ಪರಿಣಾಮಿಯೇ ಎಂದರೆ ದೇಹದಂತೆ ಪರಿಣಾಮಿಯಾಗಿರುವ ಜೀವನು ಅದರಂತೆಯೇ ನಾಶವಾಗಬೇಕಾಗುವದು -ಎಂದು ತರ್ಕದಿಂದ ದೋಷವನ್ನು ಇಲ್ಲಿ ಹೇಳಿದೆ. ಸರ್ವವ್ಯಾಪಿಯಾದ ಆಕಾಶವು ಚಿಕ್ಕದಾದ ಕುಡಿಕೆಯಲ್ಲಿ, ಮತ್ತು ದೊಡ್ಡದಾಗಿರುವ ಗುಡಾಣದೊಳಗೆ- ಪ್ರವಿಷ್ಟವಾಗಿರುವಂತೆ ಆತ್ಮನು ಮನಸ್ಸಿನಲ್ಲಿಯೂ ಒಳಹೊಕ್ಕಂತಿರುತ್ತಾನೆ. ಕನಸಿನಲ್ಲಿ ಕಾಣುವ ಪ್ರಪಂಚವನ್ನೆಲ್ಲ ವ್ಯಾಪಿಸಿಕೊಂಡೂ ಇರುತ್ತಾನೆ. ಆದ್ದರಿಂದ ಆತ್ಮನು ವ್ಯಾಪಿಯೇ ಎಂದು ಭಾವ.

## ಭ್ರಾಂತಿಯಿಂದಲೇ ಸಂಸಾರ

**ದೇಹಾದಿಷ್ವಹಮಿತ್ಯೇವಂ ಭ್ರಮಃ ಸಂಸಾರಹೇತುಕಃ ।**
**ಅನ್ತಃಪ್ರವಿಷ್ಟಃ ಶಾಸ್ತೇತಿ ಮೋಕ್ಷಾಯೋಪಾದಿಶಚ್ಛ್ರುತಿಃ ॥ ೩೨ ॥**
**ಏವಮೇಷಾ ಮಹಾಮಾಯಾ ವಾದಿನಾಮಪಿ ಮೋಹಿನೀ ।**
**ಯಸ್ಮಾತ್ ಸಾಕ್ಷಾತ್ಕೃತೇ ಸದ್ಯೋ ಲೀಯತೇ ಚ ಸದಾಶಿವೇ ॥ ೩೩ ॥**

೩೨-೩೩. ದೇಹವೇ ಮುಂತಾದವುಗಳಲ್ಲಿ 'ನಾನು' ಎಂದಿಂತು ಉಂಟಾಗಿರುವ ಭ್ರಮೆಯೇ ಸಂಸಾರಕ್ಕೆ ಕಾರಣವು. '**अन्तःप्रविष्टः शास्ता जनानाम्**' (ಈಶ್ವರನು ಜನರೊಳಗೆಪ್ರವೇಶಿಸಿರುತ್ತಾನೆ) ಎಂದು ಶ್ರುತಿಯು ಮೋಕ್ಷಫಲಕ್ಕಾಗಿ ತತ್ತ್ವವನ್ನು ಉಪದೇಶಿಸಿರುತ್ತದೆ. ಹೀಗೆ ಈ ಮಹಾಮಾಯೆಯು ವಾದಿಗಳಾದ

ಪರೀಕ್ಷಕರನ್ನು ಮೋಹಗೊಳಿಸುತ್ತಿದೆ. (ಇದು ಮಾಯೆಯೆಂಬು) ದೇಕೆಂದರೆ ಸದಾಶಿವನು ಸಾಕ್ಷಾತ್ಕೃತನಾದರೆ ಕೂಡಲೆ ಅವನಲ್ಲಿ ಲಯವಾಗಿಬಿಡುವದು.

## ವಿವೇಚನೆ

'ಸಂಸಾರಹೇತುಕಃ' ಎಂಬುದನ್ನು 'ಸಂಸಾರಹೇತುತಃ' ಎಂಬರ್ಥದಲ್ಲಿಟ್ಟು ಕೊಳ್ಳಬೇಕು. ದೇಹ, ಇಂದ್ರಿಯ, ಮನಸ್ಸು- ಮುಂತಾದವುಗಳಲ್ಲಿ ನಾನೆಂಬ ಅಧ್ಯಾಸವೇ ಸಂಸಾರಕ್ಕೆ ಕಾರಣ. ಆದ್ದರಿಂದ 'अन्तःप्रविष्टः शास्ता जनानाम् । एकः सन् बहुधा विचारः' (ತೈ. ಆ. ೩–೧೧) 'ಜನರ ಒಳಗೆ ಪ್ರವೇಶಿಸಿರುವ ಅಂತರ್ಯಾಮಿಯು ಒಬ್ಬನೇ ಆಗಿದ್ದು ಬಹುಪ್ರಕಾರದಿಂದ ತೋರಿಕೊಳ್ಳುತ್ತಿದಾನೆ' –ಎಂದು ಮೋಕ್ಷಕ್ಕಾಗಿ ಹೇಳುತ್ತಿದೆ. ಸಂಸಾರಿಯಾಗಿ ಕಂಡರೂ ನಿಜವಾಗಿ ಆತ್ಮನು ತನ್ನ ಸಾಕ್ಷಿಸ್ವರೂಪದಿಂದಲೇ ಇರುತ್ತಾನೆ ಎಂದು ಅಭಿಪ್ರಾಯ. ಆ ಪರಮೇಶ್ವರನ ಸಾಕ್ಷಾತ್ಕಾರವಾದರೆ ಕೂಡಲೆ ಆತನಲ್ಲಿಯೇ ಒಂದಾಗಿ ಈಗ ತಾನು ತೋರುತ್ತಿರುವ ರೂಪದಿಂದ ಇಲ್ಲವಾಗಿಬಿಡುವದರಿಂದಲೇ ಇದು ಮಾಯೆ ಎಂದು ಗೊತ್ತಾಗುತ್ತದೆ– ಎಂದು ಅಭಿಪ್ರಾಯ. ಮಾಯೆಯು ಆತ್ಮಸಾಕ್ಷಾತ್ಕಾರದಿಂದ ಹೋಗಿಬಿಡುತ್ತದೆ– ಎಂದು ಇಲ್ಲಿ ಹೇಳಿದೆ. ಇದು ಹೇಗೆ ಹೋಗುತ್ತದೆ –ಎಂಬುದು ಸ್ಪಷ್ಟವಾಗಿಲ್ಲ. ಟೀಕೆಯನ್ನು ನೋಡಿ.

**ದೇಹೇನ್ದ್ರಿಯಾಸುಹೀನಾಯ ಮಾನದೂರಸ್ವರೂಪಿಣೇ ।**
**ಜ್ಞಾನಾನನ್ದಸ್ವರೂಪಾಯ ದಕ್ಷಿಣಾಮೂರ್ತಯೇ ನಮಃ** ॥ ೩೪ ॥

೩೪–೩೪. ದೇಹ, ಇಂದ್ರಿಯಗಳು, ಪ್ರಾಣ– ಇವುಗಳು ಯಾವವೂ ಇಲ್ಲದ ಪ್ರಮಾಣಕ್ಕೆ ಸಿಕ್ಕದೆ ದೂರನಾಗಿರುವ ಜ್ಞಾನಾನಂದಸ್ವರೂಪನಾದ ದಕ್ಷಿಣಾಮೂರ್ತಿಗೆ ನಮಸ್ಕಾರ !

**ಇತಿ ಶ್ರೀ ದಕ್ಷಿಣಾಮೂರ್ತಿಸ್ತೋತ್ರಾರ್ಥಪ್ರತಿಪಾದಕೇ ।**
**ಪ್ರಬನ್ಧೇ ಮಾನಸೋಲ್ಲಾಸೇ ಪಞ್ಚಮೋಲ್ಲಾಸಸಙ್ಗ್ರಹಃ** ॥ ೩೫ ॥

೩೫. ಹೀಗೆ ಶ್ರೀದಕ್ಷಿಣಾಮೂರ್ತಿಸ್ತೋತ್ರದ ಅರ್ಥವನ್ನು ತಿಳಿಯಿಸುವ ಮಾನಸೋಲ್ಲಾಸವೆಂಬ ಪ್ರಬಂಧದಲ್ಲಿ ಐದನೆಯ ಉಲ್ಲಾಸದ ಸಂಗ್ರಹವು ಮುಗಿಯಿತು.

---

## ೬. ಆತ್ಮನು ಅದ್ವಿತೀಯಕೂಟಸ್ಥ ನಿರ್ವಿಶೇಷರೂಪನು

### ಬೌದ್ಧಸಿದ್ಧಾಂತದ ಅನುವಾದ

**ಸ್ವಪ್ನೇ ವಿಶ್ವಂ ಯಥಾನ್ತಃಸ್ಥಂ ಜಾಗ್ರತ್ಯಪಿ ತಥೇತಿ ಚೇತ್ ।**
**ಸುಷುಪ್ತೌ ಕಸ್ಯ ಕಿಂ ಭಾತಿ ಕಃ ಸ್ಥಾಯೀ ತತ್ರ ಚೇತನಃ ॥ ೧ ॥**

೧. ಕನಸಿನಲ್ಲಿ ಹೇಗೆ ಎಲ್ಲವೂ ಆತ್ಮನೊಳಗೇ ಇರುತ್ತದೆಯೋ, ಹಾಗೆಯೇ ಎಚ್ಚರದಲ್ಲಿ (ಆತ್ಮನೊಳಗೇ ಇರುತ್ತದೆ)- ಎನ್ನುವವಾದರೆ ಸುಷುಪ್ತಿಯಲ್ಲಿ ಯಾವನಿಗೆ ಏನು ಕಾಣಿಸುತ್ತದೆ? ಅಲ್ಲಿಯೂ ನಿಂತಿರುವ ಚೇತನನು ಯಾರು ?

### ವಿವೇಚನೆ

'ನಿಜಾನ್ತರ್ಗತಂ' (ತನ್ನೊಳಗೆ ಇರುವ ವಿಶ್ವವನ್ನು ಮಾಯೆಯಿಂದ ಹೊರಗೆ ಕಾಣುತ್ತಾ; ಶ್ಲೋ. ೧)- ಎಂದು ಸಿದ್ಧಾಂತಿಯು ಹೇಳಿರುವದರ ಮೇಲಿನ ಆಕ್ಷೇಪವಿದು. ಸುಷುಪ್ತಿಯಲ್ಲಿ ಏನೂ ಕಾಣುತ್ತಲೇ ಇರುವದಿಲ್ಲ; ಅಲ್ಲಿ ಏತರ ಅರಿವೂ ಇರುವದೇಇಲ್ಲವಲ್ಲ !- ಎಂದು ಆಕ್ಷೇಪ.

**ಸರ್ವಂ ಚ ಕ್ಷಣಿಕಂ ಶೂನ್ಯಂ ಸರ್ವಮೇವ ಸ್ವಲಕ್ಷಣಮ್ ।**
**ಸಙ್ಘಾತಃ ಪರಮಾಣೂನಾಂ ಮಹ್ಯಮ್ಬ್ವಗ್ನಿಸಮೀರಣಾಃ ॥ ೨ ॥**

**ಮನುಷ್ಯಾದಿಶರೀರಾಣಿ ಸ್ಕನ್ಧಪಞ್ಚಕಸಂಹತಿಃ ।**
**ಸ್ಕನ್ಧಾಶ್ಚ ರೂಪವಿಜ್ಞಾನಸಂಜ್ಞಾಸಂಸ್ಕಾರವೇದನಾಃ ॥ ೩ ॥**

೨-೩. ಎಲ್ಲವೂ ಕ್ಷಣಿಕವು, ಶೂನ್ಯವು; ಎಲ್ಲವೂ ಸ್ವಲಕ್ಷಣವೇ; ಪೃಥಿವಿ, ಅಪ್ಪು, ತೇಜಸ್ಸು, ವಾಯು – ಇವು ಪರಮಾಣುಗಳ ಸಂಘಾತವೇ. ಮನುಷ್ಯರೇ ಮೊದಲಾದವರ ಶರೀರಗಳು ಐದು ಸ್ಕಂಧಗಳ ಸಂಘಾತವಾಗಿವೆ. ಸ್ಕಂಧಗಳು ಯಾವವೆಂದರೆ ರೂಪ, ವಿಜ್ಞಾನ, ಸಂಜ್ಞಾ, ಸಂಸ್ಕಾರ, ವೇದನಾ- ಎಂಬಿವು.

## ವಿವೇಚನೆ

ಬೌದ್ಧರಲ್ಲಿ ಬಾಹ್ಯಾಸ್ತಿತ್ವವಾದಿಗಳು, ವಿಜ್ಞಾನವಾದಿಗಳು, ಶೂನ್ಯವಾದಿಗಳು–ಎಂದು ಬಗೆಬಗೆಯ ಭೇದಗಳಿವೆ. ಇಲ್ಲಿ ಬಾಹ್ಯಾಧ್ಯಾತ್ಮಿಕವಸ್ತುಗಳೆಲ್ಲವೂ ಸ್ಕಂಧ ಮಾತ್ರವೆಂಬ ವಾದವನ್ನು ಅನುವಾದಮಾಡುತ್ತಿದ್ದಾರೆ. ಕ್ಷಣಿಕವಾದದ್ದು ಹುಟ್ಟುವ ಮೊದಲೂ ಆಮೇಲೂ ಇಲ್ಲದ್ದರಿಂದ ಶೂನ್ಯ. ಸರ್ವವೂ ಸ್ವಲಕ್ಷಣ– ಎಂದರೆ ತನ್ನನ್ನು ತನ್ನಿಂದಲೇ ಅರಿಯಬೇಕಾದದ್ದು.

**ರೂಪ್ಯನ್ತ ಇತಿ ರೂಪಾಣಿ ವಿಷಯಾಣೀನ್ದ್ರಿಯಾಣ್ಯಪಿ ।**
**ವಿಷಯೇನ್ದ್ರಿಯಯೋರ್ಜ್ಞಾನಂ ವಿಜ್ಞಾನಸ್ಕನ್ಧ ಉಚ್ಯತೇ ॥ ೪ ॥**

**ಸಂಜ್ಞಾಗುಣಕ್ರಿಯಾಜಾತಿವಿಶಿಷ್ಟಪ್ರತ್ಯಯಾತ್ಮಿಕಾ ।**
**ಪಞ್ಚಧಾ ಕಲ್ಪಿತಾ ಪ್ರೋಕ್ತಾ ಸಂಜ್ಞಾಸ್ಕನ್ಧಶ್ಚ ಸೌಗತೈಃ ॥ ೫ ॥**

**ಗವಾಂ ಗೌರಿತಿ ಸಂಜ್ಞೋಕ್ತಾ ಜಾತಿರ್ಗೋತ್ವಂ ತು ಗೋಗತಮ್ ।**
**ಗುಣಾಃ ಶುಕ್ಲಾದಯಸ್ತಸ್ಯ ಗಚ್ಛತ್ಯಾದ್ಯಾಸ್ತಥಾ ಕ್ರಿಯಾಃ ॥ ೬ ॥**

**ಶೃಙ್ಗೀ ಚತುಷ್ಪಾಲ್ಲಾಙ್ಗೂಲೀ ವಿಶಿಷ್ಟಪ್ರತ್ಯಯೋ ಹ್ಯಸೌ ।**
**ಏವಂ ಪಞ್ಚವಿಧಾ ಕ್ಲೃಪ್ತಃ ಸಂಜ್ಞಾಸ್ಕನ್ಧ ಇತೀರ್ಯತೇ ॥ ೭ ॥**

**ರಾಗಾದ್ಯಾಃ ಪುಣ್ಯಪಾಪೇ ಚ ಸಂಸ್ಕಾರಸ್ಕನ್ಧ ಉಚ್ಯತೇ ।**
**ಸುಖಂ ದುಃಖಂ ಚ ಮೋಹಶ್ಚ ಸ್ಕನ್ಧಃ ಸ್ಯಾದ್ವೇದನಾಹ್ವಯಃ ॥ ೮ ॥**

೪–೮. ವಿಷಯಗಳೂ ಇಂದ್ರಿಯಗಳೂ ರೂಪಿಸಲ್ಪಡುತ್ತವೆಯಾದ್ದರಿಂದ **ರೂಪ**ವೆನಿಸಿರುವವು. ವಿಷಯ ಮತ್ತು ಇಂದ್ರಿಯ–ಇವುಗಳ ಜ್ಞಾನವು **ವಿಜ್ಞಾನಸ್ಕಂಧ**ವೆನಿಸುತ್ತದೆ. ಸಂಜ್ಞೆ, ಗುಣ, ಕ್ರಿಯೆ, ಜಾತಿ, ವಿಶಿಷ್ಟಪ್ರತ್ಯಯ– ಎಂದು ಐದು ವಿಧವಾಗಿ ಸಂಜ್ಞಾಸ್ಕಂಧವು ಏರ್ಪಟ್ಟಿರುವದೆಂದು ಸೌಗತರು ಹೇಳುತ್ತಾರೆ. (೧) ಎತ್ತುಗಳಿಗೆ 'ಎತ್ತು' ಎಂಬುದು **ಸಂಜ್ಞೆ**ಯೆನಿಸುವದು. (೨) ಎತ್ತುಗಳಲ್ಲಿರುವ ಗೋತ್ವವಾದರೆ **ಜಾತಿ.** (೩) ಬಿಳುಪೇ ಮುಂತಾದವು ಆ (ಎತ್ತಿನ) **ಗುರುತು**ಗಳು, (೪) ಮತ್ತು ಹೋಗುವದೇ ಮುಂತಾದವು ಆದರ **ಕ್ರಿಯೆ**ಗಳು. (೫) ಕೋಡುಳ್ಳದ್ದು, ನಾಲ್ಕು ಕಾಲುಳ್ಳದ್ದು, ಬಾಲವುಳ್ಳದ್ದು–ಎಂಬಿದು **ವಿಶಿಷ್ಟಪ್ರತ್ಯಯವು.** ಹೀಗೆ ಐದು ಬಗೆಬಗೆಯಾಗಿ ಕಲ್ಪಿತವಾಗಿರುವದು ಸಂಜ್ಞಾಸ್ಕಂಧವೆಂದು ಉಕ್ತವಾಗಿದೆ.

ರಾಗವೇ ಮುಂತಾದವುಗಳೂ ಪುಣ್ಯಪಾಪಗಳೂ **ಸಂಸ್ಕಾರಸ್ಕಂಧ**ವೆನಿಸುವವು. ಸುಖ, (ದುಃಖ, ಮೋಹ) – ಇದು **ವೇದನಾಸ್ಕಂಧ**ವೆಂಬ ಹೆಸರಿನ ಸ್ಕಂಧವು.

**ವಿವೇಚನೆ**

ಆತ್ಮನೇ ಇಲ್ಲದಿದ್ದರೆ ವ್ಯವಹಾರವು ಹೇಗೆ ನಡೆಯಬೇಕು?– ಎಂದರೆ ಭೂಮಿ, ಜಲ, ತೇಜಸ್ಸು, ವಾಯು – ಇವು ಹೊರಗಿನ ನಾಲ್ಕು ವಿಧವಾದ ಪರಮಾಣುಗಳಿಂದಾಗಿರುವ ಸಂಘಾತಗಳು. ಆಧ್ಯಾತ್ಮಿಕವಾದ ಮನುಷ್ಯರೇ ಮೊದಲಾದವರುಗಳ ಶರೀರಗಳು ರೂಪಸ್ಕಂಧ, ವಿಜ್ಞಾನಸ್ಕಂಧ, ಸಂಜ್ಞಾಸ್ಕಂಧ, ಸಂಸ್ಕಾರಸ್ಕಂಧ, ವೇದನಾಸ್ಕಂಧ– ಎಂಬ ಐದುಬಗೆಯ ಸ್ಕಂಧಗಳಿಂದಾಗಿರುತ್ತವೆ. ಇವುಗಳ ವಿವರವು ಹೀಗೆ : (1) ವಿಷಯ, ಇಂದ್ರಿಯ– ಇವು **ರೂಪಸ್ಕಂಧ**ವೆನಿಸುತ್ತವೆ. (2) ಇವೆರಡರ ಜ್ಞಾನವು **ವಿಜ್ಞಾನಸ್ಕಂಧವು**. (3) **ಸಂಜ್ಞಾಸ್ಕಂಧವು** ಐದು ಬಗೆ. (೧) ಗೌಃ ಎಂಬುದು ಎತ್ತುಗಳ **ಸಂಜ್ಞೆ** (ಹೆಸರು). (೨) ಅವುಗಳಲ್ಲೆಲ್ಲ ಸಮಾನವಾಗಿರುವ **ಗೋತ್ವವು** ಜಾತಿ; (೩) ಬಿಳಿದು, ಕರಿದು– ಮುಂತಾಗಿರುವದು ಅವುಗಳಲ್ಲಿರುವ **ಗುಣವು**. (೪) ಹೋಗುವಿಕೆ, ಹಾರುವಿಕೆ– ಮುಂತಾದವು **ಕ್ರಿಯೆ**. (೫) ನಾಲ್ಕು ಕಾಲುಗಳುಳ್ಳದ್ದು, ಕೋಡುಗಳುಳ್ಳದ್ದು– ಎಂದು ಮುಂತಾಗಿ ಆಯಾ ಆಕಾರದಿಂದ ಕೂಡಿದೆ ಎಂಬುದನ್ನು ತಿಳಿಯಿಸುವದು **ವಿಶಿಷ್ಟ ಪ್ರತ್ಯಯ**. ಅಂತೂ ಹೀಗೆ ಐದು **ಸಂಜ್ಞಾಸ್ಕಂಧ**ವೆನಿಸುತ್ತದೆ. (4) ರಾಗದ್ವೇಷಾದಿಗಳು, ಪುಣ್ಯಪಾಪಗಳು– ಇವು **ಸಂಸ್ಕಾರಸ್ಕಂಧವು**. (5) ಸುಖದುಃಖಮೋಹಗಳು* **ವೇದನಾಸ್ಕಂಧ**.

**ಷಡ್ಭ್ಯ ಏವ ಸ್ಕನ್ಧೇಭ್ಯೋ ನಾನ್ಯ ಆತ್ಮಾಸ್ತಿ ಕಶ್ಚನ ।**
**ನ ಕಶ್ಚಿದೀಶ್ವರಃ ಕರ್ತಾ ಸ್ವಗಕಾತಿಶಯಂ ಜಗತ್ ॥ ೯ ॥**

**ಸ್ಕನ್ಧೇಭ್ಯಃ ಪರಮಾಣುಭ್ಯಃ ಕ್ಷಣಿಕೇಭ್ಯೋಽಭಿಜಾಯತೇ ।**
**ಪೂರ್ವಪೂರ್ವಕ್ಷಣಾದೇವ ಕ್ಷಣಃ ಸ್ಯಾದುತ್ತರೋತ್ತರಃ ॥ ೧೦ ॥**

**ಪೂರ್ವಸ್ಮಾದೇವ ಹಿ ಜ್ಞಾನಾಜ್ಜಾಯತೇ ಜ್ಞಾನಮುತ್ತರಮ್ ।**
**ಸ ಏವಾಯಮಿತಿ ಜ್ಞಾನಂ ಸೇಯಂ ಜ್ವಾಲೇವ ವಿಭ್ರಮಃ ॥ ೧೧ ॥**

**ಅಸ್ತಿ ಭಾತೀತಿ ಧೀರ್ಭ್ರಾನ್ತ್ಯೈರಾತ್ಮಾನಾತ್ಮಸು ಕಲ್ಪ್ಯತೇ ।**
**ಹಾನೋಪಾದಾನರಾಹಿತ್ಯಾದಾಕಾಶಃ ಕಿಂ ಪ್ರಕಾಶತೇ ॥ ೧೨ ॥**

**ಇತ್ಯೇವಂ ಬೌದ್ಧಸಿದ್ಧಾನ್ತೀ ಭಾಷಮಾಣೋ ನಿಷಿಧ್ಯತೇ ॥**

---

* 'ಮೋಕ್ಷಶ್ಚ' ಎಂಬ ಪಾಠಕ್ಕಿಂತ ಇದು ಉತ್ತಮ.

೯–೧೨ಕ್ಕೆ. (ಹೀಗೆ, ಐದೇ (ಬಗೆಯಾಗಿರುವ) ಸ್ಕಂಧಗಳಿಗಿಂತ ಬೇರೆಯಾಗಿರುವ ಯಾವ ಆತ್ಮನೂ ಇರುವದಿಲ್ಲ. ಜಗತ್ಸೃಷ್ಟ್ಯಾದಿ (ಗಳಿಗೆ) ಕರ್ತೃವಾದ ಈಶ್ವರನೂ ಇಲ್ಲ. ಜಗತ್ತು ತಾನೇ (ಹೀಗೆ) ಅತಿಶಯವುಳ್ಳದ್ದಾಗಿದೆ. ಕ್ಷಣಿಕವಾದ ಸ್ಕಂಧರೂಪವಾದ ಐದು ಪರಮಾಣುಗಳಿಂದಲೇ (ಅದು) ಉಂಟಾಗುತ್ತದೆ. ಹಿಂದುಹಿಂದಿನ ಕ್ಷಣದಿಂದ ಮುಂದುಮುಂದಿನ ಕ್ಷಣವು ಆಗುತ್ತದೆ. ಹಿಂದಿನ ಜ್ಞಾನದಿಂದಲೇ ಮುಂದಿನ ಜ್ಞಾನವು ಉಂಟಾಗುತ್ತದೆ. 'ಅದೇ ಇದು' ಎಂದು (ಆಗುವ) ಜ್ಞಾನವು 'ಅದೇ ಈ ಉರಿ' ಎಂಬಂತೆ ಭ್ರಾಂತಿಯೇ. ಇದೆ, ತೋರುತ್ತದೆ ಎಂಬ ಬುದ್ಧಿಯಿಂದ ಮರುಳಾದ (ಜನರಿಂದ) ಅನಾತ್ಮವಸ್ತುಗಳಲ್ಲಿ ಆತ್ಮನು ಕಲ್ಪಿತನಾಗಿರುತ್ತಾನೆ. ಹಾನೋಪಾದಾನಗಳು (ಬಿಡುವದು, ತೆಗೆದುಕೊಳ್ಳುವದು– ಎಂಬ ಯಾವ ಅರ್ಥಕ್ರಿಯೆಯೂ ಇಲ್ಲದ) ಆಕಾಶವು ತೋರುತ್ತದೆಯೇನು ? ಹೀಗೆಂದು ಹೇಳುತ್ತಿರುವ ಬೌದ್ಧಸಿದ್ಧಾಂತಿಯನ್ನು (ಇಲ್ಲಿ) ನಿಷೇಧಿಸಿರುತ್ತದೆ.

## ವಿವೇಚನೆ

ಕ್ಷಣಿಕವಾಗಿರುವ ಬಾಹ್ಯಾಧ್ಯಾತ್ಮಿಕಭಾವಗಳು ನಿರಾತ್ಮಕವೇ ಆಗಿದ್ದರೂ ಅವುಗಳಿಗೆ ಆಧಾರವಾಗಿರುವ ಜೀವಾತ್ಮನಾಗಲಿ ಕರ್ತೃವಾದ ಪರಮೇಶ್ವರನಾಗಲಿ ಇರಬೇಕಾದದ್ದಿಲ್ಲ. ಆದರೂ ಅಜ್ಞರು ಆತ್ಮನನ್ನು ಕಲ್ಪಿಸಿರುತ್ತಾರೆ– ಎಂಬುದು ಅನಾತ್ಮವಾದಿಯಾದ ಬೌದ್ಧನ ಸಿದ್ಧಾಂತ. ಅದನ್ನು ಅಲ್ಲಗಳೆಯುವದಕ್ಕೆ ಮುಂದಿನ ಶ್ಲೋಕವು ಬಂದಿದೆ ಎಂದು ಅಭಿಪ್ರಾಯ.

**ರಾಹುಗ್ರಸ್ತದಿವಾಕರೇನ್ದುಸದೃಶೋ ಮಾಯಾಸಮಾಚ್ಛಾದನಾದ್ ।**
**ಸನ್ಮಾತ್ರಃ ಕರಣೋಪಸಂಹರಣತೋ ಯೋಽಭೂತ್ ಸುಷುಪ್ತಃ ಪುಮಾನ್ ॥**
**ಪ್ರಾಗಸ್ವಾಪ್ಸಮಿತಿ ಪ್ರಬೋಧಸಮಯೇ ಯಃ ಪ್ರತ್ಯಭಿಜ್ಞಾಯತೇ ।**
**ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ ಶ್ರೀದಕ್ಷಿಣಾಮೂರ್ತಯೇ ॥**

**ಭಾವಾರ್ಥ :–** ಯಾವ ಪುರುಷನು ಮಾಯೆಯು ಮುಸಿಕಿರುವದರಿಂದ ರಾಹುವಿನ ಗ್ರಹಣದಿಂದ ಕೂಡಿದ ಸೂರ್ಯಚಂದ್ರರಂತೆ– ಇಂದ್ರಿಯಗಳ ಉಪಸಂಹಾರದಿಂದ ಬರಿಯ ಇರವಿನರೂಪದಲ್ಲಿ ಸುಷುಪ್ತ (ನಿದ್ರಿಸಿದವ)ನಾಗಿರುವನೋ, ಯಾವಾತನು ಎಚ್ಚರದ ಕಾಲದಲ್ಲಿ '(ಈ) ಮೊದಲು ನಿದ್ರಿಸಿದ್ದೆನು' ಎಂದು ಗುರುತಿಸುವನೋ ಆ ಗುರುಮೂರ್ತಿಯಾದ ಶ್ರೀ ದಕ್ಷಿಣಾಮೂರ್ತಿಗೆ ನಮಸ್ಕಾರ.

ಅಸ್ಯಾಯಮಾಶಯಃ—

**ಶೂನ್ಯಂ ಚೇಜ್ಜಗತೋ ಹೇತುರ್ಜಗದೇವ ನ ಸಿಧ್ಯತಿ ॥ ೧೩ ॥**
**ಘಟಃ ಶೂನ್ಯಃ ಪಟಃ ಶೂನ್ಯಃ ಇತಿ ಕೈಃ ಪ್ರತಿಪಾದ್ಯತೇ ।**
**ನೈವ ಭಾಸೇತ ಶೂನ್ಯಂ ಚೇಜ್ಜಗನ್ನರವಿಷಾಣವತ್ ॥ ೧೪ ॥**
**ವಸ್ತ್ವರ್ಥೀ ಕಿಮುಪಾದದ್ಯಾದ್ಭಾರಾರ್ತಃ ಕಿಂ ಪರಿತ್ಯಜೇತ್ ।**
**ಕೋ ವಿದಧ್ಯಾನ್ನಿಷಿಧ್ಯೇದ್ ವಾ ಶೂನ್ಯತ್ವಾತ್ ಸ್ವಸ್ಯ ಚಾತ್ಮನಃ ॥ ೧೫ ॥**
**ಅವಸೀದೇನ್ನಿರಾಕೂತಂ ತಸ್ಮಾತ್ ಸರ್ವಮಿದಂ ಜಗತ್ ॥ ೧೫½ ॥**

೧೩–೧೫½. ಇದರ ಅಭಿಪ್ರಾಯವು ಹೀಗಿದೆ: ಜಗತ್ತಿನ ಕಾರಣವು ಶೂನ್ಯವಾದರೆ ಜಗತ್ತೇ ಸಿದ್ಧಿಯಾಗುವದಿಲ್ಲ. 'ಗಡಿಗೆಯು ಶೂನ್ಯವು, ಬಟ್ಟೆಯು ಶೂನ್ಯವು'– ಎಂದು ಯಾರಿಂದ ಪ್ರತಿಪಾದಿಸಲ್ಪಡುತ್ತದೆ? ಜಗತ್ತು ಶೂನ್ಯವಾಗಿದ್ದರೆ ಮನುಷ್ಯನ ಕೊಂಬಿನಂತೆ ತೋರದೆಯೇ ಇರಬೇಕಾಗುವದು. (ಆಗ) ವಸ್ತುವು ತನಗೆ ಬೇಕೆನ್ನುವಾತನು ಏನನ್ನು ತೆಗೆದುಕೊಂಡಾನು? ಭಾರದಿಂದ ಸಂಕಟಪಡುವವನು ಏನನ್ನು ಬಿಟ್ಟಾನು? ತನ್ನ ಸ್ವರೂಪವೇ ಇಲ್ಲದ್ದರಿಂದ ಇದೆಯೆಂದು ಯಾವನು ಹೇಳಿಯಾನು? ಅಥವಾ ಇಲ್ಲವೆಂದಾನು? ಆದ್ದರಿಂದ ಯಾವ ಆಶಯವೂ ಇಲ್ಲದ ಜಗತ್ತು ನಾಶವಾಗಬೇಕಾದೀತು!

## ವಿವೇಚನೆ

ಇಲ್ಲಿ ಮಾಡಿರುವ ಆಕ್ಷೇಪಗಳೆಲ್ಲ 'ಜಗತ್ತು ಶೂನ್ಯದಿಂದ ಹುಟ್ಟಿದೆ' ಎಂಬುದೇ ಶೂನ್ಯವಾದಿಯ ಮತವೆಂದು ಇಟ್ಟುಕೊಂಡು ಮಾಡಿದವುಗಳಾಗಿವೆ. ಆದರೆ ಶೂನ್ಯವಾದಿಯ ಅಭಿಪ್ರಾಯವು ಹಾಗೇನೂ ಇರುವದಿಲ್ಲ. ಜಗತ್ತು ತೋರುವದಿಲ್ಲವೆಂದಾಗಲಿ, ವ್ಯವಹಾರವು ಯಾವದೂ ಇಲ್ಲವೇಇಲ್ಲವೆಂದಾಗಲಿ ಶೂನ್ಯವಾದಿಯು ಹೇಳುತ್ತಿಲ್ಲ; ಸ್ವಪ್ನಾದಿಗಳು ತೋರುತ್ತಿದ್ದರೂ ನಿಜವಾಗಿ ನಿಸ್ಸಾರವಾಗಿರುವಂತೆ, ವ್ಯವಹಾರದಲ್ಲಿ ಕಾಣುವ ಜಗತ್ತೆಲ್ಲವೂ ತರ್ಕದ ಹೊಡೆತಕ್ಕೆ ನಿಲ್ಲದೆ ಇರುವದರಿಂದ ನಿಃಸ್ವಭಾವ ಎಂದಿಷ್ಟೇ ಅವನು ಹೇಳುತ್ತಾನೆ. ಅದ್ವೈತಿವೇದಾಂತಿಯು ವ್ಯವಹಾರರೂಪದಲ್ಲಿ ಜಗತ್ತು ಚಿತ್ರವಿಚಿತ್ರವಾಗಿ ಕಾಣುತ್ತಿದ್ದರೂ ತಾನು ತೋರುತ್ತಿರುವ ರೂಪದಿಂದ ಮಿಥ್ಯೆಯೇ ಎಂದು ಹೇಳುತ್ತಾನಲ್ಲವೆ? ಅಷ್ಟುಮಾತ್ರದಿಂದ ವ್ಯವಹಾರವೇ ಇಲ್ಲವೆಂದೇನೂ ಆಗುವದಿಲ್ಲವಷ್ಟೆ? ಇದರಂತೆ ಬೌದ್ಧನೂ ಹೇಳುವದಕ್ಕೆ ಅಡ್ಡಿಯೇನೂ ಇಲ್ಲ. ಆದ್ದರಿಂದ ಹುಸಿತೋರಿಕೆ ಎಂದರೆ ಏತರ ತೋರಿಕೆ?– ಎಂಬ ಪ್ರಶ್ನೆಯು ಎದ್ದುಕೊಳ್ಳುವದು ಸ್ವಾಭಾವಿಕವಾಗಿದೆಯಾಗಿ

ಜಗತ್ತೆಲ್ಲ ತರ್ಕಪರಾಹತವಾಗಿದ್ದರೂ ಅದರ ಸಾರವಾಗಿ ಏನಾದರೊಂದು ಇರಲೇ ಬೇಕು – ಎಂಬ ತರ್ಕವನ್ನು ಅನುಭವಾನುಸಾರಿಗಳು ಹೊಡೆದುಹಾಕಲಾರರು. ಆದ್ದರಿಂದ "ಶೂನ್ಯವಾದವು ಈ ತರ್ಕಕ್ಕೆ ವಿರುದ್ಧ" ಎಂಬುದಿಷ್ಟೇ ಶೂನ್ಯವಾದದ ಖಂಡನೆಗೆ ಬೇಕಾದ ಯುಕ್ತಿ ಎಂದು ನಮಗೆ ತೋರುತ್ತದೆ.

## ಪಞ್ಚಸ್ಕನ್ಧೀವಾದದ ಖಂಡನೆ

**ಸ್ಕನ್ಧಾನಾಂ ಪರಮಾಣೂನಾಂ ನ ಸಙ್ಘಾತಯಿತಾಸ್ತಿ ಚೇತ್ ॥ ೧೬ ॥**
**ಸಙ್ಘಾತೋ ನ ವಿನಾ ಹೇತುಂ ಜಡಾ ಘಟಪಟಾದಯಃ ॥ ೧೬ಕ್ಕ ॥**

೧೬–೧೬ಕ್ಕ. ಸ್ಕಂಧಗಳನ್ನೂ ಪರಮಾಣುಗಳನ್ನೂ ಒಟ್ಟು ಕೂಡಿಸುವವನು ಇಲ್ಲವಾದರೆ ಕಾರಣವಿಲ್ಲದೆ ಸಂಘಾತವು ಇರುವ ದಿಲ್ಲ. ಘಟಪಟಾದಿಗಳು ಜಡ.

### ವಿವೇಚನೆ

ಅಣುಹೇತುಕವಾದ ಬಾಹ್ಯಪದಾರ್ಥಗಳೂ ಸ್ಕಂಧಹೇತುಕವಾದ ಆಧ್ಯಾತ್ಮಿಕ ಪದಾರ್ಥಗಳೂ ಸಂಹತವಾಗುವದಕ್ಕೆ ಚೇತನನಾದವನೊಬ್ಬನು ಬೇಕು. ಅಚೇತನ ವಾದ್ದರಿಂದ ಅವು ತಾವೇ ಒಂದರೊಡನೊಂದು ಕೂಡಿಕೊಳ್ಳಲಾರವು– ಎಂದರ್ಥ. ಸೂ.ಭಾ. ೨–೨–೧೮ರಿಂದ ೨೦ನೆಯ ಸೂತ್ರಗಳ ಭಾಷ್ಯವನ್ನು ನೋಡಿರಿ.

**ಮಹಾನುಭಾವೋ ಭೂಯಾಸಮಿತಿ ಭ್ರಾನ್ತಶ್ಚ ಮನ್ಯತೇ ॥ ೧೭ ॥**
**ಆತ್ಮಾಪಲಾಪಕೋ ಬೌದ್ಧಃ ಕಿಮರ್ಥಂ ಚರತಿ ವ್ರತಮ್ ॥ ೧೭ಕ್ಕ ॥**

೧೭–೧೭ಕ್ಕ. ಮಹಾನುಭಾವನಾಗುವೆನು ಎಂದು ಭ್ರಾಂತ ನಾದವನೂ ಎಂದುಕೊಳ್ಳುತ್ತಾನೆ. ಆತ್ಮನನ್ನು ಅಲ್ಲಗಳೆಯುವ ಬೌದ್ಧನು ಏತಕ್ಕೋಸ್ಕರ ವ್ರತವನ್ನು ಮಾಡುತ್ತಾನೆ?

### ವಿವೇಚನೆ

ನಾನು ಬುದ್ಧನಂತೆ ಮಹಾನುಭಾವನಾಗುವೆನು ಎಂದು ಚೈತ್ಯವಂದನಾದಿ ಗಳನ್ನು ಮಾಡುವವನನ್ನು ಭ್ರಾಂತನೆನ್ನಬೇಕಾಗಿದೆ. ಏಕೆಂದರೆ ಈ ಬೌದ್ಧರ ಮತದಲ್ಲಿ ಸ್ಥಾಯಿಯಾದ ಆತ್ಮನನ್ನೇ ಒಪ್ಪಿರುವದಿಲ್ಲ– ಎಂದು ಅಭಿಪ್ರಾಯ.

**ಪ್ರತ್ಯಭಿಜ್ಞಾ ಯದಿ ಭ್ರಾನ್ತಿರ್ಭೋಜನಾದಿ ಕಥಂ ಭವೇತ್ ॥ ೧೮ ॥**
**ಇಷ್ಟಸಾಧನಮೇವೈತದನ್ನಂ ಗತೇದಿನಾನ್ನವತ್ ।**
**ಇತಿ ನಿಶ್ಚಿತ್ಯ ಬಾಲೋಽಪಿ ಭೋಜನಾದೌ ಪ್ರವರ್ತತೇ ॥ ೧೯ ॥**

೧೭–೧೯. ಪ್ರತ್ಯಭಿಜ್ಞೆಯು ಭ್ರಾಂತಿಯೆನ್ನುವದಾದರೆ ಊಟವೇ ಮುಂತಾದದ್ದು ಹೇಗಾದೀತು? 'ಈ ಅನ್ನವು ಹಿಂದಿನ ದಿನದ ಅನ್ನದಂತೆ ಇಷ್ಟಸಾಧನವೇ' ಎಂದು ನಿಶ್ಚಯಿಸಿಕೊಂಡೇ ಹುಡುಗನುಕೂಡ ಊಟವೇ ಮುಂತಾದದ್ದರಲ್ಲಿ ತೊಡಗುತ್ತಾನೆ.

## ವಿವೇಚನೆ

ಲೋಕದಲ್ಲಿ ಜನರು ಹಿಂದೆ ನೋಡಿದ್ದರಂತೆಯೇ 'ಇದೂ ಅದೇ ಜಾತಿಗೆ ಸೇರಿದ್ದು'– ಎಂದು ಗೊತ್ತುಮಾಡಿಕೊಂಡಲ್ಲವೆ, ಆಯಾ ಕಾರ್ಯದಲ್ಲಿ ತೊಡಗುತ್ತಾರೆ? ಇದೇ ಪ್ರತ್ಯಭಿಜ್ಞೆಯ ಪ್ರಯೋಜನ. ಹಿಂದೆ ನೋಡಿದ್ದರಂತೆಯೇ ಇದೂ ಅನ್ನವೇ ಎಂಬ ಪ್ರತ್ಯಭಿಜ್ಞೆಯನ್ನು ನಂಬದೆಇದ್ದವರಿಗೆ ಊಟವೇ ಮುಂತಾದ ವ್ಯವಹಾರವುಕೂಡ ಸಾಗದೆಹೋಗಬೇಕಾಗಿತ್ತು. ಹಾಗೇನೂ ಲೋಕದಲ್ಲಿ ವ್ಯವಹಾರಲೋಪವಾಗಿರುವದಿಲ್ಲ. ಆದ್ದರಿಂದ ಪ್ರತ್ಯಭಿಜ್ಞೆಯನ್ನು ಪ್ರಮಾಣವೆಂದೇ ನಂಬಬೇಕು ಎಂದು ಅಭಿಪ್ರಾಯ.

**ಅವಕಾಶಪ್ರದಾತೃತ್ವಮಾಕಾಶಾರ್ಥಕ್ರಿಯಾ ಯಥಾ ।**
**ತಥೈವಾರ್ಥಕ್ರಿಯಾ ಪುಂಸಃ ಕರ್ತೃತ್ವಜ್ಞಾತೃತಾದಿಕಾ ॥ ೨೦ ॥**

**ಸುಷುಪ್ತಿಸಮಯೇಽಪ್ಯಾತ್ಮಾ ಸತ್ಯಜ್ಞಾನಸುಖಾತ್ಮಕಃ ।**
**ಸುಖಮಸ್ವಾಪ್ಸಮಿತ್ಯೇವಂ ಪ್ರತ್ಯಭಿಜ್ಞಾಯತೇ ಯತಃ ॥ ೨೧ ॥**

**ಪ್ರತ್ಯಭಿಜ್ಞಾಯತ ಇತಿ ಪ್ರಯೋಗಃ ಕರ್ಮಕರ್ತರಿ ।**
**ಆತ್ಮಾ ಸ್ವಯಂಪ್ರಕಾಶತ್ವಾಜ್ಜಾನಾತ್ಯಾತ್ಮಾನಮಾತ್ಮನಾ ॥ ೨೨ ॥**

೨೦–೨೨. ಅವಕಾಶವನ್ನು ಕೊಡುವದೆಂಬುದು ಹೇಗೆ ಆಕಾಶದ ಅರ್ಥಕ್ರಿಯೆಯೋ ಹಾಗೆಯೇ ಕರ್ತೃತ್ವ, ಜ್ಞಾತೃತ್ವ–ಮುಂತಾದದ್ದು ಪುರುಷನ ಅರ್ಥಕ್ರಿಯೆ. ಗಾಢನಿದ್ರೆಯ ಕಾಲದಲ್ಲಿಯೂ ಆತ್ಮನು ಸತ್ಯಜ್ಞಾನಾನಂದಸ್ವರೂಪನಾಗಿರುತ್ತಾನೆ. ಏಕೆಂದರೆ 'ಸುಖವಾಗಿ ನಿದ್ರಿಸಿದೆನು' ಎಂದು (ಎಚ್ಚತ್ತಾಗ) ಪ್ರತ್ಯಭಿಜ್ಞಾತ (ಗುರುತಿಸಲ್ಪಟ್ಟವ)ನಾಗುತ್ತಿರುತ್ತಾನೆ. 'ಪ್ರತ್ಯಭಿಜ್ಞಾಯತೇ' ಎಂದು (ಮೂಲದಲ್ಲಿ) ಮಾಡಿರುವ ಪ್ರಯೋಗವು ಕರ್ಮಕರ್ತರಿಪ್ರಯೋಗವು; (ಏಕೆಂದರೆ) ಆತ್ಮನು ತಾನೇ ತನ್ನನ್ನು (ಹಾಗೆ) ಗುರುತಿಸಿಕೊಳ್ಳುತ್ತಾನೆ.

## ವಿವೇಚನೆ

ಇಲ್ಲಿ ಶೂನ್ಯವಾದಿಗಳವರೆಗಿನ ವಾದಿಗಳು ಕಲ್ಪಿಸಿರುವ ದೇಹವೇ ಮುಂತಾದದ್ದು ಯಾವದೂ ಆತ್ಮಸ್ವರೂಪವಲ್ಲ; ಇವುಗಳಲ್ಲಿ ಯಾವದೊಂದೂ ಆತ್ಮನ

ಸ್ವಭಾವವಲ್ಲವೆಂಬುದಕ್ಕೆ– ಇವುಗಳಲ್ಲಿ ಯಾವದೊಂದರ ಅನುಭವವೂ ಸುಷುಪ್ತಿಯಲ್ಲಿಲ್ಲದಿರುವದೂ ಎಚ್ಚತ್ತಬಳಿಕ ಇವುಗಳಲ್ಲಿ ಯಾವದೊಂದರ ಸಂಬಂಧವೂ ಇಲ್ಲದೆ 'ಸುಖವಾಗಿ ನಿದ್ರಿಸಿದೆನು' ಎಂದು ಸುಖಸ್ವರೂಪವನ್ನು ಮಾತ್ರ ತನ್ನದೆಂದು ಗುರುತಿಸಿ ಅರಿತುಕೊಳ್ಳುವದೂ– ಕಾರಣವಾಗಿದೆ. ಆತ್ಮನು ಸಚ್ಚಿದಾನಂದಸ್ವರೂಪನೇ ಎಂಬುದಕ್ಕೆ ಇದೇ ಪ್ರಮಾಣವು ಎಂಬುದು ಈ ಶ್ಲೋಕಗಳ ಒಟ್ಟರ್ಥ.

ಇಲ್ಲಿ ಆತ್ಮನ ಜ್ಞಾತೃತ್ವ, ಕರ್ತೃತ್ವ– ಎಂಬ ಅರ್ಥಕ್ರಿಯೆಗಳನ್ನು ಆತ್ಮನಿಗೆ ಏತಕ್ಕೆ ಒಪ್ಪಿರುತ್ತಾರೆಂಬುದು ತಿಳಿಯುವಹಾಗಿಲ್ಲ. ಅರ್ಥಕ್ರಿಯಾಕಾರಿತ್ವವೇ ವಸ್ತುವು ನಿಜವಾಗಿದೆ ಎಂಬುದಕ್ಕೆ ಪ್ರಮಾಣವೆಂದು ನಂಬುವದು ನೈಯಾಯಿಕರೇ ಮೊದಲಾದವರ ಅಭ್ಯುಪಗಮಗಳೇ ಹೊರತು ವೇದಾಂತಿಗಳದ್ದಲ್ಲ.

'ಸಃ ಪ್ರತ್ಯಭಿಜ್ಞಾಯತೇ' (ಯಾವನು ಗುರುತಿಸಲ್ಪಡುತ್ತಾನೋ) ಎಂಬ ಮೂಲಗ್ರಂಥದ ಪ್ರಯೋಗವು ಕರ್ಮಕರ್ತರಿಪ್ರಯೋಗವೆಂದೂ 'ಪ್ರತ್ಯಭಿಜ್ಞಾನವು' (ತನ್ನನ್ನು ತಾನೇ ಗುರುತಿಸಿ ಅರಿಯುವದು) ಆತ್ಮನ ಅರ್ಥಕ್ರಿಯೆಯೆಂದೂ ಹೇಳುವದು ಆತ್ಮನು ಸ್ವಯಂಪ್ರಕಾಶನೆಂಬ ವೇದಾಂತಸಿದ್ಧಾಂತಕ್ಕೆ ವಿರುದ್ಧವೂ ಆಗಿದೆ. 'ವಿಜ್ಞಾನವು ಸ್ವಯಂಪ್ರಕಾಶವು. ಎಂದರೆ ಅದು ತನ್ನನ್ನು ತಾನೇ ಬೆಳಗುವದು' ಎಂಬುದು ವಿಜ್ಞಾನವಾದಿಗಳಾದ ಬೌದ್ಧರ ಮತ. ವೇದಾಂತಿಗಳ ಮತದಂತೆ 'ಆತ್ಮನು ಸ್ವಯಂಪ್ರಕಾಶನು' ಎಂದರೆ ಕೂಟಸ್ಥನಾದ (ನಿರ್ವಿಕಾರನಾದ) ಚೈತನ್ಯಸ್ವರೂಪನಾಗಿರುತ್ತಾನೆ ಎಂದಿಷ್ಟೇ ಅರ್ಥ. ಸೂತ್ರಭಾಷ್ಯದಲ್ಲಿ ವಿಜ್ಞಾನವಾದವನ್ನು ಖಂಡಿಸುವ ಸಂದರ್ಭದಲ್ಲಿ (ಸೂ.ಭಾ. ೨–೨–೨೮ರಲ್ಲಿ) ಭಾಷ್ಯಕಾರರು ಬರೆದಿರುವದನ್ನು ಜಿಜ್ಞಾಸುಗಳು ಮನದಂದುಕೊಳ್ಳುವದರಿಂದ ಲಾಭವುಂಟು.

**ಸುಷುಪ್ತೌ ಮಾಯಯಾ ಮೂಢೋ ಜಡೋಽನ್ಧ ಇತಿ ಲಕ್ಷ್ಯತೇ ।**
**ಅಪ್ರಕಾಶತಯಾ ಭಾತಿ ಸ್ವಪ್ರಕಾಶತಯಾಪಿ ವಾ* । ॥ ೨೪ ॥**
**ಜಡಾತ್ಮನಿ ಚ ದೇಹಾದೌ ಸಾಕ್ಷಾದೀಶೋ ವಿವಿಚ್ಯತೇ ॥ ೨೪½ ॥**

೨೪–೨೪½. ಸುಷುಪ್ತಿಯಲ್ಲಿ ಮಾಯೆಯಿಂದ ಕುರುಡನಂತೆಯೂ ಜಡನಂತೆಯೂ ಮೂಢನಾಗಿ ಕಾಣುತ್ತಾನೆ. ಅಪ್ರಕಾಶನಾಗಿ ಅಥವಾ ಸ್ವಪ್ರಕಾಶನಾಗಿ ಕಾಣುತ್ತಾನೆ. ಜಡರೂಪವಾದ ದೇಹಾದಿಗಳಿಗಿಂತ ಈಶ್ವರನು ನೇರಾಗಿ ವಿವಿಕ್ತನಾಗಿರುತ್ತಾನೆ.

**ವಿವೇಚನೆ**

ಇಲ್ಲಿ ಶ್ಲೋಕದ ಅರ್ಥವನ್ನು ಸ್ವಲ್ಪ ಸೂಚಿಸಿದೆಯೇ ಹೊರತು ಮೂಲದಲ್ಲಿರುವ 'ರಾಹುಗ್ರಸ್ತ' ಮುಂತಾದ ಶ್ಲೋಕಾರ್ಥದ ಅಕ್ಷರಾರ್ಥವನ್ನೇನೂ ವಿವರಿಸಿಲ್ಲ.

---

* 'ಸ್ವಪ್ರಕಾಶತಯಾಪಿ ಚ' ಎಂಬ ಪಾಠಕ್ಕಿಂತ ಇದು ಮೇಲು.

ಶ್ಲೋಕದ ಅಕ್ಷರಾರ್ಥವನ್ನು ಮನಸ್ಸಿಗೆ ತಂದುಕೊಂಡರೆ ಈ ಅಭಿಪ್ರಾಯವು ಹೊರಡುವದು : ಸೂರ್ಯನಾಗಲಿ ಚಂದ್ರನಾಗಲಿ ಲೋಕದ ದೃಷ್ಟಿಯಿಂದ ರಾಹು ಗ್ರಸ್ತರಾಗಿರುವಾಗ ಸೂರ್ಯನನ್ನು ಅಥವಾ ಚಂದ್ರನನ್ನು ನೆರಳು ಮುಸುಕಿಕೊಂಡಿರುವಂತೆ ಕಾಣುತ್ತಿದ್ದರೂ ಆ ನೆರಳು ಸೂರ್ಯನ ಅಥವಾ ಚಂದ್ರನ ಬೆಳಕಿನಿಂದ ಸ್ಫುಟವಾಗಿ ಕಾಣಿಸುತ್ತಿರುತ್ತದೆ. ಇದರಂತೆ ಒಬ್ಬನು ಗಾಢನಿದ್ರೆಯಲ್ಲಿರುವಾಗ ಕರಣಗಳು ಕೆಲಸಮಾಡದೆ ಇರುವದರಿಂದ ವಿಶೇಷಜ್ಞಾನವಿರುವದಿಲ್ಲವೆಂಬ ಕಾರಣದಿಂದ ಅಚೇತನಪದಾರ್ಥಗಳಂತೆಯೂ ಕುರುಡರಂತೆಯೂ ಸುಪ್ತಪುರುಷನು ವಿಷಯಜ್ಞಾನವಿಲ್ಲದವನಾಗಿರುತ್ತಾನೆ. ಆದ್ದರಿಂದ ಅವನು ಆಗ 'ಮೂಢನಾಗಿರುತ್ತಾನೆ' ಎಂದು ಹೇಳಬಹುದಾಗುತ್ತದೆ. ಆದರೆ ಆ ಅಜ್ಞಾನವು- ಇಂದ್ರಿಯಗಳ ಸಂಬಂಧದಿಂದ ಆಗುವ ವಿಶೇಷಜ್ಞಾನವಿಲ್ಲ – ಎಂಬಿಷ್ಟನ್ನೇ ತಿಳಿಯಿಸುತ್ತದೆಯೇ ಹೊರತು ನಿದ್ರೆಯಲ್ಲಿ ಆತ್ಮನಿಗೆ ಚೈತನ್ಯರೂಪವಾದ ಜ್ಞಾನವೂ ಇಲ್ಲವೆಂದೇನೂ ತಿಳಿಯಿಸುವದಿಲ್ಲ ; ಏಕೆಂದರೆ 'ಆಗ ನನಗೆ ಏನೂ ತಿಳಿಯಬರಲಿಲ್ಲ' ಎಂದು ಅಜ್ಞಾನದ ಅನುಭವವಾದದ್ದು ಎಚ್ಚರದಲ್ಲಿ ಸ್ಫುಟವಾಗಿ ಗೊತ್ತಾಗುತ್ತದೆ. ಇದರಿಂದ ಚೇತನಾಚೇತನಗಳನ್ನೆಲ್ಲ ಬೆಳಗುವ ಚೈತನ್ಯವು ಆತ್ಮನಿಗೆ ಇದೆ ಎಂದಾಗುತ್ತದೆ. ಹೀಗಿರುವದರಿಂದ 'ಈ ಪ್ರತ್ಯಭಿಜ್ಞೆಯಿಂದ ನಾನು ಆಗ ಏನನ್ನೂ ಅರಿಯದೆ ಇದ್ದೆನು ; ಅದೇ ಅನುಭವವು ಈಗಲೂ ನನ್ನ ಸ್ವರೂಪವಾಗಿದೆ' ಎಂದು ನಿರ್ಣಯವಾಗುತ್ತದೆ. ಇದನ್ನೇ 'ಅಪ್ರಕಾಶತಯಾ ಭಾತಿ, ಸ್ವಪ್ರಕಾಶತಯಾಪಿ ವಾ' ಅಜ್ಞರ ದೃಷ್ಟಿಯಿಂದ ಅಲ್ಲಿ ಸುಷುಪ್ತಪುರುಷನ ರೂಪದಿಂದ ಅಪ್ರಕಾಶವಾಗಿ ಅಥವಾ ಆತ್ಮನ ಸ್ವರೂಪವನ್ನು ನೇರಾಗಿ ವಿವೇಚಿಸಬಲ್ಲವರ ದೃಷ್ಟಿಯಿಂದ ವಿಶೇಷಜ್ಞಾನ, ವಿಶೇಷಜ್ಞಾನಾಭಾವ- ಎರಡನ್ನೂ ಬೆಳಗುವ ಅನುಭವರೂಪದಿಂದ ಸ್ವಪ್ರಕಾಶವಾಗಿ ತೋರುತ್ತಿರುತ್ತಾನೆ ಎಂಬ ವಾಕ್ಯದಿಂದ ಮಾನಸೋಲ್ಲಾಸಕಾರರು ಹೇಳಿರುತ್ತಾರೆ.

**ಏಷೈವ ಮೋಹಿನೀ ನಾಮ ಮಾಯಾಶಕ್ತಿರ್ಮಹೇಶಿತುಃ । ॥ ೩೪ ॥**
**ಮೋಹಾಪೋಹಃ ಪ್ರಮಾತೄಣಾಂ ಮೋಕ್ಷ ಇತ್ಯಭಿಧೀಯತೇ ॥ ೩೪ತ್ತ ॥**

೩೪–೩೪ತ್ತ. ಇದನ್ನೇ ಮಹೇಶ್ವರನ ಮೋಹಿನಿ ಎಂಬ ಮಾಯಾಶಕ್ತಿ, ಪ್ರಮಾತೃಗಳ ಮೋಹವು ತೊಲಗುವದೇ ಮೋಕ್ಷ – ಎಂದು ಕರೆಯುತ್ತಾರೆ.

## ವಿವೇಚನೆ

'ಇದೇ ಈಶ್ವರನ ಮಾಯಾಶಕ್ತಿ' ಎಂಬುದು ಹಿಂದಿನ ಶ್ಲೋಕದಲ್ಲಿರುವ 'ಮಾಯಾಶಕ್ತಿವಿಲಾಸಕಲ್ಪಿತಮಹಾವ್ಯಾಮೋಹಸಂಹಾರಿಣೇ' ಎಂಬ ಶ್ಲೋಕಪಾದದ ಪರಾಮರ್ಶವೆಂಬುದು ಸ್ಪಷ್ಟ. ಮಾನಸೋಲ್ಲಾಸದಲ್ಲಿ ಹಾಗೆಂಬುದರ ಸೂಚನೆಯೇನೂ ಇಲ್ಲ. ಮೋಹಿನಿ- ಎಂಬುದು ಪರಮೇಶ್ವರನ ಮಾಯಾಶಕ್ತಿ

ಯಾವರೂ ಜ್ಞಾನದಿಂದ ಹೋಗುತ್ತದೆ– ಎಂದದ್ದರಿಂದ ಈಶ್ವರನಿಗೆ ಮಾಯಾಶಕ್ತಿ ಇದೆ– ಎಂಬಿದು ವ್ಯವಹಾರಮಾತ್ರವೆಂದು ಹೇಳಿದಂತಾಯಿತು. ಟೀಠಿಕೆಯನ್ನು ನೋಡಿ.

ಹಿಂದೆ ಪರಾಮರ್ಶಿಸಿರುವ ದೇಹಾದ್ಯಾತ್ಮವಾದಗಳೂ ಸುಷುಪ್ತಿಯ ವಿಷಯದಲ್ಲಿ ಆತ್ಮಸ್ವರೂಪದ ವಿವೇಕವಿಲ್ಲದವರು 'ಅಲ್ಲಿ ಏನೂ ಇರುವದಿಲ್ಲ, ಆತ್ಮನಿಗೆ ಅಲ್ಲಿ ಅರಿವೇ ಇರುವದಿಲ್ಲ' ಎನ್ನುವ ವಾದವೂ ಮಾಯಾಕಲ್ಪಿತವ್ಯಾಮೋಹವೇ ; ನಿಜವಾಗಿ ನೋಡಿದರೆ ಆತ್ಮನು ಕೂಟಸ್ಥನಿತ್ಯಸ್ವಪ್ರಕಾಶವಾದ ಚೈತನ್ಯಸ್ವರೂಪದಲ್ಲಿ ಎಲ್ಲಿಯೂ ಯಾವ ಮಾರ್ಪಾಡೂ ಆಗಿರುವದಿಲ್ಲವೆಂಬುದೇ ವಸ್ತುಸ್ಥಿತಿ ಎಂಬುದು ಗ್ರಂಥಕರ್ತರ ಆಶಯ. ಈ ಅಭಿಪ್ರಾಯವನ್ನು ಮುಂದಿನ ಎರಡು ಶ್ಲೋಕಗಳಲ್ಲಿ ಯುಕ್ತಿಯಿಂದ ಸ್ಪಷ್ಟೀಕರಿಸಿದೆ. ಆತ್ಮತತ್ತ್ವದ ವಿವೇಕದಿಂದ ಮೋಕ್ಷವೆಂಬುದನ್ನು ಇನ್ನುಮುಂದೆ ಸ್ಫುಟಗೊಳಿಸಲಾಗುವದು.

### ಆತ್ಮನ ವಿವಿಕ್ತವಾದ ಕೂಟಸ್ಥಚೈತನ್ಯಸ್ವರೂಪ

**ಅವಸ್ಥಾತ್ರಯನಿರ್ಮುಕ್ತೋ ದೋಷಾದಿಭಿರನಾವಿಲಃ ॥ ೨೫ ॥**
**ಇಷೀಕೇ ಇವ ಸನ್ಮಾತ್ರೋ ನ್ಯಗ್ರೋಧಕಣಿಕೋಪಮಃ ।**
**ಬಾಹ್ಯಬಾಹ್ಯದಲೋನ್ಮುಕ್ತಕದಲೀಕನ್ದಸನ್ನಿಭಃ ॥ ೨೬ ॥**
**ನಿರಂಶೋ ನಿರ್ವಿಕಾರಶ್ಚ ನಿರಾಭಾಸೋ ನಿರಞ್ಜನಃ ।**
**ಪುರುಷಃ ಕೇವಲಃ ಪೂರ್ಣಃ ಪ್ರೋಚ್ಯತೇ ಪರಮೇಶ್ವರಃ ॥ ೨೭ ॥**
**ವಾಚೋ ಯತ್ರ ನಿವರ್ತನ್ತೇ ಮನೋ ಯತ್ರ ವಿಲೀಯತೇ ।**
**ಏಕೀಭವನ್ತಿ ಯತ್ರೈವ ಭೂತಾನಿ ಭುವನಾನಿ ಚ ॥ ೨೮ ॥**
**ಸಮಸ್ತಾನಿ ಚ ತತ್ತ್ವಾನಿ ಸಮುದ್ರೇ ಸಿನ್ಧವೋ ಯಥಾ ।**
**ಕಃ ಶೋಕಸ್ತತ್ರ ಕೋ ಮೋಹ ಏಕತ್ವಮನುಪಶ್ಯತಃ ॥ ೨೯ ॥**
**ವಾಚ್ಯವಾಚಕರೂಪತ್ವಾತ್ ಸವಿಕಲ್ಪೋಽಪಿ ಸನ್ನಯಮ್ ।**
**ದೇಹಾದೀನಾಂ ವ್ಯಪೋಹೇನ ಸಂಭವೇನ್ನಿರ್ವಿಕಲ್ಪಕಃ ॥ ೩೦ ॥**
**ಅಸನ್ನೇವ ಭವೇದ್ ವಿದ್ವಾನಸದ್ಬ್ರಹ್ಮೇತಿ ವೇದ ಚೇತ್ ।**
**ಅಸ್ತಿ ಬ್ರಹ್ಮೇತಿ ಚೇದ್ ವೇದ ಸನ್ತಮೇನಂ ತತೋ ವಿದುಃ ॥ ೩೧ ॥**

೨೫–೩೧. ಅವಸ್ಥಾತ್ರಯವಿಲ್ಲದವನೂ (ಮಾಂ.೭), ದೋಷಾದಿಗಳಿಂದಾದ ಕಲ್ಮಷವಿಲ್ಲದವನೂ (ಈ. ೮), ನೊದೆಹುಲ್ಲಿನ ದಂಟಿನಂತೆ ಸನ್ಮಾತ್ರನೂ (ಕ. ೬–೧೮), ಆಲದ(ಬೀಜದ) ಕಣದಂತಿರುವವನೂ (ಛಾಂ. ೬–೬–೩), ಹೊರಹೊರಗಿನ ಪಟ್ಟೆಗಳನ್ನು ಬಿಟ್ಟ ಬಾಳೆಯ (ಕಂಬದ) ದಂಟಿನಂತೆ ಇರುವವನೂ, ಅಂಶಗಳಿಲ್ಲದವನೂ (ಶ್ವೇ.೬–

೧೯), ಮತ್ತು ನಿರ್ವಿಕಾರನೂ (ಕಾ. ೨-೧೮), ಆಭಾಸರಹಿತನೂ, ನಿರಂಜನನೂ (ಶ್ವೇ. ೬-೧೯), ಪುರುಷನೂ (ಮುಂ. ೨-೧-೧೦), ಕೇವಲನೂ (ಶ್ವೇ. ೬-೧೧), ಪೂರ್ಣನೂ ಆದ ಪುರುಷನು ಪರಮೇಶ್ವರನೆನಿಸುತ್ತಾನೆ. ಎಲ್ಲಿಂದ ವಾಕ್ಕುಗಳು ಹಿಂತಿರುಗುವವೋ (ತೈ. ೨-೯), ಮನಸ್ಸು ಎಲ್ಲಿ ಲಯವಾಗುವದೋ (ಪ್ರ. ೪-೮), ಎಲ್ಲಿ ಭೂತಗಳೂ ಭುವನಗಳೂ ಸಮಸ್ತತತ್ತ್ವಗಳೂ ನದಿಗಳು ಸಮುದ್ರದಲ್ಲಿ (ಬೆರೆಯುವಂತೆ ಬೆರೆತು) ಒಂದಾಗುವವೋ (ಪ್ರ.೬-೫) ಒಂದೆಂಬುದನ್ನು ಕಂಡುಕೊಂಡವನಿಗೆ ಅಲ್ಲಿ ಶೋಕವೆಂಬುದು ಯಾವದು, ಮೋಹವೆಂಬುದು ಯಾವದು ? (ಈ. ೭).

ಈ (ಆತ್ಮನು) ವಾಚ್ಯವಾಚಕರೂಪನಾಗಿರುವದರಿಂದ ಸವಿಕಲ್ಪನಾಗಿದ್ದರೂ ದೇಹಾದಿಗಳನ್ನು ಅಲ್ಲಗಳೆಯುವದರಿಂದ ನಿರ್ವಿಕಲ್ಪನೇ* ಆಗುವನು. 'ಬ್ರಹ್ಮವು ಇಲ್ಲವೆಂದು ತಿಳಿಯುವನಾದರೆ (ಹಾಗೆ) ತಿಳಿದವನೂ ಅಸದ್ರೂಪನೇ ಆಗುವನು. ಬ್ರಹ್ಮವು ಇದೆ ಎಂದು ಅರಿತುಕೊಂಡನಾದರೆ ಅದರಿಂದ ಇವನನ್ನು ಸದ್ರೂಪನೆಂದು (ಬಲ್ಲವರು) ತಿಳಿಯುವರು' (ತೈ. ೨-೬).

### ವಿವೇಚನೆ

ಇಲ್ಲಿ ಆತ್ಮಾನಾತ್ಮವಿವೇಕವನ್ನು ಮಾಡಿಕೊಳ್ಳಬಲ್ಲವನಿಗೆ ಆತ್ಮನು ಸ್ವಯಂಪ್ರಕಾಶನಾಗಿ ನಿತ್ಯಕೂಟಸ್ಥಚೈತನ್ಯಸ್ವರೂಪನಾಗಿ ಅನಾತ್ಮದ ಸಂಪರ್ಕವಿಲ್ಲದೆ ಹೇಗೆ ಅರಿಯಬರುತ್ತಾನೆಂಬುದನ್ನು ಶ್ರುತಿಗಳ ಆಧಾರದಿಂದ ಅನುಭವಾನುಸಾರವಾಗಿ ತೋರಿಸಿರುತ್ತದೆ. ಆತ್ಮನಿಗೆ ಅವಸ್ಥೆಗಳೇ ಇಲ್ಲವೆಂಬುದು ಹೇಗೆಂಬುದನ್ನು ಇಲ್ಲಿ ವಿವರಿಸಿರುವದಿಲ್ಲ.

**ಇತಿ ಶ್ರೀ ದಕ್ಷಿಣಾಮೂರ್ತಿಸ್ತೋತ್ರಾರ್ಥಪ್ರತಿಪಾದಕೇ ।**
**ಪ್ರಬನ್ಧೇ ಮಾನಸೋಲ್ಲಾಸೇ ಷಷ್ಠೋಲ್ಲಾಸಸ್ಯ ಸಙ್ಗ್ರಹಃ ॥ ೬೨ ॥**

೬೨. ಇಂತು ಶ್ರೀದಕ್ಷಿಣಾಮೂರ್ತಿಸ್ತೋತ್ರದ ಅರ್ಥವನ್ನು ಪ್ರತಿಪಾದಿಸುವ ಪ್ರಬಂಧವಾದ ಮಾನಸೋಲ್ಲಾಸದಲ್ಲಿ ಆರನೆಯ ಉಲ್ಲಾಸದ ಸಂಗ್ರಹವು ಮುಗಿಯಿತು.

---

* 'ನಿರ್ವಿಕಲ್ಪಃ' ಎಂದು ತಿದ್ದಿಕೊಂಡ ಪಾಠಕ್ಕೆ ಇದು ಅರ್ಥ ; 'ನಿರ್ವಿಕಲ್ಪಕಮ್' ಎಂಬ ಪಾಠಕ್ಕೆ ನಿರ್ವಿಕಲ್ಪಕವಾದ ಬ್ರಹ್ಮವೇ ಆಗಿರುತ್ತಾನೆ_ ಎಂದರ್ಥ.

# ಸರ್ವಾವಸ್ಥೆಗಳಲ್ಲಿಯೂ ಇದ್ದುಕೊಂಡಿರುವ ಆತ್ಮ

## ಅವತರಣಿಕೆ

**ಪ್ರತ್ಯಭಿಜ್ಞಾಬಲಾದಾತ್ಮಾ ಸ್ಥಾಯೀ ನಿರ್ಧಾರ್ಯತೇ ಯದಿ ।**
**ಕಾ ನಾಮ ಪ್ರತ್ಯಭಿಜ್ಞೈಷಾ ಕಿಂ ವಾ ತಸ್ಯಾಃ ಪ್ರಯೋಜನಮ್ ॥ ೧ ॥**
**ಪ್ರತ್ಯಕ್ಷಾದಿಪ್ರಮಾಣೇಷು ಪ್ರತ್ಯಭಿಜ್ಞಾ ನ ಪಠ್ಯತೇ ।**
**ಕಥಂ ತಸ್ಯಾಃ ಪ್ರಮಾಣತ್ವಮಿತಿ ಪೃಚ್ಛನ್ ಪ್ರಬೋಧ್ಯತೇ ॥ ೨ ॥**

೧-೨. ಪ್ರತ್ಯಭಿಜ್ಞೆಯ ಬಲದಿಂದ ಆತ್ಮನು ಸ್ಥಿರನಾಗಿರುತ್ತಾನೆಂದು ಗೊತ್ತುಪಡಿಸುವದಾಗಿದ್ದರೆ, ಈ ಪ್ರತ್ಯಭಿಜ್ಞೆ ಎಂಬುದು ಯಾವದು ? ಅದರಿಂದಾಗುವ ಪ್ರಯೋಜನವಾದರೂ ಏನು ? ಪ್ರತ್ಯಕ್ಷವೇ ಮುಂತಾದ ಪ್ರಮಾಣಗಳೊಳಗೆ ಪ್ರತ್ಯಭಿಜ್ಞೆಯನ್ನು ಹೇಳಿಲ್ಲ ; (ಹೀಗಿರುವಲ್ಲಿ) ಅದಕ್ಕೆ ಪ್ರಮಾಣತ್ವವು ಹೇಗೆ (ಬಂತು ?- ಎಂದು ಕೇಳುವವನಿಗೆ (ಇಲ್ಲಿ ಅದನ್ನು) ತಿಳಿಯಿಸಲಾಗುವದು.

## ವಿವೇಚನೆ

ಆತ್ಮನು ಕ್ಷಣಿಕರೂಪವಾದ ವಿಜ್ಞಾನವೇ, ಅಥವಾ ಶೂನ್ಯವೇ - ಎಂಬವರಿಗೆ ಸ್ಥಾಯಿಯಾಗಿ ಆತ್ಮನೆಂಬ ತತ್ತ್ವವೊಂದು ಇದೆ- ಎಂಬುದೇ ಒಪ್ಪಾಗುವದಿಲ್ಲ ; ಆದ್ದರಿಂದ ಅದು ಪ್ರಮಾಣವು ಹೇಗೆ ?- ಎಂದು ಅವರು ಕೇಳುವದು ಯುಕ್ತವೇ ಆಗಿದೆ. ಇವಲ್ಲದೆ ಪ್ರಮಾಣಗಳನ್ನು ಒಪ್ಪುವವರು, ಪ್ರತ್ಯಕ್ಷಾನುಮಾನಗಳು, ಪ್ರತ್ಯಕ್ಷಾನುಮಾನೋಪಮಾನಶಬ್ದಗಳು - ಎಂದು ಮುಂತಾಗಿ ಪ್ರಮಾಣಗಳನ್ನು ಒಪ್ಪಿರುವದು ಕಂಡುಬಂದಿದೆ ಇವರಲ್ಲಿ ಯಾರೂ ಪ್ರತ್ಯಭಿಜ್ಞಾನವನ್ನು ಪ್ರಮಾಣವೆಂದು ಒಪ್ಪಿಲ್ಲವಲ್ಲ ! ಹೀಗಿರುವಲ್ಲಿ ಪ್ರತ್ಯಭಿಜ್ಞೆಯಿಂದ ಸ್ಥಿರನಾದ ಆತ್ಮನನ್ನು ಸ್ಥಾಪಿಸುವದು ಹೇಗೆ ಸರಿ ?- ಎಂಬುದು ಇಲ್ಲಿ ಆಕ್ಷೇಪ.

ಇಲ್ಲಿ ಒಂದು ವಿಚಾರವನ್ನು ಮನಸ್ಸಿಗೆ ತಂದುಕೊಳ್ಳುವದು ಅವಶ್ಯ. ಆತ್ಮನು ಪ್ರಮಾಣಸಿದ್ಧನೆಂದಾಗಲಿ, ಪ್ರತ್ಯಭಿಜ್ಞೆ- ಎಂಬುದು ಒಂದು ಪ್ರಮಾಣವೆಂದಾಗಲಿ, ಭಾಷ್ಯಕಾರರು ಎಲ್ಲಿಯೂ ಹೇಳಿರುವದಿಲ್ಲ. ಆತ್ಮನು ಪ್ರಮಾಣವ್ಯವಹಾರಕ್ಕಿಂತ ಮೊದಲೇ ಸ್ವಯಂಸಿದ್ಧನಾಗಿರುತ್ತಾನೆ (ಸೂ ಭಾ. ೨-೩-೭) ಎಂದು ಭಾಷ್ಯಕಾರರು ಅನುಭವವನ್ನೇ ಆತ್ಮಸಿದ್ಧಿಗೆ ಆಧಾರವಾಗಿ ಉದಾಹರಿಸಿರುತ್ತಾರೆ. ತಾರ್ಕಿಕರಲ್ಲಿ

ಯಾದರೂ 'ಪ್ರತ್ಯಭಿಜ್ಞೆಯು ಪ್ರಮಾಣ, ಅದರಿಂದ ಆತ್ಮಸಿದ್ಧಿಯಾಗುತ್ತದೆ' ಎಂದು ಎಲ್ಲಿಯೂ ಹೇಳಿರುವಂತೆ ಕಾಣುವದಿಲ್ಲ. ಹೀಗಿರುವಲ್ಲಿ ಇಲ್ಲಿ ಆತ್ಮಸಿದ್ಧಿಗೆ ಪ್ರತ್ಯಭಿಜ್ಞೆಯೇ ಪ್ರಮಾಣವೆಂದು ಏತಕ್ಕೆ ಹೇಳಿದ್ದಾರೆಂಬುದು ಗೊತ್ತಾಗುವಂತಿಲ್ಲ. ಈ ವಿಷಯಕ್ಕೆ ಪೀಠಿಕೆಯನ್ನು ನೋಡಿರಿ.

ಬಾಲ್ಯಾದಿಷ್ವಪಿ ಜಾಗ್ರದಾದಿಷು ತಥಾ ಸರ್ವಾಸ್ವವಸ್ಥಾಸ್ವಪಿ ।
ವ್ಯಾವೃತ್ತಾಸ್ವನುವರ್ತಮಾನಮಹಮಿತ್ಯನ್ತಃ ಸ್ಫುರನ್ತಂ ಸದಾ ॥
ಸ್ವಾತ್ಮಾನಂ ಪ್ರಕಟೀಕರೋತಿ ಭಜತಾಂ ಯೋ ಮುದ್ರಯಾ ಭದ್ರಯಾ ।
ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ ಶ್ರೀದಕ್ಷಿಣಾಮೂರ್ತಯೇ　　॥ ೭ ॥

೭. ಬಾಲ್ಯವೇ ಮುಂತಾದ ಮತ್ತು ಜಾಗ್ರತ್ತೇ (ಎಚ್ಚರವೇ) ಮುಂತಾದ ಎಲ್ಲ ಅವಸ್ಥೆಗಳೂ ಬಿಟ್ಟುಹೋಗುತ್ತಿದ್ದರೂ ತಾನು (ಹಾಗೆಯೇ) ಇದ್ದುಕೊಂಡೇ ಇರುವ (ಮತ್ತು) 'ನಾನು' ಎಂದು ಯಾವಾಗಲೂ ಒಳಗೆ ಹೊಳೆಯುತ್ತಿರುವ, ತನ್ನ ಸ್ವರೂಪವನ್ನು (ತನ್ನನ್ನು) ಭಜಿಸುವವರಿಗೆ ಮಂಗಲಕರವಾದ (ಜ್ಞಾನ)ಮುದ್ರೆಯಿಂದ ಯಾವಾತನು ಪ್ರಕಟೀಕರಿಸುವನೋ ಆ ಗುರುಮೂರ್ತಿಯಾದ ಶ್ರೀದಕ್ಷಿಣಾಮೂರ್ತಿಗೆ ಈ ನಮಸ್ಕಾರ !

## ಪ್ರತ್ಯಭಿಜ್ಞೆಯ ಲಕ್ಷಣ

ಏತದುಕ್ತಂ ಭವತಿ –

**ಭಾತಸ್ಯ ಕಸ್ಯಚಿತ್ ಪೂರ್ವಂ ಭಾಸಮಾನಸ್ಯ ಸಾಂಪ್ರತಮ್ ।**
**ಸೋಽಯಮಿತ್ಯನುಸನ್ಧಾನಂ ಪ್ರತ್ಯಭಿಜ್ಞಾನಮುಚ್ಯತೇ**　　॥ ೩ ॥

೩. (ಇಲ್ಲಿ) ಇದನ್ನು ಹೇಳಿದಂತಾಗಿದೆ :– ಹಿಂದೆ ತೋರಿದ್ದು ಈಗ ತೋರುತ್ತಿರುವ ಯಾವದಾದರೊಂದನ್ನು 'ಅದೇ ಇದು' ಎಂದು ಮನದಂದುಕೊಳ್ಳುವದು ಪ್ರತ್ಯಭಿಜ್ಞಾನವೆನಿಸುವದು.

### ವಿವೇಚನೆ

ಹಿಂದೆ ನೋಡಿದ್ದನ್ನು ಎದುರಿಗೆ ಈಗ ಕಂಡಾಗ ಆಗುವ ಮನಸ್ಸಿನ ವೃತ್ತಿಯೇ **ಪ್ರತ್ಯಭಿಜ್ಞಾನವು.** ಈಗ ಎದುರಿಗೆ ಇಲ್ಲದಿದ್ದರೂ 'ಅಗ ಇತ್ತು' ಎಂಬ ರೂಪದಲ್ಲಿ ಆಗುವ ವೃತ್ತಿಯು ಸ್ಮೃತಿಯು. ಹಿಂದೆ ನೋಡಿದ್ದನ್ನು ಮತ್ತೊಂದು ವಸ್ತುವಿನಲ್ಲಿ 'ಅದೇ ಇದು' ಎಂದು ಎಣಿಸಿಕೊಳ್ಳುವದು ಭ್ರಾಂತಿ. ಪ್ರಕೃತದಲ್ಲಿ ಆತ್ಮನನ್ನೇ 'ಅವನೇ ಇವನು' ಎಂದು ಪ್ರತ್ಯಭಿಜ್ಞೆಯಿಂದ ತಿಳಿಯುತ್ತಾರೆ–ಎಂದು ಭಾವ. ಮುಂದಿನ ಶ್ಲೋಕಗಳಲ್ಲಿ ಇದು ಸ್ಫುಟವಾಗುವದು.

## ಆತ್ಮನ ಪ್ರತ್ಯಭಿಜ್ಞಾನ

**ತದ್ದೇಶಕಾಲಾಕಾರಾದೀನಪಧೂಯಾನುಷಙ್ಗಿಕಾನ್ ।**
**ಯಥೈಕಂ ವಸ್ತ್ವನುಸ್ಯೂತಂ ಸೋಽಯಮಿತ್ಯಭಿಧೀಯತೇ * ॥ ೪ ॥**

**ಮಾಯಾನುಷಙ್ಗಸಞ್ಜಾತಕಿಞ್ಚಿಜ್ಜ್ಞತ್ವಾದ್ಯಪೋಹನಾತ್ ।**
**ಸರ್ವಜ್ಞತ್ವಾದಿವಿಜ್ಞಾನಂ ಪ್ರತ್ಯಭಿಜ್ಞಾನಮಾತ್ಮನಃ ॥ ೫ ॥**

೪–೫. (ವಸ್ತುಸ್ವರೂಪದಲ್ಲಿ ಸೇರದೆ) ಸೇರಿಕೊಂಡಿರುವ ಆ ದೇಶ, (ಆ) ಕಾಲ, (ಆ) ಆಕಾರ – ಮುಂತಾದವುಗಳನ್ನು ಕೊಡವಿ ಹಾಕಿ, (ಎಲ್ಲಾ ಕಡೆಯಲ್ಲಿಯೂ) ಅನುಸರಿಸಿಕೊಂಡುಬಂದಿರುವ ಒಂದೇ ವಸ್ತು(ತತ್ತ್ವ)ವನ್ನು 'ಅವನೇ ಇವನು' ಎಂದು ಹೇಗೆ ಹೇಳುತ್ತಾರೋ (ಹಾಗೆಯೇ), ಮಾಯೆಯ ಸಂಬಂಧದಿಂದ ಉಂಟಾಗಿದ್ದ ಅಲ್ಪವನ್ನರಿಯುವದೇ ಮುಂತಾದವುಗಳನ್ನು ಅಲ್ಲಗಳೆಯುವದರಿಂದ ಸರ್ವಜ್ಞತ್ವವೇ ಮುಂತಾದವನ್ನು ಅರಿತುಕೊಳ್ಳುವದೇ ಆತ್ಮನ ಪ್ರತ್ಯಭಿಜ್ಞಾನವು.

### ವಿವೇಚನೆ

ಹಿಂದೆ 'ತತ್ತ್ವಮಸಿ' (ಅದೇ ನೀನಾಗಿರುವೆ) ಎಂಬ ವಾಕ್ಯದ ಅರ್ಥವನ್ನು ವಿವರಿಸುವಾಗ (೩–೧೨) ಇದೇ ಬಗೆಯ ಅಭಿಪ್ರಾಯವನ್ನು 'ಸೋಽಯಂ ಪುರುಷಃ' (ಅವನೇ ಈ ಮನುಷ್ಯನು ೨–೧೦) ಎಂಬ ದೃಷ್ಟಾಂತದಿಂದ ತಿಳಿಸಿರುವದನ್ನು ಇಲ್ಲಿ ಲಕ್ಷ್ಯಕ್ಕೆ ತಂದುಕೊಳ್ಳಬಹುದು. ಇಲ್ಲಿ ಅವಸ್ಥೆಗಳೊಳಗೆ ಮಾಯಾಸಂಪರ್ಕದಿಂದ ಕಾಣುವ ಅಲ್ಪಜ್ಞತ್ವವನ್ನು ಬಿಟ್ಟು, ಸರ್ವಜ್ಞತ್ವವನ್ನು ಅರಿತುಕೊಳ್ಳುವದೇ ಆತ್ಮನ ಪ್ರತ್ಯಭಿಜ್ಞೆ ಎಂದಿದೆ. ಇಲ್ಲಿ ಅದೇಕೊ, ಸರ್ವಜ್ಞತ್ವವನ್ನು ಬಿಟ್ಟು ಚೈತನ್ಯಮಾತ್ರನೆಂದರಿಯುವದೇ ಪ್ರತ್ಯಭಿಜ್ಞೆ ಎಂದು ಹೇಳಿಲ್ಲ. ವಸ್ತು ಎಂದರೆ ಆತ್ಮತತ್ತ್ವವು ಎಂದು ಅರ್ಥಮಾಡಿಕೊಂಡರೆ 'ಸೋಽಯಮ್' ಎಂಬ ವ್ಯವಹಾರವು ಆತ್ಮತತ್ತ್ವದ ವಿಷಯವೇ ಎಂಬ ಅಭಿಪ್ರಾಯವು ದೊರಕುತ್ತದೆ. 'ಸೋಽಯಮಿತ್ಯಭಿಧೀಯತೇ' ಎಂಬುದಕ್ಕೆ 'ಪ್ರತ್ಯಭಿಜ್ಞಾನಮಾತ್ಮನಃ' – ಎಂಬ ಪಾಠಾಂತರವುಂಟು. ಈಗ ನಾವು ಅನುಸರಿಸಿರುವ ಪಾಠದಲ್ಲಿ ಒಂದನೆಯ ಶ್ಲೋಕವು ದೃಷ್ಟಾಂತ, ಎರಡನೆಯದು ದಾರ್ಷ್ಟಾಂತಿಕ ಎಂಬುದು ಸ್ಫುಟತರವಾಗುತ್ತದೆ.

* 'ಪ್ರತ್ಯಭಿಜ್ಞಾನಮಾತ್ಮನಃ' ಎಂಬುದರ ಬದಲು ಈ ಪಾಠವನ್ನು ಇಟ್ಟುಕೊಂಡಿದೆ.

## ಪ್ರತ್ಯಭಿಜ್ಞಾಪ್ರಮಾಣ್ಯ

**ಪೂರ್ವಜನ್ಮಾನುಭೂತಾರ್ಥಸ್ಮರಣಾನ್ಮೃಗಶಾವಕಃ ।**
**ಜನನೀಸ್ತನ್ಯಪಾನಾಯ ಸ್ವಯಮೇವ ಪ್ರವರ್ತತೇ ॥ ೬ ॥**
**ತಸ್ಮಾನ್ನಿಶ್ಚೀಯತೇ ಸ್ಥಾಯೀತ್ಯಾತ್ಮಾ ದೇಹಾನ್ತರೇಷ್ವಪಿ ।**
**ಸ್ಮೃತಿಂ ವಿನಾ ನ ಘಟತೇ ಸ್ತನ್ಯಪಾನಂ ಶಿಶೋರ್ಯತಃ ॥ ೭ ॥**
**ಪೂರ್ವತ್ರಾನುಭವೇ ಕಾಲೇ ಸ್ಮೃತಿಕಾಲೇ ಪರತ್ರ ಸನ್ ।**
**ಆತ್ಮಾ ಸಂಸ್ಕಾರರೂಪೇಣ ಸ್ಮರತ್ಯರ್ಥಂ ಸ್ವನಿಶ್ಚಿತಮ್ ॥ ೮ ॥**

೬-೮. ಹಿಂದಿನ ಜನ್ಮದಲ್ಲಿ ಅನುಭವಿಸಿದ ವಿಷಯದ ನೆನಪಿನಿಂದ ಜಿಂಕೆಯ ಮರಿಯು ತಾಯಿಯ ಮೊಲೆಹಾಲನ್ನು ಕುಡಿಯುವದಕ್ಕೆ ತಾನೇ ಮುಂದುವರಿಯುತ್ತದೆ. ಆದ್ದರಿಂದ ಬೇರೆಯ ದೇಹಗಳಲ್ಲಿಯೂ ಆತ್ಮನು ಹಾಗೆಯೇ ಸ್ಥಿರನಾಗಿರುತ್ತಾನೆಂದು ನಿಶ್ಚಯವಾಗುತ್ತದೆ. ಏಕೆಂದರೆ ಮಗುವಿಗೆ ಮೊಲೆಹಾಲನ್ನು ಕುಡಿಯುವದೆಂಬುದು ನೆನಪಿಲ್ಲದೆ ಹೊಂದುವದಿಲ್ಲ. ಹಿಂದೆ ಅನುಭವದ ಕಾಲದಲ್ಲಿಯೂ ಮತ್ತೊಂದು (ಜನ್ಮವನ್ನು) ನೆನಪಿಸಿಕೊಳ್ಳುವ ಕಾಲದಲ್ಲಿಯೂ ಇದ್ದುಕೊಂಡು ಆತ್ಮನು ತನ್ನಲ್ಲಿರುವ ಸಂಸ್ಕಾರರೂಪದಿಂದ ಇರುವ ವಿಷಯವನ್ನು ಸ್ಮರಿಸಿಕೊಳ್ಳುತ್ತಾನೆ.

### ವಿವೇಚನೆ

ಹಿಂದಿನ ಕಾಲದಲ್ಲಿ ಆದದ್ದನ್ನು ಈಗ ನೆನಪಿಸಿಕೊಂಡು ತನ್ನನ್ನು ತಾನೇ ಗುರುತುಹಿಡಿಯುವದು ಆತ್ಮನ ಪ್ರತ್ಯಭಿಜ್ಞೆ ಎಂದು ಗ್ರಂಥಕರ್ತರು ಹೇಳಿದ್ದದ್ದನ್ನು ಅಕ್ಷರಶಃ ಹಿಡಿದು ಇಲ್ಲಿ ಒಂದು ಉದಾಹರಣೆಯನ್ನು ಕೊಟ್ಟಿರುತ್ತಾರೆ: ಒಂದು ಮೃಗದ ಮರಿಯು ಹುಟ್ಟಿದ ಕೂಡಲೆ ತಾಯಿಯ ಮೊಲೆಹಾಲನ್ನು ಕುಡಿಯುವದಕ್ಕೆ ಹೋಗುವದು ಹಿಂದಿನ ಜನ್ಮದ ಸ್ಮೃತಿಯಿಂದ, ಇದೇ ಆ ತಾಯಿಯ ಮೊಲೆ ಎಂಬ ಪ್ರತ್ಯಭಿಜ್ಞೆಯಿಂದ – ಎಂದು ಶ್ಲೋಕಕ್ಕೆ ಅಕ್ಷರಾರ್ಥವಾಗುತ್ತದೆ. ಇದು ಹೇಗೂ ಸರಿಯಲ್ಲ. ಏಕೆಂದರೆ ಪೂರ್ವಜನ್ಮದ ನೆನಪಾಗಲಿ, ಮೊಲೆಹಾಲು ಎಂಬ ಪ್ರತ್ಯಭಿಜ್ಞೆಯಾಗಲಿ ಆ ಮೃಗದ ಮರಿಗೆ ಇರುವದೇ ಇಲ್ಲ. ಆದ್ದರಿಂದ ಆತ್ಮನು ಎರಡು ಜನ್ಮಗಳಲ್ಲಿಯೂ ಅವನೇ ಎಂದು ನಿಶ್ಚಿತವಾಗುತ್ತದೆ–ಎಂಬ ಅನುಮಾನವೂ ಸರಿಯಲ್ಲ; ಏಕೆಂದರೆ ಆತ್ಮನನ್ನು ಹಿಂದಿನ ಜನ್ಮದಲ್ಲಾಗಲಿ ಈಗಿನ ಜನ್ಮದಲ್ಲಾಗಲಿ ಮರಿಯು ಗುರುತಿಸಿಯೇ ಇಲ್ಲ. ಹೀಗಿರುವಲ್ಲಿ ಆತ್ಮನ ಪ್ರತ್ಯಭಿಜ್ಞೆ ಅದಕ್ಕೆ ಎಲ್ಲಿಂದ

ಬರಬೇಕು ? ಸಾಮಾನ್ಯವಾಗಿ ಪಶ್ವಾದಿಗಳಿಗಿಂತ ವ್ಯುತ್ಪನ್ನಮತಿಗಳಾಗಿರುವ ಮನುಷ್ಯರಿಗೆಕೂಡ ದೇಹಾದಿಗಳಿಗಿಂತ ವ್ಯತಿರಿಕ್ತವಾಗಿರುವ ಆತ್ಮನ ಅರಿವು ಇರುವದಿಲ್ಲ ; ಅವನ ವಿಷಯದ ಸ್ಮರಣೆಯಾಗಲಿ ಪ್ರತ್ಯಭಿಜ್ಞೆಯಾಗಲಿ ಅವರಿಗೆ ಆಗುವದೂ ಇಲ್ಲ.

ಇದು ಮೂಲಶ್ಲೋಕಾಭಿಪ್ರಾಯಕ್ಕೂ ಹೊಂದುವಂತಿಲ್ಲ. ಏಕೆಂದರೆ : ಬಾಲ್ಯಾದಿಯಾದ ಅವಸ್ಥೆಗಳಲ್ಲಾಗಲಿ ಜಾಗ್ರದಾದ್ಯವಸ್ಥೆಗಳಲ್ಲಾಗಲಿ, ಆತ್ಮನಲ್ಲಿ ಯಾವ ಸಂಸ್ಕಾರವೂ ಆಗುವದಿಲ್ಲ ; ಏಕೆಂದರೆ ಬಾಲ್ಯ, ಕೌಮಾರ, ಯೌವನ, ವಾರ್ಧಕ - ಎಂಬ ಅವಸ್ಥೆಗಳು ಶರೀರಕ್ಕೆ ಆಗುತ್ತವೆ ; ಆತ್ಮನಿಗೆ ಆಗುವದಿಲ್ಲ. ಶರೀರಾದ್ಯಭಿಮಾನವುಳ್ಳ ಜೀವನನ್ನೇ ಆತ್ಮನೆಂದು ಇಟ್ಟುಕೊಂಡರೆ ಹೇಗೋ ಆತ್ಮನಿಗೆ - ಮನಸ್ಸಿನಲ್ಲಿ ಉಂಟಾಗುವ ಸಂಸ್ಕಾರದ ಮೂಲಕ - 'ಈ ಅವಸ್ಥೆಗಳು ನನಗೇ ಆಗುವವು ' ಎಂಬ ಭಾವನೆಯೂ ಬರಬಹುದಾದರೂ ಅದರಿಂದ ಆತ್ಮನ ವಿಷಯದ ಸ್ಮರಣೆಯಾಗಲಿ, ಪ್ರತ್ಯಭಿಜ್ಞೆಯಾಗಲಿ ಆಗುವಂತಿಲ್ಲ. ಜಾಗ್ರದಾದ್ಯವಸ್ಥೆಗಳಿಗಂತೂ ಇವು ಸ್ವಲ್ಪವೂ ಹೊಂದುವದಿಲ್ಲ. ಏಕೆಂದರೆ ಎಚ್ಚರದಲ್ಲಿ ದೇಹಾದ್ಯಭಿಮಾನವುಳ್ಳ ಜೀವನಿಗೆ ಕನಸಿನಲ್ಲಿಯೇ ' ನಾನು ಎಚ್ಚರದಿಂದ ಇಲ್ಲಿಗೆ ಬಂದಿರುತ್ತೇನೆ ' ಎಂಬ ಸ್ಮರಣೆಯುಂಟಾಗುವದಿಲ್ಲ. ತನಿನಿದ್ರೆಯಲ್ಲಂತೂ ಯಾವ ಅಂತಃಕರಣವೂ ಇಲ್ಲದ್ದರಿಂದ ಆತ್ಮನಿಗೆ ಎಚ್ಚರಕನಸುಗಳ ಸ್ಮರಣೆಯು ಆಗುವದೇ ಇಲ್ಲ. ಇನ್ನು ಸುಷುಪ್ತಿಯಿಂದ ಸ್ವಪ್ನಕ್ಕೆ, ಸ್ವಪ್ನದಿಂದ ಎಚ್ಚರಕ್ಕೆ ಬಂದಾಗ 'ನಾನು ಹಿಂದೆ ನಿದ್ರೆಮಾಡುತ್ತಿದ್ದೆನು' ಎಂಬ ನೆನವು ಒಂದುವೇಳೆ ಬಂದರೂ ಬರಬಹುದು. ಆದರೂ ಸುಷುಪ್ತಿಯು ಹಿಂದಿನ ಕಾಲದಲ್ಲಿ ಆಯಿತೆಂದಾಗಲಿ, ಕನಸೂ ಎಚ್ಚರವೂ ಆ ಕಾಲದ ಮುಂದಿನ ಭಾಗದಲ್ಲಿ ಆದವೆಂದಾಗಲಿ ಹೇಳುವದಕ್ಕೇ ಬರುವದಿಲ್ಲ. ಸರಿಯಾಗಿ ನೋಡಿದರೆ ಸುಷುಪ್ತಿಯಲ್ಲಿ ಕಾಲದ ಅನುಭವವೇ ಇಲ್ಲ ; ಎಚ್ಚರದಲ್ಲಿ ಆಗುವ ಅನುಭವಕ್ಕೆ ವಿಷಯವಾದ ಕಾಲವು ಕನಸಿನಲ್ಲಾಗುವ ಅನುಭವಕ್ಕೆ ವಿಷಯವಾದ ಕಾಲಕ್ಕಿಂತ ತೀರ ಭಿನ್ನವಾಗಿರುತ್ತದೆ. ರಾತ್ರಿಯಲ್ಲಿ ಎಚ್ಚರವಾಗಿದ್ದವನು ನಿದ್ರಿಸಿದ ಬಳಿಕ ನಡುಹಗಲಿನಲ್ಲಿ ತಾನು ಎಲ್ಲೆಲ್ಲಿಯೋ ಸಂಚರಿಸುತ್ತಿದ್ದಂತೆ ಕನಸನ್ನು ಕಾಣಲೂಬಹುದಾಗಿರುತ್ತದೆ. ಆದ್ದರಿಂದ ಜಾಗ್ರದಾದ್ಯವಸ್ಥೆಗಳಲ್ಲಿಯೂ ಆತ್ಮನಿಗೆ ' ಹಿಂದೆ ನಾನು ನಿದ್ರಿಸಿದೆನು ' ಎಂದಾಗುವ ಅರಿವು ಸ್ಮರಣೆಯೆಂದಾಗಲಿ ಪ್ರತ್ಯಭಿಜ್ಞೆಯೆಂದಾಗಲಿ ನಿರ್ಣಯಿಸುವದಕ್ಕೆ ಅವಕಾಶವಿಲ್ಲ.

ಇನ್ನು ಆತ್ಮನೆಂದರೆ ಇಡಿಯ ಅವಸ್ಥೆಗಳನ್ನು ಬೆಳಗುವ ಚೈತನ್ಯರೂಪವೆಂದು ಇಟ್ಟುಕೊಂಡರಂತೂ ಅವನಿಗೆ ಅವಸ್ಥೆಗಳ ಅನುಭವವಾಗಲಿ, ಅನುಭವದಿಂದ ಸಂಸ್ಕಾರವಾಗಲಿ, ಸಂಸ್ಕಾರದಿಂದ ಸ್ಮರಣೆಯಾಗಲಿ ಪ್ರತ್ಯಭಿಜ್ಞೆಯಾಗಲಿ ಆಗುವಂತೆಯೇ ಇಲ್ಲವೆಂಬುದು ಸ್ಪಷ್ಟವಾಗಿದೆ. ಆದ್ದರಿಂದ ಇಲ್ಲಿ ಮಾನಸೋಲ್ಲಾಸಕಾರರು ಮುಂದಕ್ಕೆ ತಂದಿರುವ ಯುಕ್ತಿಯು ಆತ್ಮನ ಸ್ಮರಣೆಯನ್ನಾಗಲಿ

ಪ್ರತ್ಯಭಿಜ್ಞೆಯನ್ನಾಗಲಿ ಸಾಧಿಸುವದಕ್ಕೆ ಸ್ವಲ್ಪವೂ ಶಕ್ತವಲ್ಲವೆಂದೇ ಹೇಳಬೇಕಾಗುತ್ತದೆ. ಇದೂ ಅಲ್ಲದೆ ಆತ್ಮನು ಯಾವ ಮನಸ್ಸಿಗೂ ವಿಷಯನೇ ಅಲ್ಲವಾಗಿರುವಾಗ, ಅವನ ಸ್ಮೃತಿಯಾಗಲಿ, ಪ್ರತ್ಯಭಿಜ್ಞೆಯಾಗಲಿ – 'ಆ ದೇಶಕಾಲಗಳಲ್ಲಿ ಆ ಆಕಾರದಿಂದಿದ್ದ ಮನುಷ್ಯನೇ ಈ ದೇಶಕಾಲಗಳಲ್ಲಿ ಈ ಆಕಾರದಲ್ಲಿರುವ ಮನುಷ್ಯನು' ಎಂಬ ಪ್ರತ್ಯಭಿಜ್ಞೆಯ ದೃಷ್ಟಾಂತದಿಂದ ಹೇಗೆ ಸಿದ್ಧವಾದೀತು ? ಈ ವಿಷಯದಲ್ಲಿ ಬೃಹದಾರಣ್ಯಕವಾರ್ತಿಕದಲ್ಲಿರುವ ಶ್ಲೋಕಗಳನ್ನು ಮನದಂದುಕೊಳ್ಳುವದರಿಂದ ಲಾಭವುಂಟು. ಏಕೆಂದರೆ ಆ ಶ್ಲೋಕಗಳಲ್ಲಿ ಹೀಗೆ ಹೇಳಿರುತ್ತದೆ :–

ನ ಸುಷುಪ್ತಿಗವಿಜ್ಞಾನಂ ನಾಜ್ಞಾಸಿಷಮಿತಿ ಸ್ಮೃತಿಃ ।
ಕಾಲಾದ್ಯನ್ನವಧಾನತ್ವಾನ್ನ ಹ್ಯಾತ್ಮಸ್ಥಮತೀತಭಾಕ್ ॥ ೧–೪–೩೦೦ ॥

ನ ಭೂತಕಾಲಸ್ಪೃಕ್ ಪ್ರತ್ಯಙ್ ನ ಚಾಗಾಮಿ ಸ್ಪೃಗೀಕ್ಷ್ಯತೇ ।
ಸ್ವಾರ್ಥದೇಶಃ ಪರಾರ್ಥೋಽರ್ಥೋ ವಿಕಲ್ಪಸ್ತೇನ ಸ ಸ್ಮೃತಃ ॥ ೧–೪–೩೦೧ ॥

ಈ ಶ್ಲೋಕಗಳ ಅಭಿಪ್ರಾಯವಿದು : ಗಾಢನಿದ್ರೆಯಲ್ಲಿರುವದು ಅನುಭವವೆಂದಾಗಲಿ ಎಚ್ಚರದಲ್ಲಿ 'ನಾನು ಏನನ್ನೂ ಅರಿಯಲಿಲ್ಲ' ಎಂಬುದು ಸ್ಮೃತಿಯೆಂದಾಗಲಿ ಆಗಲಾರದು. ಆತ್ಮನಿಗೆ ಭೂತಭವಿಷ್ಯತ್ಕಾಲಗಳ ಸಂಬಂಧವೇ ಇರುವದಿಲ್ಲ. ಆದ್ದರಿಂದ ಇದು ವಿಕಲ್ಪಮಾತ್ರವೇ.

ಹೀಗಿರುವದರಿಂದ ಪ್ರಕೃತಸ್ತೋತ್ರಶ್ಲೋಕಕ್ಕೆ ಬಾಲ್ಯಾದ್ಯವಸ್ಥೆಗಳೂ ಜಾಗ್ರದಾದ್ಯವಸ್ಥೆಗಳೂ ಆತನಲ್ಲಿ ತೋರದೆ ಇರುವಾಗಲೂ ಅವುಗಳ ಸಾಕ್ಷಿಯಾದ ಆತ್ಮನು ಮಾತ್ರ ತಾನು ಇದ್ದಂತೆಯೇ ಇರುತ್ತಾನೆ – ಎಂದಿಷ್ಟು ಅಭಿಪ್ರಾಯವನ್ನು ಹೇಳಿದರೆ ಅನುಭವಾನುಸಾರಿಯಾದ ಅನ್ವಯವ್ಯತಿರೇಕತರ್ಕವನ್ನು ಹೇಳಿದಂತೆ ಆಗುತ್ತದೆ – ಎಂದು ನಮಗೆ ಇಲ್ಲಿ ತೋರುತ್ತದೆ.

## ಪ್ರತ್ಯಭಿಜ್ಞೆಯ ವಿಷಯಕ್ಕೆ ಆಕ್ಷೇಪ

**ಪ್ರತ್ಯಭಿಜ್ಞೇತಿ ಭಾವಾನಾಂ ಸ್ಮೃತಿಶ್ಚೇದಭಿಧೀಯತೇ ।**
**ಆತ್ಮಸ್ಥೈರ್ಯೇ ಪ್ರಮಾಣತ್ವಂ ಸ್ಮೃತಿಶ್ಚ ಪ್ರಾಪ್ನುಯಾತ್ ಕಥಮ್ ॥**

**ಸ್ಮೃತೌ ಪ್ರಕಾಶೋ ನಾರ್ಥಸ್ಯ ನ ಚಾಪ್ಯರ್ಥಸ್ಯ ನಿಶ್ಚಯಃ ।**
**ನ ಚಾಪ್ಯರ್ಥಾನುಭವಯೋರಜ್ಜುಲ್ಯೋರಿವ ಸಂಭವೇತ್ ॥ ೧೦ ॥**

**ನಾನುಭೂತಿವಿಶಿಷ್ಟಸ್ಯ ಪದಾರ್ಥಸ್ಯ ಚ ದಣ್ಡಿವತ್ ।**
**ಸರ್ವತ್ರಾಪ್ಯೇವಮಿತ್ಯೇವಂ ಪ್ರಸಜ್ಯಾದಿತಿ ಚೇತ್* ಶೃಣು ॥ ೧೧ ॥**

* 'ಚಚ್ಛೃಣು' ಎಂಬ ಪಾಠಕ್ಕಿಂತ ಈ ಪಾಠವೇ ಮೇಲು.

೯-೧೧. (ಆಕ್ಷೇಪ :-) 'ಪ್ರತ್ಯಭಿಜ್ಞೆ' ಎಂಬ ಮಾತಿನಿಂದ ಪದಾರ್ಥಗಳ ನೆನಪನ್ನೇ ಹೇಳುವದಾದರೆ, ಆತ್ಮನು ಸ್ಥಿರನೆಂಬುದರಲ್ಲಿ ಸ್ಮೃತಿಗೆ ಪ್ರಾಮಾಣ್ಯವೆಂತು ದೊರೆತೀತು? ನೆನಪಿನಲ್ಲಿ ವಿಷಯವು ತೋರುತ್ತಿರುವದಿಲ್ಲ, ವಿಷಯದ ನಿಶ್ಚಯ* ವೂ ತೋರುವದಿಲ್ಲ; ವಿಷಯ, ಅನುಭವ – ಇವೆರಡರ (ತೋರಿಕೆಯೂ) ಎರಡು ಬೆರಳುಗಳ ಅನುಭವದಂತೆ ಆಗುವಹಾಗಿಲ್ಲ. ಅನುಭವದಿಂದ ವಿಶಿಷ್ಟವಾಗಿರುವ ಪದಾರ್ಥವೂ '(ಇವನು) ದಂಡವುಳ್ಳವನು' ಎಂಬಂತೆ ತೋರುವದಿಲ್ಲ. ಏಕೆಂದರೆ ಎಲ್ಲಾ ಕಡೆಯಲ್ಲಿಯೂ (ವಸ್ತುವಿನ ವಿಷಯಕ್ಕೆ ಪ್ರಾಮಾಣ್ಯವನ್ನು) ಹೀಗೆಯೇ ಎಂದು ಹೇಳುವ (ಅನಿಷ್ಟವು) ಪ್ರಸಂಗವಾಗಬಹುದಾಗುವದು – ಎಂದರೆ (ಈ ಆಕ್ಷೇಪಕ್ಕೆ ಪರಿಹಾರವನ್ನು ಹೇಳುವೆವು), ಕೇಳು.

## ವಿವೇಚನೆ

ಪ್ರತ್ಯಭಿಜ್ಞೆಯು ಪ್ರಮಾಣ ಎಂದು ಹೇಳುವಾಗ ಆತ್ಮನು ಅನುಭವದ ಸಂಸ್ಕಾರದಿಂದ ಹಿಂದೆ ಅನುಭವಿಸಿದ ಅರ್ಥವನ್ನು ಮುಂದಿನ ಕಾಲದಲ್ಲಿ ನೆನಪಿಸಿಕೊಳ್ಳುತ್ತಾನೆ – ಎಂದು ಸಿದ್ಧಾಂತಿಯು ಹೇಳಿದ ವಾಕ್ಯದ ಅಕ್ಷರಾರ್ಥವನ್ನು ಹಿಡಿದು ಇಲ್ಲಿ ಪೂರ್ವಪಕ್ಷಿಯು ಆಕ್ಷೇಪವನ್ನೊಡ್ಡಿರುತ್ತಾನೆ.

ಪ್ರತ್ಯಭಿಜ್ಞೆ ಎಂದರೆ ಸ್ಮೃತಿಮಾತ್ರವೇ ಆದರೆ ಆತ್ಮನು ಯಾವಾಗಲೂ ಮಾರ್ಪಡದೆ ಸ್ಥಿರನಾಗಿರುತ್ತಾನೆ ಎಂಬುದಕ್ಕೆ ಸ್ಮೃತಿಯೇ ಪ್ರಮಾಣ – ಎಂದು ಹೇಳಿದಂತೆ ಆಗುವದು. ಇದು ಸರಿಯಾಗಲಾರದು. ಏಕೆಂದರೆ :– (೧) ಸ್ಮೃತಿಯಲ್ಲಿ ಅನುಭವದ ಕಾಲಕ್ಕೆ ವಿಷಯವು ತೋರುವಂತೇನೂ ತೋರುವದಿಲ್ಲ; ಆಗ ನೆನಪಿನ ರೂಪದ – ಆಗ ಅದನ್ನು ಅನುಭವಿಸಿದೆನು ಎಂಬ ರೂಪದ – ವೃತ್ತಿಮಾತ್ರವೇ ಇರುತ್ತದೆ. (೨) ಅನುಭವದ ಕಾಲಕ್ಕೆ 'ಇದು ವಿಷಯ, ಇದು ಅನುಭವ' ಎಂದು ಜ್ಞೇಯವೂ ಜ್ಞಾನವೂ ಎರಡೂ ಏಕಕಾಲದಲ್ಲಿ – ಕೈಯಲ್ಲಿ ಎರಡು ಬೆರಳುಗಳನ್ನು ಒಂದೇ ಕಾಲಕ್ಕೆ ಕಾಣುವಂತೆ – ಸ್ಮೃತಿಯಲ್ಲಿ ಮನಸ್ಸಿನ ವೃತ್ತಿಯೂ ಅದರ ವಿಷಯವೂ ಸ್ವತಂತ್ರವಾಗಿ ಬೇರೆಬೇರೆಯಾಗಿ ತೋರುತ್ತಿರುವದೂ ಇಲ್ಲ. (೩) ಇವನು 'ದಂಡಿ' (ಕೋಲುಳ್ಳವನು) ಎಂಬಲ್ಲಿ ದಂಡವು ವಿಶೇಷಣವಾಗಿಯೂ ಅದನ್ನು ಹಿಡಿದಿರುವ ಮನುಷ್ಯನು ಅದಕ್ಕೆ ವಿಶೇಷ್ಯವಾಗಿಯೂ ತೋರುವಂತೆ ಅನುಭವವಿಶಿಷ್ಟವಾದ ವಿಷಯ – ಎಂದೇನೂ ತೋರುತ್ತಿರುವದಿಲ್ಲ. ಹೀಗಿದ್ದರೂ ಸ್ಮೃತಿಯನ್ನು ಪ್ರಮಾಣವೆಂದು ಹಿಡಿದರೆ ಮಾತು,

---

* 'ನ ಚಾರ್ಥಾನುಭವಸ್ಯ ವಾ' ಎಂಬ ಪಾಠಾಂತರಕ್ಕೆ 'ವಿಷಯದ ಅನುಭವವೂ ತೋರುವದಿಲ್ಲ' ಎಂದರ್ಥ. ಆದರೆ ಇದು ಎಲ್ಲರಿಗೂ ಗೊತ್ತಿದ್ದನ್ನೇ ಹೇಳಿದಂತಾಗುತ್ತದೆ.

ಮಾತಿನ ವಿಷಯವಾದ ಅರ್ಥ – ಇವೆರಡೂ ತೋರದೆ ಮಾತೊಂದೇ ತೋರುತ್ತಿರುವಾಗಲೂ ಮಾತೇ ವಿಷಯಕ್ಕೆ ಪ್ರಮಾಣವೆಂದಾಗಬೇಕಾದೀತು. 'ಸಕ್ಕರೆ' ಎಂದು ಹೇಳಿದಮಾತ್ರದಿಂದ ಬಾಯಿಯೇನೂ ಸಿಹಿಯಾಗುವದಿಲ್ಲವಷ್ಟೆ? ಈ ದೃಷ್ಟಾಂತದಲ್ಲಿ ಮಾತೇ ಅಲ್ಲದೆ ಮಾತಿನ ವಿಷಯವಾದ ವಸ್ತುವೂ ಬೇರೆಯಾಗಿರುತ್ತದೆ. ಹೀಗೆ ಮಾತು ವಿಷಯದ ಬಗೆಗೆ ಪ್ರಮಾಣವಾಗುವಂತೆ ಮನಸ್ಸಿನ ವೃತ್ತಿಯ ಜೊತೆಗೆ ಅದರ ಅರ್ಥವೂ ಇದ್ದರೆ ಮಾತ್ರ ಅದನ್ನು ಆ ವಿಷಯಕ್ಕೆ ಪ್ರಮಾಣವೆನ್ನುವದು ಯುಕ್ತವೆಂದಾಯಿತಷ್ಟೆ? ಹಾಗೆಯೇ ನೀವು ಹೇಳುವ ಸ್ಮೃತಿರೂಪವಾದ ಪ್ರತ್ಯಭಿಜ್ಞೆಯಲ್ಲಿ ವಿಷಯದ ತೋರಿಕೆಯಿಲ್ಲದ್ದರಿಂದ ಅದು ಹೇಗೆತಾನೆ ಆತ್ಮನ ವಿಷಯಕ್ಕೆ ಪ್ರಮಾಣವಾದೀತು? – ಎಂದು ಆಕ್ಷೇಪ.

ನಿಜವಾಗಿ ಪ್ರತ್ಯಭಿಜ್ಞೆ ಎಂದರೆ ಬರಿಯ ಸ್ಮೃತಿಯಲ್ಲ. ಆದ್ದರಿಂದ ಈ ಆಕ್ಷೇಪದಲ್ಲೇನೂ ಹುರುಳಿಲ್ಲ. ಇದನ್ನು ಸ್ಫುಟಗೊಳಿಸುವೆನೆಂಬ ಆಶಯದಿಂದ ಸಿದ್ಧಾಂತಿಯು "ನಮ್ಮ ಅಭಿಪ್ರಾಯವನ್ನು ವಿವರಿಸುತ್ತೇವೆ, ಕೇಳು" ಎಂದಿರುತ್ತಾನೆ.

**ಪ್ರಾಕ್ತನಾನುಭವೇ ನಷ್ಟೇ ತದವಷ್ಟಮ್ಭಸಮ್ಭವಾತ್ ।**
**ಸಂಸ್ಕಾರಸಂಜ್ಞಾತ್ ಸಾಮಗ್ರ್ಯಾತ್ ಪೌರುಷಾಜ್ಜಾಯತೇ ಸ್ಮೃತಿಃ ॥**

**ಆವೇದ್ಯಾನುಭವೇ ನಷ್ಟೇ ತದೀಯಂ ವಿಷಯಂ ಪ್ರತಿ ।**
**ಅನುಭಾವಕಮಾತ್ಮಾನಂ ಬೋಧಯತ್ಯನಪಾಯಿನಮ್ ॥ ೧೩ ॥**

**ವಿಷಯೇ ಚ ಪ್ರಮುಷಿತೇ ನಷ್ಟೇ ಚಾನುಭವೇ ಸತಿ ।**
**ಸ್ವವಿಶ್ರಾನ್ತಂ ಸ್ಮರತ್ಯರ್ಥಂ ದೇವೋऽಪ್ರಮುಷಿತಃ ಸದಾ ॥ ೧೪ ॥**

**ಪ್ರಮೋಷಣಂ ಪ್ರಮಾತೄಣಾಂ ಮಾಯಯಾ ತಮಸಾ ಕೃತಮ್ ।**
**ಮಾಯಾವಿದ್ಯೇ ಪ್ರಭೋಶ್ಶಕ್ತೀ ಭಾನೋಶ್ಛಾಯಾಪ್ರಭೋಪಮೇ ॥**

೧೨–೧೫. ಹಿಂದಿನ ಅನುಭವವು ನಾಶವಾಗಲು ಅದರ ಆಧಾರದಿಂದ ಹುಟ್ಟಿದ 'ಸಂಸ್ಕಾರ'ವೆಂಬ ಹೆಸರಿನ ಪುರುಷನಿಷ್ಠವಾದ ಸಾಮಗ್ರಿಯಿಂದ ಸ್ಮೃತಿಯು ಹುಟ್ಟುತ್ತದೆ. ಅರಿಯಬೇಕಾದ ವಿಷಯದ ಅನುಭವವು ನಾಶವಾಗಲು ಅದರ ವಿಷಯದ ಬಗೆಗೆ ಅನುಭವವನ್ನುಂಟುಮಾಡಿದ ಆತ್ಮನನ್ನು ಹೋಗುವಿಕೆಯಿಲ್ಲದವನೆಂದು ತಿಳಿಯಿಸುತ್ತದೆ. ವಿಷಯವು ನಾಶವಾಗಿ ಅಥವಾ (ಅದರ) ಅನ್ಯ

ಭವವು ನಷ್ಟವಾಗಲಾಗಿ ತನ್ನಲ್ಲಿಯೇ ವಿಶ್ರಾಂತಿಯನ್ನು ಪಡೆದು ನಿಜವಾದ ಅರ್ಥವನ್ನು ಯಾವಾಗಲೂ ನಾಶವಾಗದ ಪರಮಾತ್ಮನು ಸ್ಮರಿಸಿಕೊಳ್ಳುತ್ತಾನೆ. ಪ್ರಮಾತೃಗಳು ನಾಶವಾಗುವರೆಂಬುದು ಮಾಯಾರೂಪವಾದ ತಮಸ್ಸಿನಿಂದ ಆಗಿರುತ್ತದೆ. ಮಾಯಾ ವಿದ್ಯೆಗಳು – ಸೂರ್ಯನ ನೆರಳುಬೆಳಕುಗಳಂತೆ ಇರುವ ಪ್ರಭುವಿನ (ಎರಡು) ಶಕ್ತಿಗಳು.

## ವಿವೇಚನೆ

ಈ ಗ್ರಂಥಭಾಗದ ಅಭಿಪ್ರಾಯವನ್ನು ನಿರ್ಧರಿಸುವದು ಬಲು ಕಷ್ಟ. ವಾಕ್ಯದ ಸಂದರ್ಭವನ್ನೂ ರಾಮತೀರ್ಥರ ವ್ಯಾಖ್ಯಾನವನ್ನೂ ಆಧಾರವಾಗಿಟ್ಟು ಕೊಂಡು ಯಥಾಮತಿಯಾಗಿ ಬರೆದಿರುತ್ತೇವೆ. ಪ್ರತ್ಯಭಿಜ್ಞೆಯು ಪ್ರಮಾಣವು ಹೇಗೆ ? – ಎಂಬುದನ್ನು ತಿಳಿಯಿಸಿಕೊಡುವದೇ ಗ್ರಂಥದ ಗುರಿ ಎಂಬುದು ಸ್ಪಷ್ಟ.

ವೇದ್ಯ (ಅರಿಯಲ್ಪಡುವ) ವಿಷಯ, ವೇದನ (ಅರಿಯುವಿಕೆ) – ಇವುಗಳು ಹೋದರೂ ವೇದಿತೃ(ಅರಿಯುವವ)ವಾದವನೇನೂ ಹೋಗುವದಿಲ್ಲ. ವಿಷಯಾನುಭವವು ನಷ್ಟವಾದರೂ ಅವುಗಳು ಆತ್ಮರೂಪದಿಂದ ಆತ್ಮನಲ್ಲಿ ಉಳಿದುಕೊಂಡೇ ಇರುವವು. ಆದ್ದರಿಂದ ಆತ್ಮನು ಅವನ್ನು ಸ್ಮರಿಸಿಕೊಳ್ಳುತ್ತಾನೆ. ಅರಿಯುವ ಪ್ರಮಾತೃಗಳೂ ಸುಷುಪ್ತಿಪ್ರಲಯಗಳಲ್ಲಿ ಇಲ್ಲವಾಗುತ್ತಾರಲ್ಲವೇ ? – ಎಂಬ ಆಕ್ಷೇಪಕ್ಕೆ ಪರಿಹಾರವೇನೆಂದರೆ : ಪ್ರಮಾತೃವೆಂಬ ವಿಶೇಷಾಕಾರದಿಂದ ತೋರದೆ ಇರುವದೇ ಪ್ರಮಾತೃಗಳ ನಾಶ, ಅವರ ಸ್ವರೂಪದ ನಾಶವೇನೂ ಆಗುವದಿಲ್ಲ. ಇಲ್ಲಿ ಅವಿದ್ಯೆಯನ್ನು ತಮಸ್ಸೆಂದು ಕರೆದಿರುವದು ಅದು ಅನಿರ್ವಚನೀಯವೆಂಬುದನ್ನು ತಿಳಿಸುವದಕ್ಕೆ.

ಮಾಯೆ, ವಿದ್ಯೆ – ಇವುಗಳು ಪರಮೇಶ್ವರನ ಶಕ್ತಿಗಳೆಂದು ಹೇಳಿರುವದು ಉಪಚಾರಕ್ಕೆ ; ರಾಹುವು ಸೂರ್ಯನಿಗೆ ನಿಜವಾಗಿ ಸಂಬದ್ಧನಾಗದೆ ಇದ್ದರೂ ಅವನಿಗೆ ಸಂಬಂಧಿಸಿರುವಂತೆ ತೋರಿಕೊಂಡು ಸೂರ್ಯನನ್ನು ಮುಚ್ಚುವಂತೆ ಇರುವನೋ ಹಾಗೆಯೇ ಮಾಯೆಯೂ ಆತ್ಮನಿಗೆ ಸಂಬದ್ಧವಾಗದೆ ಇದ್ದರೂ ಆತ್ಮತತ್ತ್ವವನ್ನು ಮುಚ್ಚಿಕೊಂಡಿರುವದು. ಸೂರ್ಯನ ಪ್ರಭೆಯ ದೃಷ್ಟಾಂತವನ್ನು ವಿದ್ಯೆಗೆ ಕೊಟ್ಟಿರುವದು ಸೂರ್ಯನ ಸ್ವಭಾವವೇ ಆಗಿರುವ ಪ್ರಭೆಯಂತೆ ಯಾವದಾದರೊಂದು ನಿಮಿತ್ತದಿಂದ ಈಶ್ವರನು ಧರ್ಮಿಯೆಂದೂ ವಿದ್ಯೆಯು ಧರ್ಮವೆಂದೂ ತಿಳಿಯಿಸುವದಕ್ಕೆ – ಎಂಬುದು ವ್ಯಾಖ್ಯಾನಕಾರರ ಅಭಿಪ್ರಾಯದ ಸಾರವು. ಈ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡಿರುವವರಿಗೇ ಮುಂದಿನ ಮಾನಸೋಲ್ಲಾಸದ ಶ್ಲೋಕಗಳ ಆಶಯವು ಸ್ಫುಟವಾಗುತ್ತದೆ.

## ಮಾಯೆ, ವಿದ್ಯೆ – ಇವುಗಳ ಕೃತ್ಯ

**ಸರ್ವಾನಾಚ್ಛಾದಯೇನ್ಮಾಯಾ ವಿದ್ಯಾ ವ್ಯಾಕ್ಷಿಪ್ಯ ದರ್ಶಯೇತ್ ।**
**ಪ್ರತ್ಯಭಿಜ್ಞೈವ ಸರ್ವೇಷಾಂ ಪ್ರಮಾಣಾನಾಂ ಚ ಸಾಧನಮ್ ॥ ೧೬ ॥**
**ಈಶ್ವರೋಽನ್ಯೋಽಹಮಪ್ಯನ್ಯ ಇತಿ ವಿಚ್ಛೇದಕಾರಿಣೀಮ್ ।**
**ವ್ಯಾಕ್ಷಿಪ್ಯ ವಿದ್ಯಯಾ ಮಾಯಾಮೀಶ್ವರೋಽಹಮಿತಿ ಸ್ಮೃತಿಃ ॥ ೧೭ ॥**
**ಈಷತ್ಪ್ರಕಾಶನಾದೀಶೋ ಮಾಯಾಯವನಿಕಾ*ವೃತಃ ।**
**ಸಮ್ಯಗಾವರಣಾಪಾಯೇ ಸಹಸ್ರಾಂಶುರಿವ ಸ್ಫುರೇತ್ ॥ ೧೮ ॥**

೧೬–೧೮. ಮಾಯೆಯು ಎಲ್ಲರನ್ನೂ ಮರೆಮಾಚುವದು; ವಿದ್ಯೆಯು (ಅದನ್ನು) ತೆಗೆದುಹಾಕಿ (ಅವರ) ಸ್ವರೂಪವನ್ನು ತೋರಿಸುವದು. ಪ್ರತ್ಯಭಿಜ್ಞೆಯೇ ಎಲ್ಲಾ ಪ್ರಮಾಣಗಳಿಗೂ ಕಾರಣವು. 'ಈಶ್ವರನು ಬೇರೆ, ನಾನು ಬೇರೆ' ಎಂದು ವಿಂಗಡವನ್ನುಂಟುಮಾಡುವ ಮಾಯೆಯನ್ನು ವಿದ್ಯೆಯಿಂದ ತೊಲಗಿಸಿ 'ನಾನು ಈಶ್ವರನು' ಎಂದು ಸ್ಮೃತಿ(ಯುಂಟಾಗುತ್ತದೆ). ಮಾಯೆ ಎಂಬ ತೆರೆಯಿಂದ ಮುಸುಕಲ್ಪಟ್ಟ ಈಶ್ವರನು ಒಂದಿಷ್ಟೇ ಪ್ರಕಾಶವುಳ್ಳವನಾಗಿದ್ದವನು, ಆ ಮುಸುಕು ಚೆನ್ನಾಗಿ ಹೋಗಲು ಸೂರ್ಯನಂತೆ ಬೆಳಗುವನು.

### ವಿವೇಚನೆ

ಮಾಯೆಂಯೂ ವಿದ್ಯೆಯೂ ಈಶ್ವರನ ಶಕ್ತಿಗಳೆಂದು ಹಿಂದೆ ಹೇಳಿದೆ. ಈಗ ಈಶ್ವರನೇ ಮಾಯೆಯ ಮುಸುಕಿನಿಂದ ಮರೆಯಾಗಿರುತ್ತಾನೆಂದಿದೆ. ಈ ಪೂರ್ವಾಪರ ವಿರೋಧಕ್ಕೆ ಗತಿಯೇನೆಂಬುದು ತಿಳಿಯುವಂತಿಲ್ಲ. ಈಶ್ವರನು ಬೇರೆ, ನಾನು ಬೇರೆ – ಎಂಬ ವಿಂಗಡವನ್ನು ಮಾಯೆಯೇ ಮಾಡಿರುತ್ತದೆಯೆಂದು ಇಲ್ಲಿ ಹೇಳಿದೆ. ಇದರಿಂದ ಈಶ್ವರನೇ ಜೀವರಿಗೆ ಅಜ್ಞಾನವನ್ನುಂಟುಮಾಡಿರುತ್ತಾನೆ – ಎಂದು ನೈರ್ಘೃಣ್ಯವನ್ನು ಈಶ್ವರನಿಗೆ ಒಡ್ಡಿದಂತಾಗಿದೆ. ಬೆಕ್ಕು ಇಲಿಗಳನ್ನು ಹಿಡಿಯುವದು, ಮತ್ತೆ ಬಿಡುವದು – ಹೀಗೆ ಚೆಲ್ಲಾಟವಾಡುವಂತೆ ಈಶ್ವರನೇ ಮಾಯಾಶಕ್ತಿಯಿಂದ ಜೀವರ ಈಶ್ವರತ್ವವನ್ನು ಮರೆಮಾಡಿ ವಿದ್ಯಾಶಕ್ತಿಯಿಂದ ಅದನ್ನು ತೋರಿಸುತ್ತಾನೆಂದಿರುವದು ವಿಚಾರಪರರಾದವರಿಗೆ ಈಶ್ವರನ ಈಶ್ವರತ್ವವನ್ನೇ ಅಲ್ಲಗಳೆಯುವಂತೆ ಕಾಣುವದರಲ್ಲಿ ಸಂಶಯವಿಲ್ಲ.

'ಪ್ರತ್ಯಭಿಜ್ಞೆಯೇ ಪ್ರಮಾಣಗಳ ಕಾರಣ' ಎಂಬ ಮಾತೂ ತತ್ತ್ವವಿಮರ್ಶಕರಿಗೆ ಒಪ್ಪಾಗುವಂತಿಲ್ಲ. ಪ್ರತ್ಯಭಿಜ್ಞೆ ಎಂದರೆ 'ಅದೇ ಇದು' ಎಂದು

---

* 'ಜವನಿಕಾ' ಪಾಠಾಂತರ; ಅರ್ಥದಲ್ಲಿ ಹೆಚ್ಚುಕಡಿಮೆಯಿಲ್ಲ.

ಹಿಂದೆ ಕಂಡದ್ದನ್ನು ಈಗ ಗುರುತಿಸುವ ಅರಿವು ಎಂದು ಹಿಂದೆ (೭–೩) ಹೇಳಿತ್ತು. ಆದರೆ ಪ್ರತ್ಯಕ್ಷಾದಿಪ್ರಮಾಣಗಳಲ್ಲಿ 'ಹಿಂದೆ ಕಂಡದ್ದನ್ನೇ ಈಗ ಕಾಣುತ್ತಿದ್ದೇನೆ' ಮುಂತಾಗಿ ಪ್ರತ್ಯಭಿಜ್ಞೆಯಾಗುವದೆಂದು ಹೇಗೋ ಹೊಂದಿಸಿಕೊಳ್ಳಬಹುದಾದರೂ 'ಆ ಈಶ್ವರನೇ ನಾನು' ಎಂಬ ರೂಪದ ಪ್ರತ್ಯಭಿಜ್ಞೆಯನ್ನು ಶಬ್ದಪ್ರಮಾಣಕ್ಕೆ ಹೇಗೂ ಹೊಂದಿಸುವದಕ್ಕಾಗುವಂತಿಲ್ಲ.

ಇದಲ್ಲದೆ ಹಿಂದೆ ಕಂಡಿದ್ದ ವಸ್ತುವಿನ ನೆನಪು ಆದಮೇಲೆಯೇ 'ಅದೇ ಇದು' ಎಂಬ ಪ್ರತ್ಯಭಿಜ್ಞೆಯಾಗುವದೆಂಬುದು ಲೋಕದಲ್ಲಿ ಪ್ರಸಿದ್ಧವಾಗಿದೆ. ಆದರೆ ವಿಷಯವೇ ಅಲ್ಲದ ಪ್ರಮಾತೃವಾಗಲಿ, ಸಾಕ್ಷಿಚೈತನ್ಯಸ್ವರೂಪನಾದ ಪರಮಾತ್ಮನಾಗಲಿ ತನ್ನ ಸ್ವರೂಪವನ್ನು ಅವಿದ್ಯೆಯ ಮರೆಯಿಂದ ಮರೆತಿದ್ದು ವಿದ್ಯೆಯ ಮಹಿಮೆಯಿಂದ 'ಆ ಈಶ್ವರನೇ ನಾನು' ಎಂದು ತನ್ನನ್ನು ತಾನು ಅರಿತುಕೊಳ್ಳುತ್ತಾನೆಂಬುದನ್ನು ಯಾವ ಅನುಭವಾನುಸಾರಿಯಾದ ಯುಕ್ತಿಯಿಂದ ಹೇಗೆತಾನೆ ಅರಿತುಕೊಳ್ಳುವದಾದೀತು ? ಇದನ್ನು ವಿಚಾರರಸಿಕರು ಆಲೋಚನೆಮಾಡಬೇಕಾಗಿದೆ. ಪ್ರಮಾತೃವು ಪ್ರಮಾಣವ್ಯವಹಾರಕ್ಕಿಂತ ಮೊದಲೇ ಸ್ವಯಂಸಿದ್ಧನಾಗಿರುತ್ತಾನೆ – ಎಂದು ಭಾಷ್ಯಕಾರರು 'ಯಾವದ್ವಿಕಾರಂ ತು ವಿಭಾಗೋ ಲೋಕವದ್' (೨–೩–೭) ಎಂಬ ಸೂತ್ರದ ಭಾಷ್ಯದಲ್ಲಿ ಸ್ಪಷ್ಟವಾಗಿ ಹೇಳಿರುತ್ತಾರೆ. "ಸಾಕ್ಷಿಯಾದ ಪರಮಾತ್ಮನು ಚೈತನ್ಯಸ್ವರೂಪನೂ ಅದ್ವಿತೀಯನೂ ನಿರ್ಗುಣನೂ ಆಗಿರುತ್ತಾನೆ" ಎಂದು (ಶ್ವೇ. ೬–೧೧) ಶ್ರುತಿಯು ಹೇಳುತ್ತದೆ.

ಪ್ರಮಾತೃಗಳಿಗೆ ಪ್ರಮೇಯವಾದ ವಿಷಯಗಳ ಬಗೆಗೆ ಅಜ್ಞಾನ, ಸಂಶಯ, ಮಿಥ್ಯಾಜ್ಞಾನ, ಸ್ಮೃತಿ, ಪ್ರತ್ಯಭಿಜ್ಞೆ – ಇವೆಲ್ಲ ಆಗಬಹುದೇ ಹೊರತು ತಾನು ತನ್ನನ್ನೇ ಅರಿತಿಲ್ಲವೆಂದಾಗಲಿ, ಮರೆತಿದ್ದೇನೆಂದಾಗಲಿ, ನೆನಪಿಸಿಕೊಳ್ಳುತ್ತೇನೆಂದಾಗಲಿ, ಹಿಂದೆ ನೋಡಿದ್ದ ತನ್ನನ್ನೇ ಗುರುತಿಸಿಕೊಂಡೆನೆಂದಾಗಲಿ ಯಾರೂ ಹೇಳುವಂತಿಲ್ಲ. ಆದ್ದರಿಂದ ಈ ಅರ್ಥದಲ್ಲಿ ಆತ್ಮನಿಗೆ ತನ್ನ ವಿಷಯದ ಸ್ಮರಣೆ ಅಥವಾ ಪ್ರತ್ಯಭಿಜ್ಞಾನವು ಆಗಬಹುದೆಂದು ನಿರೀಕ್ಷಿಸುವದು ಸರ್ವಥಾ ಸರಿಯಲ್ಲ.

ಹೀಗಿರುವದರಿಂದ 'ನಾನು' ಎಂದು ಪ್ರಸಿದ್ಧನೇ ಆಗಿರುವ ಆತ್ಮನ ವಿಷಯಕ್ಕೆ ತಾನು ಇದೇನೊ, ಇಲ್ಲವೋ ? – ಎಂಬ ಸಂಶಯವೇ ಮುಂತಾದವುಗಳು ಉಂಟಾಗುವಹಾಗಿಲ್ಲದಿದ್ದರೂ ತಾನು ಪ್ರಮಾತೃವೇ ಎಂದು ವಿಚಾರಮಾಡದೆ ನಂಬಿಕೊಂಡಿರುವ ರೂಪದ ಅವಿದ್ಯೆಯನ್ನು ಇದು ಸರಿಯಾದ ತಿಳಿವಳಿಕೆಯೊ, ಅಲ್ಲವೊ ? – ಎಂದು ಶಾಸ್ತ್ರದಲ್ಲಿ ಹೇಳಿರುವ ಪ್ರಕಾರದಿಂದ ವಿಚಾರ ಮಾಡುವದಕ್ಕೆ ಆಗುತ್ತದೆ. ಹೀಗೆಂದು ಶಂಕರಭಗವತ್ಪಾದರು ಸೂತ್ರಭಾಷ್ಯದಲ್ಲಿ (ಅಧ್ಯಾಸಭಾಷ್ಯ) 'ದೇಹೇನ್ದ್ರಿಯಾದಿಷ್ವಹಂಮಮಾಭಿಮಾನರಹಿತಸ್ಯ ಪ್ರಮಾತೃತ್ವಾನುಪಪತ್ತೌ ಪ್ರಮಾಣಪ್ರವೃತ್ತ್ಯನುಪಪತ್ತೇಃ' ಎಂಬಲ್ಲಿಯೂ ಸಮನ್ವಯಸೂತ್ರಭಾಷ್ಯದಲ್ಲಿ 'ಅವಿದ್ಯಯಾ ಆತ್ಮತ್ವೇನ ಪರಿಗೃಹೀತಃ' ಮುಂತಾದ ಸ್ಥಲಗಳಲ್ಲಿಯೂ ಸ್ಪಷ್ಟಪಡಿಸಿರುತ್ತಾರೆ.

ಆದ್ದರಿಂದ 'ಆತ್ಮನನ್ನು ಸ್ಮರಿಸುವದು', 'ಆತ್ಮನ ಪ್ರತ್ಯಭಿಜ್ಞಾನ' ಎಂಬಿವೇ ಮುಂತಾದ ವಾಚೋಯುಕ್ತಿಗಳಿಗೆ ಅನುಭವರೂಪದ ಆತ್ಮಸ್ವರೂಪದ ಜ್ಞಾನವು ಅನ್ವಯವ್ಯತಿರೇಕಯುಕ್ತಿಯಿಂದ ಅನುಭವದಲ್ಲಿ ಪರ್ಯವಸಾನವಾಗುವದು-ಎಂದೇ ಕೊನೆಯ ತೀರ್ಮಾನವನ್ನು ಮಾಡಿಕೊಳ್ಳಬೇಕು. ಈ ಅಭಿಪ್ರಾಯವನ್ನು ಮಾನಸೋಲ್ಲಾಸಕಾರರೂ ಒಪ್ಪಿರುತ್ತಾರೆ. ಮುಂದಿನ ಶ್ಲೋಕಗಳನ್ನು ನೋಡಿ.

## ಪ್ರತ್ಯಭಿಜ್ಞೆಯು ಪ್ರಮಾಣವೆಂಬುದು ಹೇಗೆ ?

**ನ ಕಾರಣಾನಾಂ ವ್ಯಾಪಾರಾತ್ ಪ್ರಮಾಣಾನಾಂ ನ ವಾ ಪುನಃ ।**
**ಪ್ರತ್ಯಭಿಜ್ಞಾಪನಂ ನಾಮ ಮೋಹಾಪಸರಣಂ ಪರಮ್ ॥ ೧೯ ॥**

**ಯಾವನ್ತಿ ಸನ್ತಿ ಮಾನಾನಿ ವ್ಯವಹಾರಪ್ರವೃತ್ತಯೇ ।**
**ತೇಷಾಂ ಮೋಹಾಪಸರಣಾದ್ ವ್ಯಾಪಾರೋಽನ್ಯೋ ನ ವಿದ್ಯತೇ ॥ ೨೦ ॥**

೧೯-೨೦. ಪ್ರತ್ಯಭಿಜ್ಞಾಪನ* (ಗುರುತಿಸಿ ತಿಳಿಯುವಂತೆ ಮಾಡುವದು) - ಎಂದರೆ ಕಾರಣಗಳನ್ನು ಪ್ರಯೋಗಿಸುವದರಿಂದ ಅಲ್ಲ, ಪ್ರಮಾಣಗಳನ್ನು ಪ್ರಯೋಗಿಸುವದರಿಂದಲೂ ಅಲ್ಲ ; ಮತ್ತೆ ಹೇಗೆಂದರೆ : ಮೋಹವನ್ನು ಕಳೆಯುವದರಿಂದಲೇ. ವ್ಯವಹಾರವು ಸಾಗುವದಕ್ಕಾಗಿ ಎಷ್ಟು ಪ್ರಮಾಣಗಳಿವೆಯೋ ಅವುಗಳಿಗೆ ಮೋಹವನ್ನು ಕಳೆಯುವದಕ್ಕಿಂತಲೂ ಬೇರೆ ಯಾವ ಕೆಲಸವೂ ಇರುವದಿಲ್ಲ.

### ವಿವೇಚನೆ

ಪ್ರತ್ಯಭಿಜ್ಞಾನದಿಂದ ಆತ್ಮನನ್ನು ಅರಿತುಕೊಳ್ಳಬೇಕು - ಎಂದು ಹೇಳಿದೆ. ಆದರೆ ಅದು ಪ್ರಮಾಣವೇ ಅಲ್ಲವಲ್ಲ ! - ಎಂಬ ಶಂಕೆಯನ್ನು ತೆಗೆದು, ಆತ್ಮನ ವಿಷಯಕ್ಕೆ ಆ ಬಗೆಗೆ ಪರಿಹಾರವನ್ನು ಹೇಳಿದ್ದಾಯಿತು. ಆದರೆ, ಎಲ್ಲಾ ಪ್ರಮಾಣಗಳಲ್ಲಿಯೂ ಪ್ರತ್ಯಭಿಜ್ಞೆಯೇ ಕೊನೆಯಲ್ಲಿ ಇರುತ್ತದೆ - ಎಂಬುದನ್ನು ಈಗ ಪ್ರತಿಪಾದಿಸುವದಕ್ಕೆ ಹೊರಟಿರುತ್ತಾರೆ.

ಪ್ರತ್ಯಭಿಜ್ಞೆಯ ಸ್ವರೂಪವನ್ನು ಸರಿಯಾಗಿ ತಿಳಿದುಕೊಂಡರೆ ಅದು ಪ್ರಮಾಣವೆಂಬುದು ಹೇಗೆ ?- ಎಂಬ ಶಂಕೆಯೇ ಉಳಿಯುವದಿಲ್ಲ. 'ಇದು ಇಂಥದ್ದು'

---

* ಪ್ರತ್ಯಭಿಜ್ಞೆಯ ವಿಷಯಕ್ಕೆ ಪೀಠಿಕೆಯನ್ನು ನೋಡಿ.

ಎಂದು ಅರಿಯುವಂತೆ ಮಾಡುವದೇ ಅಲ್ಲವೆ, ಪ್ರಮಾಣಗಳ ಕೆಲಸ ? ಪದಾರ್ಥ ವನ್ನು ಅರಿಯುವದೆಂದರೆ ಏನು ? ಆ ಪದಾರ್ಥದ ವಿಷಯಕ್ಕಿದ್ದ ತಪ್ಪುತಿಳಿವನ್ನು ಕಳೆದುಕೊಳ್ಳುವದೇ ಆಗಿದೆ. ಉದಾಹರಣೆಗೆ ಇದು ಸಕ್ಕರೆಯೇ, ಇದು ಕಪ್ಪೆಯ ಚಿಪ್ಪೇ, ಇದು ಹಗ್ಗವೇ – ಎಂದು ನಿಶ್ಚಯಿಸಿಕೊಳ್ಳುವದಕ್ಕಲ್ಲವೆ, ಜಿಹ್ವೇಂದ್ರಿಯ ಅಥವಾ ಚಕ್ಷುರಿಂದ್ರಿಯವನ್ನು ಬಳಸುತ್ತಾರೆ ? ಆಗ ಇಂದ್ರಿಯದ ಕೆಲಸವೇನು ? ಮರವನ್ನು ಕಡಿದು ತುಂಡುಮಾಡುವದಕ್ಕೆ ಕೊಡಲಿಯನ್ನು ಎತ್ತಿ ಎತ್ತಿ ಕೆಳಕ್ಕೆ ಬಲವಾಗಿ ಕಟ್ಟಿಗೆಯ ಮೇಲೆ ಬೀಳಿಸುವಂತೆ, ಅಲ್ಲಿ (ಕೊಡಲಿಯಂಥ) ಯಾವ ಸಾಧನವನ್ನೂ ಕೆಲಸಮಾಡಿಸುವದಿಲ್ಲ. ಕೊಡಲಿಯನ್ನು ಎತ್ತಿ ಬೀಳಿಸುವದಕ್ಕೆ ಕೈಯನ್ನು ಎತ್ತಿ ಕೆಳಕ್ಕೆ ಇಳಿಯಿಸುವಂತೆ ನಾಲಗೆಯನ್ನು ಅಥವಾ ಕಣ್ಣನ್ನು ಅತ್ತಿತ್ತ ಅಲುಗಾಡಿಸುವ ಕೆಲಸವನ್ನು ಮಾಡಿಸುವದಿಲ್ಲ. ವಸ್ತುವಿನ ಕಡೆಗೆ ಲಕ್ಷ್ಯ ವಿಡುವದೆಂಬುದೇ ಅಲ್ಲಿ ವ್ಯಾಪಾರ ; ಅದರಿಂದ ಪದಾರ್ಥದ ವಿಷಯಕ್ಕೆ ಇದ್ದ ಭ್ರಾಂತಿಯು ಹೋಗಿಬಿಡುವದು. ಇದರಂತೆಯೇ ಪ್ರಕೃತದಲ್ಲಿಯೂ ಶಬ್ದಪ್ರಮಾಣದ ಕೆಲಸವೆಂದರೆ ಆತ್ಮನ ವಿಷಯಕ್ಕೆ ಇದ್ದ ಮೋಹವನ್ನು ಎಂದರೆ ಭ್ರಾಂತಿಯನ್ನು ತೊಲಗಿಸುವದೊಂದೇ ಆಗಿದೆ. ಆದ್ದರಿಂದ ಪ್ರತ್ಯಭಿಜ್ಞಾಪನವೇ ಎಲ್ಲೆಲ್ಲಿಯೂ ಪ್ರಮಾಣದ ವ್ಯಾಪಾರವೆಂದು ನಿಶ್ಚಿತವಾಗುತ್ತದೆ – ಎಂದು ಭಾವ.

ಅಪಸರಣವೆಂದರೆ ಅತ್ತ ಸರಿಯುವದು, ತೊಲಗುವದು – ಎಂದು ಅರ್ಥ. ಈ ಮಾತಿಗಿಂತ 'ಅಪಸಾರಣ' (ತೊಲಗುವಂತೆ ಮಾಡುವದು) ಎಂಬ ಶಬ್ದವು ಪ್ರಕೃತದಲ್ಲಿ ಹೆಚ್ಚು ಒಪ್ಪುತ್ತದೆ – ಎಂದು ನಮಗೆ ತೋರುತ್ತದೆ. ಏಕೆಂದರೆ ಪ್ರಮಾಣಗಳಿಗೆಲ್ಲ ಭ್ರಾಂತಿಯನ್ನು ತೊಲಗಿಸುವದೇ ಕೆಲಸವಾಗಿರುತ್ತದೆ.

## ಆತ್ಮಜ್ಞಾನದಿಂದ ತೊಲಗಬೇಕಾದ ಭ್ರಾಂತಿಯ ಸ್ವರೂಪ

**ಜಡಾನೃತಪರಿಚ್ಛಿನ್ನದೇಹಧರ್ಮಾಶ್ಚಿದಾತ್ಮನಿ ।**
**ಸತ್ಯಜ್ಞಾನಸುಖಾತ್ಮತ್ವಂ ಮೋಹಾದ್ದೇಹೇಽಪಿ ಕಲ್ಪ್ಯತೇ ॥ ೨೧ ॥**

**ಶುಕ್ತೌ ರಜತಮಿತ್ಯೇವಂ ಯಥಾ ವ್ಯಾಮುಹ್ಯತೇಽನ್ಯಥಾ ॥ ೨೧೩ ॥**

೨೧–೨೧೩. ಕಪ್ಪೆಯಚಿಪ್ಪಿನಲ್ಲಿ (ಅದು) ಬೆಳ್ಳಿ ಎಂದು ಹೇಗೆ ಮತ್ತೊಂದು ಪ್ರಕಾರವಾಗಿ ತಿಳಿಯುವ ಮೋಹವುಂಟಾಗುವದೋ ಹಾಗೆ ಜಡವೂ ಅನೃತವೂ ಮಿತಿಯುಳ್ಳದ್ದೂ ಆದ ದೇಹದ ಧರ್ಮ ಗಳು ಚಿದಾತ್ಮನಲ್ಲಿಯೂ ಮತ್ತು ಸತ್ಯ, ಜ್ಞಾನ, ಆನಂದ – ಎಂಬ ಸ್ವರೂಪವು ದೇಹದಲ್ಲಿಯೂ ಮೋಹದಿಂದ ಕಲ್ಪಿತವಾಗಿರುತ್ತದೆ.

## ವಿವೇಚನೆ

ಆತ್ಮನಲ್ಲಿ ದೇಹದ ಧರ್ಮಗಳನ್ನೂ ದೇಹದಲ್ಲಿ ಆತ್ಮನ ಧರ್ಮಗಳನ್ನೂ ಜನರು ಕಲ್ಪಿಸಿಕೊಂಡಿರುತ್ತಾರೆ – ಎಂಬುದು ವಾಕ್ಯದ ಒಟ್ಟರ್ಥ. ದೇಹವು ಸತ್ಯವೂ ಜ್ಞಾನವೂ ಆನಂದವೂ ಆಗಿದೆ – ಎಂದು ಯಾರೂ ತಿಳಿಯುವದಿಲ್ಲವಾದ್ದರಿಂದ ಶ್ಲೋಕದ ಅಕ್ಷರಾರ್ಥವನ್ನೇ ಹಿಡಿದು ವಾಕ್ಯಾರ್ಥವನ್ನು ಕಲ್ಪಿಸಬಾರದು. ದೇಹ, ಇಂದ್ರಿಯ, ಅಂತಃಕರಣ – ಇವುಗಳನ್ನು ಆತ್ಮನಲ್ಲಿ ಸಾಮಾನ್ಯಜನರು ಹೇಗೆ ಕಲ್ಪಿಸಿಕೊಂಡಿರುತ್ತಾರೆಂಬುದನ್ನು ಅಧ್ಯಾಸಭಾಷ್ಯದಲ್ಲಿರುವದನ್ನು ಇಲ್ಲಿ ಮನದಂದುಕೊಳ್ಳಬಹುದು. ಮುಖ್ಯವಾಗಿ ಅಹಂಕಾರದಲ್ಲಿ ಆತ್ಮನನ್ನು ಅಧ್ಯಾರೋಪಮಾಡಿಕೊಂಡು 'ನಾನು ದೇಹಾದಿಗಳುಳ್ಳವನು' ಎಂದೂ, ಸರ್ವಸಾಕ್ಷಿಯಾಗಿರುವ ಆತ್ಮನನ್ನು ಅನಾತ್ಮನಲ್ಲಿ ಕಲ್ಪಿಸಿಕೊಂಡು ನಾನು ಪ್ರಮಾತೃ, ಕರ್ತೃ, ಭೋಕ್ತೃ – ಎಂದೂ ಅರಿತುಕೊಳ್ಳುವದೇ ಮೋಹದ ಕೃತ್ಯ ಎಂದು ನಿಶ್ಚಯಿಸಿಕೊಂಡರೆ ಸಾಕಾಗಿದೆ.

## ಶುಕ್ತಿರಜತಾದಿಭ್ರಾಂತಿಯ ವಿಷಯಕ್ಕೆ ವಿವಿಧಾಭಿಪ್ರಾಯಗಳು

**ಸದೇವ ರೂಪ್ಯಂ ಚೇದ್ ಭಾತಿ ವಿಲಯಸ್ತೇ* ನ ಸಿಧ್ಯತಿ ॥ ೨೨ ॥**

**ನಾತ್ಯನ್ತಾಸತ್ ಪ್ರಕಾಶೇತ ನರಶೃಙ್ಗಾದಿವತ್ ಕ್ವಚಿತ್ ।**
**ಕಾನ್ತಾಕರಾದೌ ರಜತಮಿತಿ ಸ್ಯಾತ್ ಸ್ಮರಣಂ ಭ್ರಮೋ ॥ ೨೩ ॥**

**ತೇನೇದಂ ತುಲ್ಯಮಿತ್ಯೇವಂ ಸ್ಯಾತ್ ಸಾದೃಶ್ಯಾದ್ಯದಿ ಭ್ರಮಃ ।**
**ಪೀತಃ ಶಙ್ಖೋ ಗುಡಸ್ತಿಕ್ತ ಇತ್ಯಾದೌ ನಾಸ್ತಿ ತುಲ್ಯತಾ ॥ ೨೪ ॥**

**ತಾದಾತ್ಮ್ಯೇನ ಸ್ಫುರತಿ ಚೇದ್ ರಜತತ್ವೇನ ಶುಕ್ತಿಕಾ ।**
**ವಿಭ್ರಮೋ ನಿರಧಿಷ್ಠಾನೋ ಬಾಧೋ ನಿರವಧಿರ್ಭವೇತ್ ॥ ೨೫ ॥**

**ಬುದ್ಧಿಸ್ಥಿತಂ ಚೇದ್ರಜತಂ ಬಾಹ್ಯತ್ವೇನ ಪ್ರತೀಯತೇ ।**
**ಗುಞ್ಜಾದೌ ಜ್ವಲನಾರೋಪೇ ದೇಹದಾಹಃ ಪ್ರಸಜ್ಯತೇ ॥ ೨೬ ॥**

೨೨–೨೬. (೧) ಇದ್ದುಕೊಂಡೇ ಇರುವ ಬೆಳ್ಳಿಯು ತೋರುತ್ತದೆ ಎನ್ನುವದಾದರೆ (ಬಾಧೆಯಾದಾಗ) ಅದರ ನಾಶವು ನಿನ್ನ ಮತದಲ್ಲಿ ಏರ್ಪಡುವದೇ ಇಲ್ಲ. (೨) ಅತ್ಯಂತವಾಗಿ ಇಲ್ಲವೆನ್ನುವದಾದರೆ 'ಮನುಷ್ಯನು ಕೋಡು' ಮುಂತಾದದ್ದರಂತೆ ಯಾವಾಗಲೂ ತೋರದೆ ಇರಬೇಕಾಗುವದು. (೩) ಸ್ಮರಣೆಯೇ ಭ್ರಮೆಯಾದರೆ ಹೆಂಡತಿಯ

* 'ವಿಲಯಸ್ತು'– ಪಾಠಾಂತರ.

ಕ್ಕೆ ಮುಂತಾದವುಗಳಲ್ಲಿ ಬೆಳ್ಳಿಯಿದೆ ಎಂದು (ಬಾಧೆಯಲ್ಲಿ) ಜ್ಞಾನವಾಗ ಬೇಕಾದೀತು. (೪) ಹೋಲಿಕೆಯಿಂದ ಭ್ರಾಂತಿಯೆಂದಾದರೆ 'ಅದರಂತೆ ಇದು' ಎಂದು (ಬಾಧೆಯಾದಾಗ ಜ್ಞಾನವಾಗ)ಬೇಕಾಗುವದು; 'ಶಂಖವು ಹಳದಿಯಾಗಿದೆ', 'ಬೆಲ್ಲವು ಕಹಿ'-ಮುಂತಾದ (ಭ್ರಮೆಯಲ್ಲಿ ಯಾವ) ಸಾದೃಶ್ಯವೂ ಇಲ್ಲ(ವಲ್ಲ)! (೫) (ಕಪ್ಪೆಚಿಪ್ಪು, ಬೆಳ್ಳಿ - ಇವು ಗಳಿಗೆ ಜಾತಿವ್ಯಕ್ತಿಗಳಂತೆ) ತಾದಾತ್ಮ್ಯವಿರುವದರಿಂದ ಕಪ್ಪೆಯಚಿಪ್ಪು ಬೆಳ್ಳಿಯಂತೆ ಕಾಣುತ್ತದೆ- ಎನ್ನುವದಾದರೆ ಭ್ರಾಂತಿಯು (ಏತರಲ್ಲಿ ಆಗುತ್ತದೆಯೋ ಆ) ಅಧಿಷ್ಠಾನವು ಇಲ್ಲವೆಂದಾಗುವದು. (ಇದು ಬೆಳ್ಳಿಯಲ್ಲ ಎಂಬ) ಬಾಧೆಯು (ಮತ್ತೇನೆಂಬ) ಅವಧಿಯೇ ಇಲ್ಲ ದ್ದಾಗುವದು. (೬) ಜ್ಞಾನದಲ್ಲಿಯೇ ಇರುವ ಬೆಳ್ಳಿಯು ಹೊರಗೆ ಇರುವಂತೆ (ಭ್ರಾಂತಿಯಲ್ಲಿ) ತೋರುತ್ತಿರುತ್ತದೆ ಎಂದರೆ, ಗುಲಗಂಜಿ ಯೇ ಮುಂತಾದವುಗಳಲ್ಲಿ ಬೆಂಕಿ ಎಂಬ ಭ್ರಾಂತಿಯಾದಾಗ ದೇಹವೇ ಸುಡಬೇಕಾಗುವದು.

### ವಿವೇಚನೆ

ಒಂದನ್ನು ಇನ್ನೊಂದೆಂದು ತಪ್ಪಾಗಿ ತಿಳಿಯುವದೇ ಭ್ರಾಂತಿಯು. ಇದು ಹೇಗೆ ಆಗುತ್ತದೆ ಎಂಬುದರ ಬಗ್ಗೆ ವಾದಿಗಳಲ್ಲಿ ಅನೇಕ ಭಿನ್ನಭಿನ್ನಾಭಿಪ್ರಾಯ ಗಳಿವೆ. ಅಧ್ಯಾಸಭಾಷ್ಯದಲ್ಲಿ ಮೂರು ಪ್ರಕಾರಗಳನ್ನು ಮಾತ್ರ ಕೊಟ್ಟಿರುತ್ತದೆ. ಭ್ರಾಂತಿಯು ಹೇಗಾಗುವದೆಂಬ ವಿಷಯಕ್ಕೆ ಮತಭೇದವಿದ್ದರೂ " ಸರ್ವಥಾಪಿ ತು ಅನ್ಯಸ್ಯ ಅನ್ಯಧರ್ಮಾವಭಾಸತಾಂ ನ ವ್ಯಭಿಚರತಿ " (ಒಂದು ಮತ್ತೊಂದು ಧರ್ಮ ವುಳ್ಳದ್ದಾಗಿರುವದೆಂಬುದು-ಎಲ್ಲರಿಗೂ ಸಮಾನವಾಗಿದೆ) ಎಂದು ಆಚಾರ್ಯರು ಅಲ್ಲಿ ಬರೆದಿರುತ್ತಾರೆ. ಭ್ರಾಂತಿಪ್ರಕಾರಗಳನ್ನು **'ಖ್ಯಾತಿಬಾಧವಿಚಾರ'**ವೆಂಬ ಹೆಸರಿ ನಿಂದ ವಿಮರ್ಶೆಗೆ ತೆಗೆದುಕೊಂಡು ವ್ಯಾಖ್ಯಾನಪ್ರಸ್ಥಾನಗಳಲ್ಲಿಮಾತ್ರ ವಿಮರ್ಶೆಮಾಡಿ **'ಅನಿರ್ವಚನೀಯ ಖ್ಯಾತಿ'**ಯೇ ಸಿದ್ಧಾಂತವೆಂದು ನಿರ್ಣಯಿಸಿರುವದು ಈಚಿನ ಕೆಲವು ವೇದಾಂತಗ್ರಂಥಗಳಲ್ಲಿ ಕಂಡುಬರುತ್ತದೆ; ಮಿಕ್ಕ ಪ್ರಸ್ಥಾನಗಳ ಭಾಷ್ಯ ಕಾರರೂ ಈ ವಾದವನ್ನು ತಮ್ಮ ತಮ್ಮ ದೃಷ್ಟಿಯಿಂದ ಮುಂದಕ್ಕೆ ಬೆಳೆಯಿಸುತ್ತಾ ಹೋಗಿರುತ್ತಾರೆ. ಆದರೆ ಅದ್ವೈತಸಿದ್ಧಾಂತಕ್ಕೆ ಒಂದು ಪರಮಾರ್ಥದಲ್ಲಿ ಮಿಕ್ಕ ದ್ದೆಲ್ಲವೂ ಅಧ್ಯಾಸವಾಗಿದೆ ಎಂಬ ವಿಷಯದಲ್ಲಿ ಮಾತ್ರ ಆಗ್ರಹವಿದೆಯೇ ಹೊರತು ಮಿಕ್ಕ ವಿಚಾರಗಳಲ್ಲಿ ಆದರವಿಲ್ಲ. ವ್ಯವಹಾರದಲ್ಲಿಯೂ ಒಂದು ಪರಮಾರ್ಥ ವಸ್ತುವಿನಲ್ಲಿ ಇನ್ನೊಂದನ್ನು ಆರೋಪಿಸುತ್ತಾರೆ - ಎಂಬ ಸಿದ್ಧಾಂತವನ್ನು ಒಪ್ಪಿಯೇ ಪರಮಾರ್ಥಸತ್ಕಾರ್ಯವಾದ, ಅಸತ್ಕಾರ್ಯವಾದಗಳನ್ನು ಭಾಷ್ಯಕಾರರು ವಿಮರ್ಶಿ ಸಿರುತ್ತಾರೆ.

## ಭ್ರಾಂತಿಯ ಲಕ್ಷಣ

**ಯುಕ್ತಿಹೀನಪ್ರಕಾಶತ್ವಾತ್ ಭ್ರಾನ್ತೇರ್ನ ಹ್ಯಸ್ತಿ ಲಕ್ಷಣಮ್ ।**
**ಯದಿ ಸ್ಯಾಲ್ಲಕ್ಷಣಂ ಕಿಞ್ಚಿದ್ ಭ್ರಾನ್ತಿರೇವ ನ ಸಿಧ್ಯತಿ ॥ ೨೭ ॥**

೨೭. ಯುಕ್ತಿಯಿಲ್ಲದ ತೋರಿಕೆಯಾದ್ದರಿಂದ ಭ್ರಾಂತಿಗೆ ಲಕ್ಷಣವೇ ಇಲ್ಲ. ಯಾವದಾದರೊಂದು ಲಕ್ಷಣವಿದ್ದಿದ್ದರೆ ಭ್ರಾಂತಿ ಯೆಂಬುದೇ ಸಿದ್ಧವಾಗಲಾರದು.

### ವಿವೇಚನೆ

ಕಪ್ಪೆಯಚಿಪ್ಪಿನಲ್ಲಿ ಆಗುವ ಬೆಳ್ಳಿಯ ಭ್ರಾಂತಿಯನ್ನು ವಿಧವಿಧವಾಗಿ ವಿಕಲ್ಪಿಸಿ ಈಗ ಸಿದ್ಧಾಂತವನ್ನು ಹೇಳುತ್ತಾರೆ. ಯುಕ್ತಿಯಿಲ್ಲದಿದ್ದರೂ ತೋರುವದೇ ಭ್ರಾಂತಿ. ಆದ್ದರಿಂದ ಅದಕ್ಕೆ ಇಂಥದ್ದೆಂಬ ಲಕ್ಷಣವನ್ನು ಹೇಳುವದೇ ಸರಿಯಲ್ಲ – ಎಂದು ಭಾವ. ಇಲ್ಲಿ 'ಭ್ರಾಂತಿ' ಎಂಬ ಶಬ್ದವನ್ನು ಭ್ರಾಂತಿಯಿಂದ ತೋರುವ ವಸ್ತು – ಎಂಬರ್ಥದಲ್ಲಿಯೇ ಪ್ರಯೋಗಿಸಬೇಕು. ಮಾಯೆ, ಅವಿದ್ಯೆ–ಇವುಗಳನ್ನು ಪ್ರಕೃತಿಗೆ ಪರ್ಯಾಯವಾಗಿ (೬–೨೩, ೨೪) ಪ್ರಯೋಗಿಸಿರುವದರಿಂದಲೂ ಮಾಯೆ ಎಂಬುದು ಪರಮೇಶ್ವರನ ಶಕ್ತಿಯೆಂದು ವರ್ಣಿಸಿರುವದರಿಂದಲೂ ಗ್ರಂಥಕರ್ತರು ಪಂಚಪಾದಿಕಾ ಕಾರರಂತೆ 'ಅಧ್ಯಸ್ತ, ಆರೋಪಿತ' ಎಂಬರ್ಥದಲ್ಲಿಯೇ ಪ್ರಯೋಗಿಸಿರುತ್ತಾ ರೆಂಬುದು ಸ್ಪಷ್ಟ.

## ಕಲ್ಪನೆಗೆ ದೃಷ್ಟಾಂತಗಳು

**ಜಲಚನ್ದ್ರವದೇಕಸ್ಮಿನ್ ನಿರ್ಭಯೇ ರಜ್ಜುಸರ್ಪವತ್ ।**
**ಪ್ರತೀಯತೇ ಯಥಾ ಸ್ವರ್ಣೇ ಕಾರಣೇ ಕಟಕಾದಿವತ್ ॥ ೨೮ ॥**

**ಉಪಾತ್ತೇ ರೂಪ್ಯವಚ್ಛುಕ್ತೌ ವ್ಯಾಪ್ತೇ ಯಕ್ಷಪುರೀವ ಖೇ ।**
**ರಶ್ಮ್ಯಮ್ಬುವತ್ ಸ್ಫುರದ್ರೂಪೇ ಸ್ಥಾಣೌ ಚೋರವದಕ್ರಿಯೇ ॥ ೨೯ ॥**

**ಅಸತ್ಕಲ್ಪಮಿದಂ ವಿಶ್ವಂ ಆತ್ಮನ್ಯಾರೋಪ್ಯತೇ ಭ್ರಮಾತ್ ॥ ೨೯½ ॥**

೨೮–೨೯½. ಒಬ್ಬನೇ ಆಗಿರುವವನಲ್ಲಿ (ಒಬ್ಬ ಚಂದ್ರನಲ್ಲಿ) ಜಲಚಂದ್ರ ರುಗಳಂತೆಯೂ, ನಿರ್ಭಯನಾದವನಲ್ಲಿ (ಹೆದರಿಕೆಗೆ ಕಾರಣವಿಲ್ಲದ ಹಗ್ಗದಲ್ಲಿ) ರಜ್ಜುಸರ್ಪವು ತೋರುವಂತೆಯೂ, ಕಾರಣನಾಗಿರುವವ ನಲ್ಲಿ ಚಿನ್ನದಲ್ಲಿ ಕಡಗವೇ ಮುಂತಾದದ್ದರಂತೆಯೂ, (ಸ್ವೀಕರಿಸಿದ =)

ಸ್ವಚ್ಛನಾಗಿರುವವನಲ್ಲಿ ಕಪ್ಪೆಯ ಚಿಪ್ಪಿನಲ್ಲಿ ಬೆಳ್ಳಿಯಂತೆಯೂ, (ಎಲ್ಲೆಲ್ಲಿಯೂ) ವ್ಯಾಪಿಸಿಕೊಂಡಿರುವಾತನಲ್ಲಿ, ಆಕಾಶದಲ್ಲಿ (ಕಲ್ಪಿತವಾದ) ಯಕ್ಷನಗರಿಯಂತೆಯೂ, ಬೆಳಗುತ್ತಿರುವ ಸ್ವರೂಪನಾದವನಲ್ಲಿ (ಸೂರ್ಯನ) ರಶ್ಮಿಗಳಲ್ಲಿ (ಕಲ್ಪಿತವಾಗಿರುವ) ಬಿಸಿಲುಕುದುರೆಯ ನೀರಿನಂತೆಯೂ, ಕ್ರಿಯಾರಹಿತನಾದವನಲ್ಲಿ ಮೋಟುಮರದಲ್ಲಿ (ಕಲ್ಪಿತವಾಗಿರುವ) ಕಳ್ಳನಂತೆಯೂ, ಅಸತ್ಕಲ್ಪವಾದ (ಬರಿಯ ತೋರಿಕೆಯ) ಈ ವಿಶ್ವವು ಭ್ರಾಂತಿಯಿಂದ ಆತ್ಮನಲ್ಲಿ ಆರೋಪಿತವಾಗಿರುತ್ತದೆ.

## ವಿವೇಚನೆ

ಆತ್ಮನು ಒಬ್ಬನೇ ಆದರೂ ಅನೇಕರು ಆತ್ಮರೆಂದೂ, ಅಭಯರೂಪನಾಗಿದ್ದರೂ ಭಯಕಾರಣನೆಂದೂ, ಕಾರಣಮಾತ್ರಸ್ವರೂಪನಾಗಿದ್ದರೂ ಅವನಿಂದ ಜಗದ್ರೂಪಕಾರ್ಯವಾಗಿರುವಂತೆಯೂ, ಇದ್ದಂತೆ ಇದ್ದರೂ ಬೇರೆಯ ರೂಪವುಳ್ಳವನಂತೆಯೂ, ಸರ್ವಗತನಾಗಿದ್ದರೂ ಅವನ ಒಂದು ಕಡೆಯಲ್ಲಿ ನಾಮರೂಪ ಜಗತ್ತು ತೋರುವದೆಂತಲೂ, ಸ್ವಯಂಪ್ರಕಾಶನಾಗಿದ್ದರೂ ಅವನಲ್ಲಿ ಕಾಮಪೂರ್ತಿಯನ್ನು ಮಾಡುವ ವಸ್ತುಗಳಿರುವವೆಂಬಂತೆಯೂ, ಕೂಟಸ್ಥನಾಗಿದ್ದರೂ ಕ್ರಿಯಾಕರ್ತನಾಗಿರುವಂತೆಯೂ ಅಜ್ಞರು ಭ್ರಾಂತಿಯಿಂದ ಕಲ್ಪಿಸಿಕೊಂಡಿರುತ್ತಾರೆ.

ಆತ್ಮನಲ್ಲಿ ಅನಾತ್ಮವನ್ನೂ ಅನಾತ್ಮದಲ್ಲಿ ಆತ್ಮನನ್ನೂ ಕಲ್ಪಿಸಿಕೊಂಡಿರುವದಕ್ಕೆ ಸೂತ್ರಭಾಷ್ಯದಲ್ಲಿ ಅನೇಕ ದೃಷ್ಟಾಂತಗಳನ್ನು ಕೊಟ್ಟಿರುತ್ತಾರೆ. ಇಲ್ಲಿ ಅಲ್ಲಿರುವ ಕೆಲವನ್ನು ಕೊಟ್ಟಿಲ್ಲ. ಅಲ್ಲಿಲ್ಲದ ಕೆಲವನ್ನು ಕೊಟ್ಟಿದೆ. ಭ್ರಾಂತಿಯಿಂದ ಆರೋಪಿತವಾದ ವಸ್ತುವಿನ ಗುಣವಾಗಲಿ ರೂಪವಾಗಲಿ ಒಂದಿಷ್ಟೂ ಅದು ಏತರಲ್ಲಿ ಆರೋಪಿತವಾಗಿರುತ್ತದೆಯೋ ಅದಕ್ಕೆ ಅಂಟುವದಿಲ್ಲ – ಎಂದು ಇಟ್ಟುಕೊಂಡರೆ ದೃಷ್ಟಾಂತಗಳನ್ನು ಕೊಟ್ಟದ್ದರ ಆಶಯವನ್ನು ಹಿಡಿದುಕೊಂಡಂತೆ ಆಗುವದು.

## ಪ್ರತ್ಯಭಿಜ್ಞೆಯಿಂದಾಗುವ ಫಲ

**ಸ್ವಯಂಪ್ರಕಾಶಂ ಸದ್ರೂಪಂ ಭ್ರಾನ್ತಿಬಾಧವಿವರ್ಜಿತಮ್ ॥ ೩೦ ॥**

**ಪ್ರತ್ಯಭಿಜ್ಞಾಯತೇ ವಸ್ತು ಪ್ರಾಗ್ವನ್ಮೋಹೇ ವ್ಯಪೋಹಿತೇ ।**
**ದೇಹಾದ್ಯುಪಾಧೌ ನಿರ್ಧೂತೇ ಸ್ಯಾದಾತ್ಮೈವ ಮಹೇಶ್ವರಃ ॥ ೩೧ ॥**

೩೦–೩೧. ಸ್ವಯಂಪ್ರಕಾಶವಾಗಿರುವ (ಪರಮಾರ್ಥ) ಸದ್ರೂಪವಾಗಿರುವ, ಭ್ರಾಂತಿಬಾಧೆಗಳಿಲ್ಲದ (ಪರಮಾರ್ಥ)ವಸ್ತುವು,

ಮೋಹವು ತೊಲಗಲಾಗಿ ನನ್ನಿವಂತೆಯೇ ಪ್ರತ್ಯಭಿಜ್ಞಾತನಾಗುತ್ತಾನೆ. ದೇಹವೇ ಮುಂತಾದ ಉಪಾಧಿಯು ಹೋಗಿಬಿಡಲಾಗಿ ಆತ್ಮನೇ ಮಹೇಶ್ವರನಾಗುವನು.

## ವಿವೇಚನೆ

ಮೋಹವಿರುವವರೆಗೆ ಆತ್ಮನು ಆ ಸ್ವಲ್ಪನಾದ ಜಗತ್ತಿನಂತೆಯೂ ಸಂಸಾರಿಗಳಾದ ಅನೇಕಾತ್ಮರುಗಳಂತೆಯೂ ತೋರುತ್ತಿರುತ್ತಾನೆ. ಆದರೆ ತತ್ತ್ವಜ್ಞಾನದಿಂದ ಭ್ರಾಂತಿಯು ತೊಲಗಲಾಗಿ 'ನನಗೆ ದೇಹವೇ ಮುಂತಾದ ಯಾವ ಉಪಾಧಿಯೂ ಇಲ್ಲ, ನಾನು ಪರಮೇಶ್ವರನೇ' ಎಂದು ಅರಿತುಕೊಳ್ಳುತ್ತಾನೆ. 'ಆ ಪರಮಾತ್ಮನಲ್ಲಿ ನಿಜವಾಗಿ ಯಾವ ಭ್ರಾಂತಿಯೂ ಇಲ್ಲ, ಯಾವದೂ ಬಾಧಿತನಾಗತಕ್ಕದ್ದು ಇರುವದಿಲ್ಲ' ಎಂಬ ನಿಶ್ಚಯವು ಆಗಿಬಿಡುವದು.

ಇಲ್ಲಿ ಭ್ರಾಂತಿಯು ಬಾಧಿತವಾಗುವದು, ಪರಮಾರ್ಥವು ತೋರಿಕೊಳ್ಳುವದು -ಎಂಬ ಅತಿಶಯವೂ ಪರಮಾರ್ಥವಸ್ತುವಿನಲ್ಲಿಲ್ಲವೆಂದು ಹೇಳಿದಂತೆ ಆಗಿದೆ. ಇದು ಹೇಗೆಂಬುದಕ್ಕೆ ಉಪಪತ್ತಿಯನ್ನು ಮಾತ್ರ ಕೊಟ್ಟಂತೆ ಕಾಣುತ್ತಿಲ್ಲ. ಟೀಕೆಯನ್ನು ನೋಡಿರಿ.

**ಸ್ಮೃತಿಃ ಪ್ರತ್ಯಕ್ಷಮೈತಿಹ್ಯಮಿತ್ಯಾದೀನ್ಯಪರಾಣ್ಯಪಿ ।**
**ಪ್ರಮಾಣಾನ್ಯಾಪ್ತವಾಗಾಹ ಪ್ರತ್ಯಭಿಜ್ಞಾಪ್ರಸಿದ್ಧಯೇ ॥ ೩೨ ॥**

೩೨. ಆಪ್ತವಾಕ್ಯವು-ಸ್ಮೃತಿ, ಪ್ರತ್ಯಕ್ಷ, ಐತಿಹ್ಯ- ಮುಂತಾದ ಬೇರೆಯ ಪ್ರಮಾಣಗಳನ್ನೂ- ಪ್ರತ್ಯಭಿಜ್ಞೆಯನ್ನು ಸಾಧಿಸಿಕೊಡುವವಕ್ಕಾಗಿ ಹೇಳಿರುತ್ತದೆ.

## ವಿವೇಚನೆ

स्मृतिः प्रत्यक्षमैतिह्यम् । अनुमानश्चतुष्टयम् ।
एतैरादित्यमण्डलम् । सर्वैरेव विधास्यते ॥ ತೈ. ಆ. ೧-೨-೧

[ಸ್ಮೃತಿ, ಪ್ರತ್ಯಕ್ಷ, 'ಹೀಗೆ ಇದೆ ಎನ್ನುವರು' ಎಂಬ ಐತಿಹ್ಯ, ಅನುಮಾನ- ಎಂಬಿವು ನಾಲ್ಕು. ಈ ಎಲ್ಲ ಪ್ರಮಾಣಗಳಿಂದಲೂ ಆದಿತ್ಯಮಂಡಲವು ಎಲ್ಲರಿಗೂ ಗೊತ್ತಾಗಿರುವದು.]

-ಎಂಬ ಶ್ರುತಿಯಲ್ಲಿ ಹೇಳಿರುವ ಪ್ರಮಾಣಗಳೆಲ್ಲಕ್ಕೂ ಪ್ರತ್ಯಭಿಜ್ಞಾನವೇ ಗುರಿ. ಆದ್ದರಿಂದ ಪ್ರತ್ಯಭಿಜ್ಞಾನವು ಪ್ರಮಾಣವೆಂಬ ಬಗೆಗೆ ಯಾವ ಸಂಶಯವೂ ಇಲ್ಲ- ಎಂದು ಭಾವ.

ಇಲ್ಲಿ ವೇದವನ್ನು 'ಆಪ್ತವಾಕ್ಯ' ಎಂದು ಕರೆದಿರುವದು ವ್ಯವಹಾರದಲ್ಲಿ ಭಾಟ್ಟರೀತಿಯನ್ನೊಪ್ಪುವ ವೇದಾಂತಿಗಳಿಗೆ ಒಪ್ಪಲ್ಲ. ವೇದವನ್ನು ಆಪ್ತವಾಕ್ಯ (ಬಲ್ಲವರ ನುಡಿ) ಎಂದು ಭಾವಿಸುವವರು ಆಗಮಿಕರು. ಪೂರ್ವಮೀಮಾಂಸಕರೂ ವ್ಯವಹಾರದೃಷ್ಟಿಯಿಂದ ವೇದಾಂತಿಗಳೂ ವೇದವು ಅಪೌರುಷೇಯವೆಂದೇ ಹೇಳುತ್ತಾರೆ. ಇದಲ್ಲದೆ ಪ್ರಮಾಣಪ್ರಮೇಯವ್ಯವಹಾರವು ಅವಿದ್ಯಾಕೃತವಾಗಿದೆ ಎಂಬುದು ಶಂಕರಭಗವತ್ಪಾದರ ಮತ. ಆ ವಿಷಯವನ್ನಂತೂ ಮಾನಸೋಲ್ಲಾಸದಲ್ಲಿ ಎಲ್ಲಿಯೂ ಪರಾಮರ್ಶಿಸಿರುವದೇ ಇಲ್ಲ. ಪೀಠಿಕೆಯನ್ನು ನೋಡಿರಿ.

**ಇತಿ ಶ್ರೀದಕ್ಷಿಣಾಮೂರ್ತಿಸ್ತೋತ್ರಾರ್ಥಪ್ರತಿಪಾದಕೇ ।**
**ಪ್ರಬನ್ಧೇ ಮಾನಸೋಲ್ಲಾಸೇ ಸಪ್ತಮೋಲ್ಲಾಸಸಙ್ಗ್ರಹಃ ॥ ೩೩ ॥**

೩೩. ಇಂತು ಶ್ರೀದಕ್ಷಿಣಾಮೂರ್ತಿಸ್ತೋತ್ರದ ಅರ್ಥವನ್ನು ಪ್ರತಿಪಾದಿಸುವ ಪ್ರಬಂಧವಾದ ಮಾನಸೋಲ್ಲಾಸದಲ್ಲಿ ಏಳನೆಯ ಉಲ್ಲಾಸದ ಸಂಗ್ರಹವು ಮುಗಿಯಿತು.

---

# ೮. ಜಗತ್ತಿನಲ್ಲಿ ದೃಶ್ಯಗಳಿಗಿರುವ ಪರಸ್ಪರಸಂಬಂಧ

## ಅವತರಣಿಕೆ

**ಪ್ರಕಾಶವ್ಯತಿರೇಕೇಣ ಪದಾರ್ಥಃ ಕೋಽಪಿ ನಾಸ್ತಿ ಚೇತ್ ।**
**ಪರಮಾರ್ಥೋಪದೇಶಾನ್ತೋ ವ್ಯವಹಾರಃ ಕಥಂ ಭವೇತ್ ॥ ೧ ॥**

**ಕಸ್ಯ ಬನ್ಧಶ್ಚ ಮೋಕ್ಷಶ್ಚ ಬಧ್ಯತೇ ಕೇನ ಹೇತುನಾ ।**
**ಮಾಯಾಯಾ ಲಕ್ಷಣಂ ಕಿಂ ಸ್ಯಾತ್ ಇತ್ಯೇವಂ ಪರಿಪೃಚ್ಛತಃ ॥ ೨ ॥**

**ಪ್ರಶ್ನಃ ಸ್ಯಾದುತ್ತರಂ ವಕ್ತುಂ ಪ್ರತಿಪತ್ತುಂ ಸುಖೇನ ಚ ।**
**ಉಕ್ತೋಽರ್ಥಃ ಸಪ್ತಭಿಃ ಶ್ಲೋಕೈಃ ಪುನಃ ಸಂಕ್ಷಿಪ್ಯ ಕಥ್ಯತೇ ॥ ೩ ॥**

**ಪೌನರುಕ್ತ್ಯಂ ನ ದೋಷೋಽತ್ರ ಶಬ್ದೇನಾರ್ಥೇನ ವಾ ಭವೇತ್ ।**
**ಅಭ್ಯಾಸೇನ ಗರೀಯಸ್ತ್ವಮರ್ಥಸ್ಯ ಪ್ರತಿಪಾದ್ಯತೇ ॥ ೪ ॥**

೧–೪. (ಚೈತನ್ಯದ) ಬೆಳಕೊಂದು ಹೊರತು (ಮತ್ತೆ) ಯಾವ ಪದಾರ್ಥವೂ ಇಲ್ಲವಾದರೆ ಪರಮಾರ್ಥೋಪದೇಶದವರೆಗಿನ ವ್ಯವಹಾರವು ಹೇಗೆ ಆಗಬೇಕು ? ಯಾವನಿಗೆ ಬಂಧವೂ ಮೋಕ್ಷವೂ (ಆಗುವವು) ? ಯಾವ ಕಾರಣದಿಂದ ಬದ್ಧನಾಗುತ್ತಾನೆ? ಮಾಯೆಯ ಲಕ್ಷಣವು ಯಾವದಿರಬಹುದು?–ಎಂದಿಂತು ಕೇಳಿಕೊಳ್ಳುವ (ಶಿಷ್ಯನ) ಪ್ರಶ್ನೆ ಉಂಟಾಗಬಹುದು. (ಇದಕ್ಕೆ) ಉತ್ತರವನ್ನು ಹೇಳುವದಕ್ಕೂ (ವಿಷಯವನ್ನು) ಸುಲಭವಾಗಿ ಅರಿತುಕೊಳ್ಳುವದಕ್ಕಾಗಿಯೂ (ಹಿಂದಿನ) ಏಳು ಶ್ಲೋಕಗಳಲ್ಲಿ ಹೇಳಿರುವದರ ವಿಷಯವನ್ನು ಮತ್ತೆ (ಈ ಶ್ಲೋಕದಲ್ಲಿ) ಸಂಗ್ರಹಿಸಿ ಹೇಳಲಾಗುವದು.

ಮತ್ತೆ (ಇದನ್ನೇ) ಶಬ್ದದಿಂದಲಾಗಲಿ ಅರ್ಥದಿಂದಲಾಗಲಿ ಹೇಳಿದರೂ ತಪ್ಪಾಗಲಾರದು ; (ಏಕೆಂದರೆ) ಮತ್ತೆಮತ್ತೆ ಹೇಳುವದರಿಂದ ವಿಷಯವು ಬಹಳ ಮುಖ್ಯವಾದದ್ದೆಂದು (ಅದರ) ಹಿರಿಮೆಯನ್ನೇ ಹೇಳಿದಂತಾಗುತ್ತದೆ.

## ವಿವೇಚನೆ

[illegible] ತತ್ತ್ವಾರ್ಥವನ್ನು ನೋಡಿದರೆ [illegible] ಪದ್ಯದ [illegible] ಇಲ್ಲಿ ಹೇಳಿ[illegible] ಒಳಗೊಳ್ಳ[illegible] ವಿಷಯ[illegible] ಇಲ್ಲಿ ಹಿಂದಿಟ್ಟಿದೆ- [illegible] ಅಭಿಪ್ರಾಯಪಡಬೇಕು. ಅದ್ವ[illegible] ಕಲ್ಪನ [illegible] ಒದಗಿಸುತ್ತಾರೆ. ಏನು ಹಿಂದಿನ [illegible] ಸಂಗ್ರಹವು ಇಲ್ಲಿದೆಯೆ ?– ಎಂಬುದನ್ನು [illegible].

ವಿಶ್ವಂ ಪಶ್ಯತಿ ಕಾರ್ಯಕಾರಣತಯಾ ಸ್ವಸ್ವಾಮಿಸಂಬಂಧತಃ
ಶಿಷ್ಯಾಚಾರ್ಯತಯಾ ತಥೈವ ಪಿತೃಪುತ್ರಾದ್ಯಾತ್ಮನಾ ಭೇದತಃ ।
ಸ್ವಪ್ನೇ ಜಾಗ್ರತಿ ವಾ ಯ ಏಷ ಪುರುಷೋ ಮಾಯಾಪರಿಭ್ರಾಮಿತಃ
ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ ಶ್ರೀದಕ್ಷಿಣಾಮೂರ್ತಯೇ ॥

೮. ಸ್ವಪ್ನದಲ್ಲಿಯೇ ಆಗಲಿ, ಎಚ್ಚರದಲ್ಲಿಯೇ ಆಗಲಿ, ಮಾಯೆಯಿಂದ ಪರಿಭ್ರಮೆಯನ್ನು ಹೊಂದಿದ ಯಾವ ಈ ಪುರುಷನು ಕಾರ್ಯಕಾರಣಭಾವ, ಸ್ವಸ್ವಾಮಿಭಾವ, ಶಿಷ್ಯಾಚಾರ್ಯಸಂಬಂಧ, ತಂದೆಮಗ– ಮುಂತಾದವರ ಸಂಬಂಧ– ಹೀಗೆ (ಬಗೆಬಗೆಯ ಸಂಬಂಧವಿರುವಂತೆ) ವಿಶ್ವವನ್ನು ಭಿನ್ನವಾಗಿ ಕಾಣುತ್ತಿರುವನೋ ಆ ಗುರುಮೂರ್ತಿಯಾದ ಶ್ರೀದಕ್ಷಿಣಾಮೂರ್ತಿಗೆ ಈ ನಮಸ್ಕಾರ !

ಅಸ್ಯಾಯಮಭಿಸನ್ಧಿಃ–

**ಸ್ವಯಂಪ್ರಕಾಶೇ ಸರ್ವಾತ್ಮನ್ಯೇಕಸ್ಮಿನ್ ಪರಮೇಶ್ವರೇ ।**
**ಕಾರ್ಯಕಾರಣಸಮ್ಬನ್ಧಾದ್ಯನೇಕವಿಧಕಲ್ಪನಾ ॥ ೫ ॥**
**ರಾಹೋಃ ಶಿರಃ ಸುಷಿಃ ಖಸ್ಯ ಮಮಾಽಽತ್ಮಾ ಪ್ರತಿಮಾವಪುಃ ।**
**ಇತ್ಯಾದಿಕಲ್ಪನಾತುಲ್ಯಾ ನ ಪೃಥಗ್ ವಸ್ತುಗೋಚರಾ ॥ ೬ ॥**
**ಉಪಾಸ್ಯೋಪಾಸಕತ್ವೇನ ಗುರುಶಿಷ್ಯಕ್ರಮೇಣ ಚ ।**
**ಸ್ವಾಮಿಭೃತ್ಯಾದಿರೂಪೇಣ ಕ್ರೀಡತಿ ಸ್ವೇಚ್ಛಯೇಶ್ವರಃ ॥ ೭ ॥**
**ಪಿತರಂ ಪ್ರತಿ ಪುತ್ರೋ ಯಃ ಪುತ್ರಂ ಪ್ರತಿ ಪಿತೈವ ಸಃ ।**
**ಏಕ ಏವ ಹಿ ನಾನೇವ ಕಲ್ಪ್ಯತೇ ಶಬ್ದಮಾತ್ರತಃ ॥ ೮ ॥**
**ತಸ್ಮಾತ್ ಪ್ರಕಾಶ ಏವಾಸ್ತಿ ಪರಮಾರ್ಥನಿರೂಪಣೇ ।**
**ಭೇದಪ್ರತೀತಿರ್ಮಿಥ್ಯೈವ ಮಾಯಯಾಽಽತ್ಮನಿ ಕಲ್ಪಿತಾ ॥ ೯ ॥**

೫–೯. ಈ ಶ್ಲೋಕದ ಆಶಯವನ್ನು (ಹೇಳುವೆವು) :– ಪರಮೇಶ್ವರನು ಒಬ್ಬನೇ ಆಗಿದ್ದು ತಾನುತಾನೇ ಬೆಳಗುತ್ತಾ ಸದ್ರೂಪ

ನಾಗಿದ್ದರೂ ಕಾರ್ಯಕಾರಣಸಂಬಂಧವೇ ಮುಂತಾದ ಬಗೆಬಗೆಯ ಪ್ರಕಾರವಾದ ಕಲ್ಪನೆಯು ರಾಹುವಿನ ತಲೆ, ಆಕಾಶದ ದೊಗರು, ನನ್ನ ಆತ್ಮ, ಪ್ರತಿಮೆಯ ಶರೀರ- ಮುಂತಾದ ಕಲ್ಪನೆಗೆ ಸಮಾನವೇ ಹೊರತು ಮತ್ತೊಂದು ವಸ್ತುವನ್ನು ವಿಷಯವಾಗಿಟ್ಟುಕೊಂಡಿರುವದಲ್ಲ. ಉಪಾಸ್ಯ, ಉಪಾಸಕ- ಎಂಬ ಸಂಬಂಧದಿಂದ ; ಗುರು, ಶಿಷ್ಯ- ಎಂಬ ರೀತಿಯಿಂದಲೂ ಒಡೆಯ, ಆಳು- ಮುಂತಾದ (ಸಂಬಂಧದ) ರೂಪದಿಂದಲೂ ಈಶ್ವರನು ತನ್ನ ಇಚ್ಛೆಯಂತೆ ಆಡುತ್ತಿರುವನು. ತಂದೆಗೆ ಯಾವನು ಮಗನೋ, ಅವನು (ತನ್ನ) ಮಗನಿಗೆ ತಂದೆಯೇ ಆಗಿರುತ್ತಾನೆ. ಒಬ್ಬನೇ ಬರಿಯ ಶಬ್ದದಿಂದ ಬಗೆಬಗೆಯಾಗಿ ಕಲ್ಪಿತನಾಗಿರುತ್ತಾನೆ. ಹೀಗಿರುವದರಿಂದ ಪರಮಾರ್ಥ (ವೇನೆಂದು ಪರೀಕ್ಷಿಸಿ) ನೋಡುವಲ್ಲಿ (ಚೈತನ್ಯ)ಪ್ರಕಾಶವೊಂದೇ (ನಿಜವಾಗಿ) ಇರುತ್ತದೆ, ಭೇದದ ತೋರಿಕೆಯು ಮಿಥ್ಯಾರೂಪದಿಂದಲೇ ಮಾಯೆಯಿಂದ ಕಲ್ಪಿತವಾಗಿರುತ್ತದೆ.

## ವಿವೇಚನೆ

ಇಲ್ಲಿ 'ಯಸ್ಯೈವ ಸ್ಫುರಣಂ ಸದಾತ್ಮಕಮ್ ' (ಶ್ಲೋಕ ೩) ಎಂಬ ಶ್ಲೋಕದಲ್ಲಿ ಪ್ರಕಾಶರೂಪವಾದ ಚೈತನ್ಯವೊಂದೇ ಪರಮಾರ್ಥವೆಂದು ಸೂಚಿಸಿದ್ದನ್ನು 'ತಸ್ಮಾದೇಕಪ್ರಕಾಶತ್ವಂ ಸರ್ವಾತ್ಮತ್ವಮಿತಿ ಸ್ಥಿತಮ್' (೩-೩೪೮) ಎಂಬ ಶ್ಲೋಕದಲ್ಲಿ ಪ್ರಕಾಶವೊಂದೇ ಸರ್ವಾತ್ಮತ್ವ- ಎಂದು ಹೇಳಿರುವದನ್ನು ಮನಸ್ಸಿನಲ್ಲಿಟ್ಟುಕೊಂಡು ಆಕ್ಷೇಪಸಮಾಧಾನಗಳನ್ನು ಹೇಳಿದೆ ಎಂಬುದು ಸ್ಪಷ್ಟ.

ಆತ್ಮಚೈತನ್ಯವೊಂದೇ ಪರಮಾರ್ಥವಾದರೆ ವ್ಯವಹಾರದಲ್ಲಿ ಭೇದವು ಕಾಣುತ್ತಿರುವದಕ್ಕೇನು ಗತಿ ?- ಎಂಬ ಆಕ್ಷೇಪವನ್ನು ತೆಗೆದು 'ರಾಹುವಿನ ತಲೆ' ಎಂದು ಮುಂತಾಗಿ ಒಂದೇ ವಸ್ತುವಿನಲ್ಲಿ ಬಳಕೆಯಲ್ಲಿರುವ ಎರಡು ಶಬ್ದಗಳನ್ನೂ ತಂದೆ ಮಕ್ಕಳೇ ಮುಂತಾದ ಅಪೇಕ್ಷಿಕಸಂಬಂಧವುಳ್ಳ ವಸ್ತುಗಳಲ್ಲಿರುವ ಶಬ್ದವ್ಯವಹಾರವನ್ನೂ ದೃಷ್ಟಾಂತವಾಗಿ ಕೊಟ್ಟಿರುವದು ಸರಿಯೆಂತ ನಮಗೆ ತೋರುವದಿಲ್ಲ. ಏಕೆಂದರೆ ಆ ಉದಾಹರಣೆಗಳಲ್ಲಿ ವಸ್ತುವೊಂದೇ ಇದ್ದು, ಎರಡು ಶಬ್ದಗಳು ಬಳಕೆಯಾಗಿರುವದು ಮಾತ್ರವೇ ಹೊರತು ವಸ್ತುಗಳು ಬೇರೆಬೇರೆಯಾಗಿ ತೋರುವದಕ್ಕೆ ಯಾವ ಉಪಪತ್ತಿಯನ್ನೂ ತೋರಿಸುವದಕ್ಕಾಗುವದಿಲ್ಲ. ಎಚ್ಚರದಲ್ಲಿ ಕನಸಿನಂತೆಯೇ ವಸ್ತುಗಳು ಪರಸ್ಪರಸಂಬಂಧವುಳ್ಳವುಗಳಂತೆ ತೋರಿದರೂ ಸುಷುಪ್ತಿಯಲ್ಲಿ ಆತ್ಮನೊಬ್ಬನೇ ಇರುವದರಿಂದ ಎಚ್ಚರದ ವಿವಿಧಪದಾರ್ಥಗಳೂ ಅವುಗಳಿಗಿರುವ ಪರಸ್ಪರ

ಸಂಬಂಧವೂ ಹುಸಿತೋರಿಕೆಯೇ ಎಂಬ ಅಭಿಪ್ರಾಯವು (ಸ್ತೋತ್ರದ) ಮೂಲ ಶ್ಲೋಕದಲ್ಲಿ ಕಾಣುತ್ತಿದ್ದರೂ ಅದನ್ನು ಹೇಳದೆ ವಿಕಲ್ಪಗಳ ಮತ್ತು ಅಪೇಕ್ಷಿಕ ವ್ಯವಹಾರದ ದೃಷ್ಟಾಂತಗಳನ್ನು ಕೊಟ್ಟಿರುವದೇಕೆಂಬುದು ಸ್ಪಷ್ಟವಾಗಿಲ್ಲ. ಮುಂದಿನ ಶ್ಲೋಕದಲ್ಲಿ ಸರಿಯಾದ ಅರ್ಥವನ್ನು ಅವರೇ ಸ್ಫುಟಗೊಳಿಸಿರುತ್ತಾರೆ.

**ಮಿಥ್ಯಾತ್ವಂ ನಾಮ ಬಾಧ್ಯತ್ವಂ ಸಮ್ಯಗ್ಜ್ಞಾನೋದಯೇ ಸತಿ ।**
**ಶಿಷ್ಯಾಚಾರ್ಯೋಪದೇಶಾದಿ ಸ್ವಪ್ನವತ್ ಪ್ರತಿಭಾಸತೇ ॥ ೧೦ ॥**

೧೦. ಮಿಥ್ಯಾತ್ವ– ಎಂದರೆ ಬಾಧ್ಯವಾಗಿರುವದು. ಸರಿಯಾದ ಜ್ಞಾನವು ಹುಟ್ಟಲಾಗಿ ಶಿಷ್ಯ, ಆಚಾರ್ಯ, ಉಪದೇಶ– ಮುಂತಾದದ್ದು ಕನಸಿನಂತೆ ಕಾಣುತ್ತದೆ.

### ವಿವೇಚನೆ

ಇಲ್ಲಿ 'ಜ್ಞಾತೇ ದ್ವೈತಂ ನ ವಿದ್ಯತೇ' (ಗೌ. ಕಾ. ೧–೧೮) ಎಂಬ ಗೌಡಪಾದಾಚಾರ್ಯರ ಉಕ್ತಿಯ ಪರಾಮರ್ಶವಿದ್ದರೂ ಇರಬಹುದು. ಆದರೆ ಆಗಮಪ್ರಕರಣದಲ್ಲಿ ಅವಸ್ಥಾತ್ರಯಗಳಿಗೆ ಸಾಕ್ಷಿಯಾಗಿರುವ ಆತ್ಮನನ್ನು ವಿಶ್ವ (ವೈಶ್ವಾನರ) –ಎಂದು ಮುಂತಾದ ಸಂಜ್ಞೆಗಳಿಂದ ಕರೆದಮೇಲೆ ಸ್ವರೂಪದಿಂದ ಆತ್ಮನು ನಿಷ್ಪ್ರಪಂಚನೆಂದು ಸ್ಥಾಪಿಸಿರುವ ರೀತಿಯ ಗುರುತು ಇಲ್ಲಿ ಕಾಣಿಸುತ್ತಿಲ್ಲ. ಶಿಷ್ಯಾಚಾರ್ಯಾದಿಗಳನ್ನು ಉಪದೇಶಕ್ಕಾಗಿ ಅಧ್ಯಾರೋಪಮಾಡಿಕೊಂಡಿದೆ ಎಂಬುದರ ಸೂಚನೆಯೂ ಇಲ್ಲಿ ಕಾಣುತ್ತಿಲ್ಲ.

## ಅಸತ್ಯವಾದ ಶಾಸ್ತ್ರದಿಂದ ಐಕ್ಯವು ಹೇಗೆ ಗೊತ್ತಾಗುತ್ತದೆ ?

**ಮಿಥ್ಯಾಭೂತೋಽಪಿ ವೇದಾನ್ತಸ್ಸತ್ಯಮರ್ಥಂ ಪ್ರಬೋಧಯೇತ್ ।**
**ದೇವತಾಪ್ರತಿಮಾವಚ್ಚ ಚಿತ್ರವತ್ ಪ್ರತಿಬಿಮ್ಬವತ್ ॥ ೧೧ ॥**

೧೧. ವೇದಾಂತಶಾಸ್ತ್ರವು ಮಿಥ್ಯೆಯಾದರೂ – ದೇವತೆಯ ಪ್ರತಿಮೆಯಂತೆಯೂ ಚಿತ್ರದಂತೆಯೂ ಪ್ರತಿಬಿಂಬದಂತೆಯೂ ಸತ್ಯವಾದ ವಸ್ತುವನ್ನು ತಿಳಿಯಿಸಿಕೊಡಬಹುದು.

### ವಿವೇಚನೆ

ಇಲ್ಲಿ ಪ್ರತಿಮೆಯೂ ಚಿತ್ರವೂ ಮಿಥ್ಯಾವಸ್ತುಗಳಲ್ಲ; ಪ್ರತಿಬಿಂಬವು ಮಾತ್ರ ಮಿಥ್ಯೆ. ಮಿಥ್ಯೆಯೆಂದರೆ ಸತ್ಯವೆಂಬಂತೆ ತೋರುತ್ತಿದ್ದು ಜ್ಞಾನದಿಂದ ಬಾಧಿತವಾಗುವ ವಸ್ತು. ಸೂತ್ರಭಾಷ್ಯದಲ್ಲಿ ಕೊಟ್ಟಿರುವ ಶಂಕಾವಿಷ, ಸ್ವಪ್ನದರ್ಶನ

ದಿಂದಾಗುವ ಸ್ನಾನಾದಿಗಳ ಅನುಭವ- ಇವುಗಳನ್ನಾಗಲಿ ಬೃಹದಾರಣ್ಯಕದಲ್ಲಿ ಉದಾಹರಿಸಿರುವ ರೇಖಾರೂಪವಾದ ಲಿಪಿಯಿಂದ ಸತ್ಯವಾದ ಅಕ್ಷರಜ್ಞಾನ- ಇವುಗಳನ್ನಾಗಲಿ ಅದೇಕೋ, ಗ್ರಂಥಕಾರರು ಉದಾಹರಿಸಿಲ್ಲ. ವ್ಯಾವಹಾರಿಕಸತ್ಯ, ಪಾರಮಾರ್ಥಿಕಸತ್ಯ- ಎಂಬ ವಿವೇಕವನ್ನೂ ಇಲ್ಲಿ ಮಾಡಿರುವದಿಲ್ಲ.

## ಮಾಯಾಸ್ವರೂಪ

ಸರ್ವೋಽಪಿ ವ್ಯವಹಾರೋಽಯಂ ಮಾಯಾಯಾಃ ಪರಿಜೃಮ್ಭಣಮ್ ।
ಸುಷುಪ್ತಿಸದೃಶೀ ಮಾಯಾ ಸ್ವಪ್ರಬೋಧೇನ ಬಾಧ್ಯತೇ ॥ ೧೨ ॥

ಯುಕ್ತಿಹೀನಪ್ರಕಾಶಸ್ಯ ಸಂಜ್ಞಾ ಮಾಯೇತಿ ಕಥ್ಯತೇ ।
ನಾಸತೀ ದೃಶ್ಯಮಾನಾ ಸಾ ಬಾಧ್ಯಮಾನಾ ನ ವಾ ಸತೀ ॥ ೧೩ ॥

ನ ಪ್ರಕಾಶಾದಿಯಂ ಭಿನ್ನಾ ಛಾಯೇವಾರ್ಕಸ್ಯ ತಾಮಸೀ ।
ನ ಚಾಭಿನ್ನಾ ಜಡತ್ವೇನ ವಿರೋಧಾನ್ನೋಭಯಾತ್ಮಿಕಾ ॥ ೧೪ ॥

ಸ್ವಹೇತ್ವವಯವಾಭಾವಾನ್ನೇಯಂ ಸಾವಯವೋಚ್ಯತೇ ।
ನ ಚಾವಯವಹೀನಾ ಸಾ ಕಾರ್ಯೇಷ್ವವಯವಾನ್ವಿತಾ ॥ ೧೫ ॥

ಅವಿಚಾರಿತಸಿದ್ಧೇಯಂ ಮಾಯಾವೇಶ್ಯಾ ವಿಲಾಸಿನೀ ।
ಪುರುಷಂ ವಞ್ಚಯತ್ಯೇವ ಮಿಥ್ಯಾಭೂತೈಸ್ಸ್ವವಿಭ್ರಮೈಃ ॥ ೧೬ ॥

ನ ತಸ್ಯಾ ಮೂಲವಿಚ್ಛೇದಮಭಿವಾಞ್ಛನ್ತಿ ಕೇಚನ ।
ತೇಷಾಂ ಪಕ್ಷೇ ಕಥಂ ಮೋಕ್ಷೋ ಮನಸಸ್ಸಂಭವಿಷ್ಯತಿ ॥ ೧೭ ॥

೧೨-೧೭. ಈ ವ್ಯವಹಾರವೆಲ್ಲವೂ ಮಾಯೆಯಿಂದಾದ ತೋರಿಕೆಯು. ಸುಷುಪ್ತಿಗೆ ಸಮನಾಗಿರುವ ಮಾಯೆಯು ಆತ್ಮಜ್ಞಾನ ದಿಂದ ಬಾಧಿತವಾಗುತ್ತದೆ. ಯುಕ್ತಿಯಿಲ್ಲದೆ ತೋರುವದಕ್ಕೇ ಮಾಯೆ ಎಂಬ ಹೆಸರನ್ನು ಕೊಟ್ಟಿರುತ್ತಾರೆ. (೧) ಕಾಣುತ್ತಿರುವದರಿಂದ ಅದು ಅಸತ್ತಲ್ಲ, ಬಾಧಿತವಾಗುವದರಿಂದ ಸತ್ತೂ ಅಲ್ಲ; ಇದು ಪ್ರಕಾಶಕ್ಕಿಂತ-ಸೂರ್ಯನ ಕಪ್ಪುನೆರಳಿನಂತೆ-ಬೇರೆಯಲ್ಲ ; ಜಡ ವಾಗಿರುವದರಿಂದ ಅಭಿನ್ನವೂ ಅಲ್ಲ. (ಭಿನ್ನಾಭಿನ್ನವಾಗಿರುವದೆಂಬುದು) ವಿರುದ್ಧವಾದ್ದರಿಂದ ಈ ಎರಡು ಧರ್ಮಗಳ ರೂಪದ್ದೂ ಅಲ್ಲ. ತನಗೆ ಕಾರಣವಾಗಿರುವ ಅವಯವಗಳಿಲ್ಲದ್ದರಿಂದ ಇದು ಸಾವಯವ

ನಿಶ್ಚಯವಿಲ್ಲ; ಇನ್ನು ಮಾಯಾಶಕ್ತಿ ಅವಿದ್ಯೆಗಳಿಂದೊಡ
ಗೂಡಿರುವುದರಿಂದ ಅವಿದ್ಯೆಗಿಲ್ಲದ್ದು ಇಲ್ಲ. ಹೀಗಿರುವಲ್ಲದ್ದ
ರಿಂದ ಸಿದ್ಧಾಂತಿಗಳ ಈ ವಾದವು ಕೇವಲ ಕಲ್ಪನೆಗಳೆಲ್ಲ, ವೇದ್ಯವು
ಮಿಥ್ಯಾಜ್ಞಾನಕಲ್ಪಿತವಾದ ವಸ್ತುಗಳಿಂದ ಪ್ರಪಂಚವನ್ನು ವರ್ಣಿಸುತ್ತಲಿ
ರುವರು. ಈ ಮಾಯೆಯ ಸ್ವರೂಪವನ್ನು ಕಲ್ಪಿಸುವ ಬಗೆಯನ್ನು (ಪ್ರಕಾರ
ವನ್ನು) ಕೆಲವರು ಒಪ್ಪುವುದಿಲ್ಲ. ಅವರ ಪಕ್ಷದಲ್ಲಿ ಮಾಯೆಯಿಂದ
ಬಿಡುಗಡೆಯಾಗುವುದೆಂಬುದು ಹೇಗೆ ಆದೀತು?

## ವಿವೇಚನೆ

ಇಲ್ಲಿ ಮಾಯೆಯು ಸತ್ತೂ ಅಲ್ಲ, ಅಸತ್ತೂ ಅಲ್ಲ; ಬ್ರಹ್ಮಶಕ್ತಿಯಿಂದ ಭಿನ್ನ
ವಲ್ಲ ಅಭಿನ್ನವಲ್ಲ; ಸಾವಯವವಲ್ಲ, ನಿರವಯವವೂ ಅಲ್ಲ– ಎಂಬುದಕ್ಕೆ ಕೊಟ್ಟಿ
ರುವ ಹೇತುಗಳನ್ನು ವಿಮರ್ಶಿಸುವುದು ಅನವಶ್ಯ. ಹೀಗೆ ಮಿಥ್ಯಾವಸ್ತುವನ್ನು ವರ್ಣಿಸಿ
ಅದು ಅನಿರ್ವಚನೀಯವೆಂದು ನಿರ್ಣಯಿಸುವ ರೀತಿಯು ವ್ಯಾಖ್ಯಾನಪ್ರಸ್ಥಾನಗಳಲ್ಲಿ
ಪ್ರಚುರವಾಗಿದೆ. ಮಾಯೆಯನ್ನು ಸುಷುಪ್ತಿಗೆ ಹೋಲಿಸಿರುವುದೇಕೆಂಬುದು
ತಿಳಿಯುವುದಿಲ್ಲ; ಸ್ವಪ್ನವು ಎಚ್ಚರದಿಂದ ಬಾಧಿತವಾಗುವುದು ನಿಜವಾದರೂ ಸುಷುಪ್ತಿ
ಯೇನೂ ಬಾಧಿತವಾಗುವದಿಲ್ಲ; ಏಕೆಂದರೆ ನಾನು ನಿಜವಾಗಿ ನಿದ್ರೆಮಾಡಲಿಲ್ಲ–
ಎಂದೇನೂ ಯಾರೂ ಎಚ್ಚತ್ತಾಗ ಭಾವಿಸುವದಿಲ್ಲ. ಸ್ತೋತ್ರದ ಒಂದನೆಯ
ಶ್ಲೋಕದಲ್ಲಿ 'ಯಥಾ ನಿದ್ರಯಾ' (ನಿದ್ರೆಯಿಂದ) ಹೇಗೋ ಹಾಗೆ– ಎಂಬುದರ
ಸೂಚನೆಯಿದೆಯೆಂದು ಇಟ್ಟುಕೊಂಡರೆ ನಿದ್ರೆಯಿಂದಾದ ಕನಸು ಎಚ್ಚರದಿಂದ ಬಾಧಿತ
ವಾಗುವಂತೆ ಎಂಬರ್ಥವನ್ನು ಹೇಗೋ 'ಸುಷುಪ್ತಿವತ್' (ನಿದ್ರೆಯಂತೆ) ಎಂಬ
ಮಾತಿಗೆ ಕಲ್ಪಿಸಲೂಬಹುದು.

'ಯುಕ್ತಿಹೀನಪ್ರಕಾಶವೇ ಮಾಯೆ' ಎಂದು ಇಲ್ಲಿ ಹೇಳಿರುವದನ್ನು 'ಯುಕ್ತಿ
ಹೀನಪ್ರಕಾಶವಾಗಿರುವದರಿಂದ ಭ್ರಾಂತಿಗೆ ಲಕ್ಷಣವಿಲ್ಲ' (೭–೨೭) ಎಂದು ಹಿಂದೆ
ಹೇಳಿರುವದಕ್ಕೆ ಹೋಲಿಸಿನೋಡಬೇಕು. ಭ್ರಾಂತಿಜ್ಞಾನವೂ ಅದರಿಂದ ತೋರುವ
ಮಿಥ್ಯಾವಸ್ತುವೂ ಅನಿರ್ವಚನೀಯವಾಗಿರುತ್ತದೆ– ಎಂದು ಹೀಗೆ ವರ್ಣಿಸಿರುವದು
ಇಷ್ಟಸಿದ್ಧಿಯೇ ಮೊದಲಾದ ವ್ಯಾಖ್ಯಾನಗ್ರಂಥಗಳಲ್ಲಿ ಕಾಣಬರುತ್ತದೆ. ಮಾಯೆ
ಯೆಂದರೆ ನಾಮರೂಪಗಳ ಬೀಜವೆಂದೂ ಅದು ಅಧ್ಯಾಸರೂಪವಾದ ಅವಿದ್ಯೆ
ಯಿಂದ ಕಲ್ಪಿತವಾಗಿದೆಯೆಂದೂ (ಸೂ. ಭಾ. ೨–೧–೧೪), ಮಾಯೆಯು ಆತ್ಮನೇ
ಎಂದಾಗಲಿ ಆತ್ಮನಿಗಿಂತ ಬೇರೆಯೆಂದಾಗಲಿ ಗೊತ್ತುಪಡಿಸುವದಕ್ಕಾಗುವದಿಲ್ಲ
ವೆಂದೂ ಆಚಾರ್ಯರು ತಿಳಿಸಿರುವ ಯುಕ್ತಿಯು ಈ ಪ್ರಕರಣದಲ್ಲಿ ಕಾಣುವದಿಲ್ಲ.

## ಆತ್ಮನು ಮನಸ್ಸಿಗೆ ಸಾಕ್ಷಿಯಾದ್ದರಿಂದ ನಿಜವಾಗಿ ಸಂಸಾರಿಯಲ್ಲ

ತಿಸ್ರೋಽಪ್ಯವಸ್ಥಾ ಮನಸೋ ಜಾಗ್ರತ್ಸ್ವಪ್ನಸುಷುಪ್ತಯಃ ।
ಚಕ್ರವತ್ ಪರಿವರ್ತನ್ತೇ ಭೇದಭ್ರಾನ್ತ್ಯೈಕಹೇತವಃ ॥ ೧೮ ॥

ತಾಭಿಃ ಕರೋತಿ ಕರ್ಮಾಣಿ ಪುನಸ್ತೈರ್ಬಧ್ಯತೇ ಮನಃ ।
ಮನಸಃ ಕೇವಲಃ ಸಾಕ್ಷೀ ಭಾನುವತ್ ಪುರುಷಃ ಪರಃ ॥ ೧೯ ॥

ಯಥಾ ಪ್ರಾಣಿಕೃತೈರರ್ಕಃ ಕರ್ಮಭಿರ್ನೈವ ಬಧ್ಯತೇ ।
ತಥಾ ಮನಃಕೃತೈರಾತ್ಮಾ ಸಾಕ್ಷಿತ್ವಾನ್ನೈವ ಬಧ್ಯತೇ ॥ ೨೦ ॥

ಆತ್ಮಾ ಕರೋತಿ ಕರ್ಮಾಣಿ ಬಧ್ಯತೇ ಮುಚ್ಯತೇ ಚ ತೈಃ ।
ಇತ್ಯೌಪಚಾರಿಕೀ ಕ್ಲೃಪ್ತಿಃ ಭ್ರಮಮಾತ್ರೈವ ಕೇವಲಮ್ ॥ ೨೧ ॥

ಧೂಮಾಭ್ರಧೂಲೀನೀಹಾರೈರಸ್ಪೃಷ್ಟೋಽಪಿ ದಿವಾಕರಃ ।
ಯಥಾ ಛನ್ನ ಇವಾಭಾತಿ ತಥೈವಾತ್ಮಾಽಪಿ ಮಾಯಯಾ ॥ ೨೨ ॥

ಯಥಾ ಲೀಲಾವಶಾದ್ ಕೈಶ್ಚಿದ್ಭ್ರಾಮ್ಯಮಾಣಃ* ಕುಮಾರಕಃ ।
ಭ್ರಮತ್ತತ್ಪಶ್ಯತಿ ಜಗತ್ ಶಶಿಚನ್ದ್ರಂ ನಭಃಸ್ಥಲಮ್ ॥ ೨೩ ॥

ತಥೈವ ಮಾಯಯಾ ಜೀವೋ ಭ್ರಾಮಿತೋ ವಾಸನಾವಶಾತ್ ।
ನಾನಾಕಾರಮಿದಂ ವಿಶ್ವಂ ಭ್ರಮಮಾಣಂ ಚ ಪಶ್ಯತಿ ॥ ೨೪ ॥

ಸಂಸೃಜ್ಯ ಮನಸಾ ದೇವಃ ಸಂಸರನ್ನಿವ ಲಕ್ಷ್ಯತೇ ।
ಯಥಾಽರ್ಕೋ ಜಲಸಂಸರ್ಗಾಚ್ಚಲನ್ನಾನೇವ ಲಕ್ಷ್ಯತೇ ॥ ೨೫ ॥

೧೮–೨೫. ಎಚ್ಚರಕನಸುನಿದ್ರೆಗಳೆಂಬ ಮನಸ್ಸಿನ ಮೂರವಸ್ಥೆಗಳೂ ಭೇದವೆಂಬ ಭ್ರಾಂತಿಗೆ ಮುಖ್ಯಕಾರಣವಾಗಿ ಚಕ್ರದಂತೆ ತಿರುಗುತ್ತಿರುವವು. ಸಾಕ್ಷಿಯಾಗಿರುವ ಮನಸ್ಸು ಅವುಗಳಿಂದ ಕರ್ಮಗಳನ್ನು ಮಾಡುತ್ತಿರುತ್ತದೆ, ಮತ್ತು ಅವುಗಳಿಂದಲೇ ಬಂಧಕ್ಕೊಳಗಾಗುತ್ತಿರುತ್ತದೆ. ಪರಮಪುರುಷನು ಸೂರ್ಯನಂತೆ ಮನಸ್ಸಿಗೆ ಕೇವಲ ಸಾಕ್ಷಿಯಾಗಿರುತ್ತಾನೆ. ಹೇಗೆ ಜೀವರು ಮಾಡಿದ ಕರ್ಮಗಳಿಂದ ಸೂರ್ಯನು ಸ್ವಲ್ಪವೂ ಕಟ್ಟುವಡೆಯದೆ ಇರುತ್ತಾನೋ, ಹಾಗೆಯೇ ಆತ್ಮನು ಮನಸ್ಸಿನ ಕರ್ಮಗಳಿಂದ ಕಟ್ಟುವಡೆಯದೆ ಇರುತ್ತಾನೆ. 'ಆತ್ಮನು ಕರ್ಮಗಳನ್ನು ಮಾಡುತ್ತಾನೆ, ಅವುಗಳಿಂದ ಕಟ್ಟುವಡೆಯುತ್ತಾನೆ, ಮತ್ತು ಮುಕ್ತನಾಗುತ್ತಾನೆ' ಎಂಬ ಕಲ್ಪನೆಯು

* 'ಕಶ್ಚಿದ್ ಭ್ರಾಮ್ಯಮಾಣಃ' ಎಂದು ಪಾ॥

ವ್ಯಾವಹಾರಿಕವಾದದ್ದು, ಬರಿಯ ಭ್ರಾಂತಿಮಾತ್ರವೇ (ಆಗಿರುತ್ತದೆ). ಹೇಗೆ ಸೂರ್ಯನು ಹೊಗೆ, ಮೋಡ, ಧೂಳು, ಮಂಜು- (ಇವು)ಗಳಿಂದ ಸೋಕದೆ ಇದ್ದರೂ (ಅವುಗಳಿಂದ) ಮುಚ್ಚಲ್ಪಟ್ಟಿರುವಂತೆ ಕಾಣಿಸುತ್ತಾನೋ ಹಾಗೆಯೇ ಆತ್ಮನೂ ಮಾಯೆಯಿಂದ ಮರೆಯಾಗಿರುವಂತೆ (ಕಾಣಿಸುತ್ತಿದಾನೆ). ಹೇಗೆ ಆಟಕ್ಕಾಗಿ ಯಾರಿಂದಲಾದರೂ ತಿರುಗಿಸಲ್ಪಡುವ ಹುಡುಗನು ಆ ಜಗತ್ತು ಸುತ್ತುತ್ತಿರುವಂತೆಯೂ ಆಕಾಶದ ತಲದಲ್ಲಿ ನೂರು ಚಂದ್ರರಿರುವಂತೆಯೂ ಕಾಣುವನೋ ಹಾಗೆಯೇ ಜೀವನು ವಾಸನೆಯ ವಶದಿಂದ ಭ್ರಾಮಿತನಾಗಿ ಈ ವಿಶ್ವವು ನಾನಾಕಾರವಾಗಿರುವಂತೆಯೂ ತಿರುಗುತ್ತಿರುವಂತೆಯೂ ಕಾಣುತ್ತಿರುತ್ತಾನೆ. ಮನಸ್ಸಿನ ಸಂಬಂಧವನ್ನು ಹೊಂದಿದ ಈಶ್ವರನು –ಸೂರ್ಯನು ನೀರಿನ ಸಂಬಂಧದಿಂದ ತಿರುಗುತ್ತಲೂ ಅನೇಕರಾಗಿರುವಂತೆಯೂ ಕಾಣುತ್ತಾನೋ ಹಾಗೆ- ಸಂಸಾರದಲ್ಲಿ ತೊಳಲುತ್ತಿರುವಂತೆ ಕಾಣಿಸುತ್ತಿರುತ್ತಾನೆ.

## ವಿವೇಚನೆ

ಮನಸ್ಸಿಗೆ ಅವಸ್ಥೆಗಳಿದ್ದರೂ ತನಗೇ ಅವಸ್ಥೆಗಳಿರುವವೆಂದೂ ಅವುಗಳಿಂದಾಗುವ ಬಂಧಮೋಕ್ಷಗಳು ತನಗೇ ಆಗುವವೆಂದೂ ಅಜ್ಞನು ಭಾವಿಸಿರುತ್ತಾನೆ. ಆದರೆ ನಿಜವಾಗಿ ಆತ್ಮನು ಮನಸ್ಸಿಗೂ ಸಾಕ್ಷಿಯಾಗಿರುವದರಿಂದ ಅವನಿಗೆ ಯಾವ ಸಂಸಾರಬಂಧವೂ ಇಲ್ಲ. ಅವನಿಗೆ ಹೊಸದಾಗಿ ಆಗಬೇಕಾಗಿರುವ ಮೋಕ್ಷವೂ ಇಲ್ಲ- ಎಂಬುದು ಶ್ಲೋಕಗಳ ಒಟ್ಟು ಅರ್ಥ.

ಮನಸ್ಸಿಗೇ ಅವಸ್ಥೆಗಳು, ಸಾಕ್ಷಿಯಾದ ಆತ್ಮನಿಗಲ್ಲ-ಎಂಬ ವಾಕ್ಯಕ್ಕೆ ಮನಸ್ಸೆಂಬ ಉಪಾಧಿಯಿಂದ ತಾನು ಮೂರು ಅವಸ್ಥೆಗಳನ್ನು ಅನುಭವಿಸುತ್ತಿರುವನೆಂದು ಅಜ್ಞರು ಭಾವಿಸುತ್ತಾರೆ- ಎಂದಿಷ್ಟೇ ಅರ್ಥವನ್ನು ಮಾಡಿಕೊಳ್ಳಬೇಕು. ಏಕೆಂದರೆ ಸರಿಯಾಗಿ ನೋಡಿದರೆ ಜಾಗ್ರತ್ತಿನ,ಮನಸ್ಸೆಂಬ ಉಪಾಧಿಯಿಂದಲೇ ಜೀವನು ತಾನೇ ಮೂರವಸ್ಥೆಗಳನ್ನೂ ಅನುಭವಿಸುತ್ತಿದೇನೆಂದು ಭಾವಿಸಿರುತ್ತಾನೆ. ಅವಸ್ಥೆಗಳು ಒಂದಾಗುತ್ತಲೊಂದು ಬರುತ್ತಿರುವವೆಂಬ ಭ್ರಾಂತಿಯೂ ಈ ಉಪಾಧಿಯಿಂದಲೇ ಆಗಿರುತ್ತದೆ. ಸರಿಯಾಗಿ ನೋಡಿದರೆ ಒಂದೊಂದು ಅವಸ್ಥೆಯು ಕಳೆದುಹೋದರೆ ಆಯಾ ಅವಸ್ಥೆಯಲ್ಲಿರುವ ದೇಶಕಾಲಗಳೂ ಅದರಲ್ಲಿ ತೋರುತ್ತಿರುವ ದೃಶ್ಯಗಳೂ ಅದರೊಂದಿಗೆ ಮರೆಯಾಗಿಬಿಡುವದರಿಂದ, ಅವಸ್ಥೆಗಳು ಯಾವದೊಂದು ಸಮಾನಕಾಲದ ಆಧಾರದಿಂದಲೂ ಆಗುತ್ತಿರುವದಿಲ್ಲವೆಂದು ಸ್ತೋತ್ರದಲ್ಲಿ (ಶ್ಲೋ. ೭ರಲ್ಲಿ)

ಹೇಳಿರುವಂತೆ ಅವಸ್ಥೆಗಳು ವ್ಯಭಿಚರಿತವಾದರೂ ಅವುಗಳಿಗೆ ಸಾಕ್ಷಿಯಾದ ಆತ್ಮನ ಸ್ವರೂಪವು ಮಾರ್ಪಡದೆ ಹಾಗೆಯೇ ಇರುತ್ತದೆ. ಇವನ್ನು ಆ ಶ್ಲೋಕದ ವಿವರಣೆಯಲ್ಲಾಗಲಿ ಮತ್ತೆಲ್ಲಿಯೇ ಆಗಲಿ, ಅದೇಕೊ, ಮಾನಸೋಲ್ಲಾಸಕಾರರು ವಿಮರ್ಶೆಗೆ ತೆಗೆದುಕೊಂಡೇ ಇರುವದಿಲ್ಲ.

## ಸಂಸಾರಮುಕ್ತಿಯ ಸಾಧನ

**ಯೋಗಾಭ್ಯಾಸವಶಾದ್ ಯೇನ ಮನೋ ನಿರ್ವಿಷಯಂ ಕೃತಮ್ ।**
**ನಿವೃತ್ತಃ ಸ ಪುಮಾನ್ ಸದ್ಯೋ ಜೀವನ್ಮುಕ್ತೋ ಭವಿಷ್ಯತಿ ॥ ೨೬ ॥**

೨೬. ಯೋಗಾಭ್ಯಾಸದಿಂದ ಯಾವಾತನು ಮನಸ್ಸನ್ನು ನಿರ್ವಿಷಯವಾಗಿ ಮಾಡಿಕೊಂಡಿರುವನೋ ಆ ಮನುಷ್ಯನು (ವ್ಯವಹಾರದಿಂದ) ನಿವೃತ್ತನಾಗಿ ಕೂಡಲೆ ಜೀವನ್ಮುಕ್ತನಾಗುವನು.

### ವಿವೇಚನೆ

ಮನಸ್ಸೆಂಬ ಉಪಾಧಿಯಿಂದ ಸಂಸಾರವಾಗಿರುವದರಿಂದ ಮನಸ್ಸನ್ನು ಯೋಗದಿಂದ ಗ್ರಾಹ್ಯವಿಷಯವಿಲ್ಲದಂತೆ ಅಮನಸ್ಕವಾಗಿ ಮಾಡಿಕೊಂಡವನು ಕೂಡಲೆ ಜೀವನ್ಮುಕ್ತನಾಗುವನು– ಎಂದದ್ದರಿಂದ ಯೋಗವೇ ಸಂಸಾರನಿವೃತ್ತಿಗೆ ಸಾಧನ ಎಂದು ಹೇಳಿದಂತಾಯಿತು. ಜ್ಞಾನದಿಂದಲೇ ಸದ್ಯೋಮುಕ್ತಿ ಎಂಬ ವೇದಾಂತ ಸಿದ್ಧಾಂತವನ್ನೇಕೆ ಇಲ್ಲಿ ಹೇಳಲಿಲ್ಲ?– ಎಂಬುದು ವಿಚಾರಣೀಯವಾಗಿದೆ.

## ಈ ಅರ್ಥಕ್ಕೆ ಶ್ರುತಿಪ್ರಮಾಣ

**ದ್ವಾ ಸುಪರ್ಣಾ ಚ ಸಯುಜಾವಭವನ್ ಮಾಯಯಾ ಶಿವಃ ।**
**ಅಜಾಮೇಕಾಂ ಜುಷನ್ನೇಕೋ ನಾನೇವಾಸೀದಿತಿ ಶ್ರುತಿಃ ॥ ೨೭ ॥**

೨೭. 'ಶಿವನು ಮಾಯೆಯಿಂದ ಒಟ್ಟಿಗಿರುವ ಎರಡು ಪಕ್ಷಿಗಳಾದನು, ಒಂದು ಹೆಣ್ಣಾಡನ್ನು ಅನುಭವಿಸುವಾತನು ತಾನೊಬ್ಬನೇ ಬೇರೆಬೇರೆಯಾದಂತೆ ಆದನು' ಎಂದು ಶ್ರುತಿ(ವಚನವಿದೆ).

### ವಿವೇಚನೆ

ಇಲ್ಲಿ ಮಾನಸೋಲ್ಲಾಸಕಾರರು ಎರಡು ಶ್ರುತಿಗಳನ್ನು ತಮ್ಮ ಸಿದ್ಧಾಂತಕ್ಕೆ ಪ್ರಮಾಣವೆಂದು ಉದಾಹರಿಸಿರುತ್ತಾರೆ. ಅವುಗಳಲ್ಲಿ ಒಂದು **ಮುಂಡಕೋಪನಿಷತ್ತಿ**ನಲ್ಲಿ ಹೀಗಿದೆ :

द्वा सुपर्णा सयुजा सखाया समानं वृक्षं परिषस्वजाते ।
तयोरन्यः पिप्पलं स्वाद्वत्त्यनश्नन्न्यो अभिचाकशीति ॥ ಮುಂ. ೩-೧-೧

ಇದರ ಅರ್ಥವೇನೆಂದರೆ: ಎರಡು ಹಕ್ಕಿಗಳು ಒಂದೇ ಮರವನ್ನಾಶ್ರಯಿಸಿಕೊಂಡಿರುತ್ತವೆ. ಅವುಗಳೊಳಗೆ ಒಂದು ಹಕ್ಕಿ ಮರದ ಹಣ್ಣನ್ನು ಸವಿಯುತ್ತಾ ಇರುತ್ತದೆ; ಇನ್ನೊಂದು ಹಕ್ಕಿ ಸವಿಯದೆ ನೋಡುತ್ತಿರುತ್ತದೆ.

ಈ ಶ್ರುತಿಯು ಮುಂದಿನ ಮಂತ್ರದಲ್ಲಿ 'ಒಂದೇ ಮರದಲ್ಲಿ ಮುಳುಗಿರುವ ಪುರುಷನು ಅಶಕ್ತಿಯಿಂದ ಮೋಹಗೊಂಡು ಶೋಕಿಸುತ್ತಿರುತ್ತಾನೆ; ತನಗಿಂತ ಅನ್ಯನಾದ ಈಶ್ವರನನ್ನು ಕಂಡುಕೊಂಡರೆ ಈತನ ಮಹಿಮೆಯೇ ಎಂದು ಕಂಡುಕೊಳ್ಳುತ್ತಾನೆ' ಎಂದಿದೆ. ಇಲ್ಲಿ ಶಿವನೊಬ್ಬನೇ ಮಾಯೆಯಿಂದ ಇಬ್ಬರಾಗಿದ್ದಾರೆ ಎಂಬರ್ಥವೇನೂ ಕಾಣಿಸುತ್ತಿಲ್ಲ. ಇನ್ನು ಎರಡನೆಯ ಮಂತ್ರವು **ಶ್ವೇತಾಶ್ವತರೋಪನಿಷತ್ತಿನಲ್ಲಿದೆ; ಅದು ಹೇಗಿದೆಯೆಂದರೆ:**

**अजामेकां लोहितशुक्लकृष्णां बह्वीः प्रजाः सृजमानां सरूपाः ।**
**अजो ह्येको जुषमाणोऽनुशेते जहात्येनां भुक्तभोगामजोऽन्यः ॥** ಶ್ವೇ. ೪-೫

'ಕೆಂಪು, ಬಿಳುಪು, ಕಪ್ಪು— (ಹೀಗೆ ಮೂರುವರ್ಣಗಳುಳ್ಳ), ತನ್ನ ರೂಪದವೇ ಆದ ಬಹುಮರಿಗಳನ್ನು ಹಡೆಯುತ್ತಿರುವ ಹೆಣ್ಣಾಡನ್ನು, ಒಂದು ಮೇಕೆಯು ಅನುಭವಿಸುತ್ತಾ ಹತ್ತಿರವೇ ಮಲಗಿಕೊಂಡಿರುತ್ತದೆ ; ಭೋಗಿಸಿಬಿಟ್ಟಿರುವ ಅದನ್ನು ಮತ್ತೊಂದು ಮೇಕೆಯು ಬಿಟ್ಟುಬಿಡುತ್ತದೆ' ಎಂಬುದು ಆ ಮಂತ್ರದ ಅಕ್ಷರಾರ್ಥ. ಮಂತ್ರದಲ್ಲಿಯಾದರೂ ಒಬ್ಬನೇ ಅನೇಕವಾದಂತೆ ಆದನು— ಎಂಬ ಅಭಿಪ್ರಾಯವಿಲ್ಲ. ಮೊದಲನೆಯ ಮಂತ್ರದಲ್ಲಿ 'ಜೀವನು ಕರ್ಮಫಲವನ್ನು ಅನುಭವಿಸುತ್ತಿರುತ್ತಾನೆ, ಸಾಕ್ಷಿಯಾದ ಈಶ್ವರನು ಯಾವ ಭೋಗವೂ ಇಲ್ಲದೆ ಇರುತ್ತಾನೆ'— ಎಂಬರ್ಥಕ್ಕೆ ದೃಷ್ಟಾಂತವಿದೆ; ಎರಡನೆಯದರಲ್ಲಿ ಜೀವನು ಪ್ರಕೃತಿಯ ತಾದಾತ್ಮ್ಯವನ್ನು ಹೊಂದಿ ಸುಖದುಃಖವನ್ನನುಭವಿಸುತ್ತಾ ಪ್ರಜಾಸಂತತಿಯನ್ನು ಪಡೆದು ದುಃಖಿಸುತ್ತಿರುತ್ತಾನೆ; ಆದರೆ ಸರ್ವಸಾಕ್ಷಿಯಾದ ಪರಮಾತ್ಮನಿಗೆ ಈ ವಿಷಯದಲ್ಲಿ ಔದಾಸೀನ್ಯವೇ ಇರುತ್ತದೆ— ಎಂಬುದಕ್ಕೆ ಒಂದು ರೂಪಕದಿಂದ ದೃಷ್ಟಾಂತವನ್ನು ಕೊಟ್ಟಿದೆ.

**ಇತಿ ಶ್ರೀದಕ್ಷಿಣಾಮೂರ್ತಿಸ್ತೋತ್ರಾರ್ಥಪ್ರತಿಪಾದಕೇ ।**
**ಪ್ರಬನ್ಧೇ ಮಾನಸೋಲ್ಲಾಸೇ ಅಷ್ಟಮೋಲ್ಲಾಸಸಙ್ಗ್ರಹಃ ॥ ೨೮ ॥**

೨೮. ಇಂತು ಶ್ರೀದಕ್ಷಿಣಾಮೂರ್ತಿಸ್ತೋತ್ರದ ಅರ್ಥವನ್ನು ಪ್ರತಿಪಾದಿಸುವ ಪ್ರಬಂಧವಾದ ಮಾನಸೋಲ್ಲಾಸದಲ್ಲಿ ಎಂಟನೆಯ ಉಲ್ಲಾಸದ ಸಂಗ್ರಹವು ಮುಗಿಯಿತು.

# ೯. ಈಶ್ವರೋಪಾಸನೆ

## ಅವತರಣಿಕೆ

**ಕಥಮೇವಂವಿಧಾ ಮಾಯಾ ನಿವರ್ತೇತೇತಿ ಪೃಚ್ಛತಃ ।**
**ಈಶ್ವರೋಪಾಸನಾರೂಪಸ್ತದುಪಾಯಃ ಪ್ರಕೀರ್ತ್ಯತೇ ॥ ೧ ॥**

೧. ಈ ಬಗೆಯ ಮಾಯೆಯು ಹೇಗೆ ತೊಲಗೀತು ?- ಎಂದು ಕೇಳುವವನಿಗೆ ಈಶ್ವರೋಪಾಸನೆ ಎಂಬ ರೂಪದ ಆ (ನಿವೃತ್ತಿಯ) ಉಪಾಯವನ್ನು (ಇಲ್ಲಿ) ಹೇಳಲಾಗುವದು.

## ವಿವೇಚನೆ

ಹಿಂದಿನ ಶ್ಲೋಕದಲ್ಲಿ ಮಾಯೆಯಿಂದ ಭ್ರಾಂತನಾಗಿರುವ ಜೀವನು ಸ್ವಪ್ನ ಜಾಗರಿತಗಳಲ್ಲಿ ದೃಶ್ಯಗಳಿಗೆ ಕಾರ್ಯಕಾರಣಭಾವವೇ ಮುಂತಾದ ಸಂಬಂಧವಿರುವಂತೆ ಕಾಣುತ್ತಿರುತ್ತಾನೆ- ಎಂದಿತ್ತಲ್ಲವೆ ? ಆದರಿಂದ ಏಕಾತ್ಮತ್ವವನ್ನು ಕಂಡುಕೊಳ್ಳುವದಕ್ಕೆ ದ್ವೈತಹೇತುವಾದ ಮಾಯೆಯನ್ನು ತೊಲಗಿಸಿಕೊಳ್ಳಬೇಕು-ಎಂದು ಹೇಳಿದಂತೆ ಆಯಿತು ; ಅದನ್ನು ತೊಲಗಿಸಿಕೊಳ್ಳುವದಕ್ಕೆ ಉಪಾಯವೇನು ?- ಎಂಬ ಪ್ರಶ್ನೆಯು ಏಳುವದು ಸ್ವಾಭಾವಿಕವಾಗಿದೆ. ಅದಕ್ಕೆ ಇಲ್ಲಿ ಉತ್ತರವನ್ನು ಹೇಳಿದೆ ಎಂದು ಭಾವ. ಮಾನಸೋಲ್ಲಾಸಕಾರರ ಕ ದಂತೆ ಈಶ್ವರನ ಉಪಾಸನೆಯಿಂದಲೇ ಆ ಮಾಯೆಯು ತೊಲಗುವದು- ಎಂಬುದು ಮುಂದಿನ ಶ್ಲೋಕಗಳಿಂದ ಸ್ಪಷ್ಟವಾಗುತ್ತದೆ

**ಷಟ್ತ್ರಿಂಶತ್ತತ್ತ್ವರೂಪಾಸು ಪರಮೇಶ್ವರಮೂರ್ತಿಷು ।**
**ಪ್ರತ್ಯಕ್ಷೇಣೋಪಲಭ್ಯನ್ತೇ ಸರ್ವೈರಪ್ಯಷ್ಟಮೂರ್ತಯಃ ॥ ೨ ॥**

೨. ಮೂವತ್ತಾರುತತ್ತ್ವಗಳ ರೂಪಗಳಾಗಿರುವ ಪರಮೇಶ್ವರನ ಮೂರ್ತಿಗಳಲ್ಲಿ ಎಂಟು ಮೂರ್ತಿಗಳು ಎಲ್ಲರಿಗೂ ಪ್ರತ್ಯಕ್ಷವಾಗಿ ಕಾಣಬರುತ್ತಿರುತ್ತವೆ.

## ವಿವೇಚನೆ

ಆಕಾಶ, ಪುರುಷ- ಮುಂತಾದವುಗಳು ಪ್ರತ್ಯಕ್ಷವಾಗಿ ಗೋಚರವಲ್ಲವಾದರೂ ಅನುಭವಕ್ಕೆ ಗೋಚರವಾಗಿವೆ, ಮಿಕ್ಕ ಮೂರ್ತಿಗಳಿಗಿಂತ ಹೆಚ್ಚು ಪ್ರಸಿದ್ಧವಾಗಿವೆ- ಎಂಬರ್ಥವನ್ನು ಕೊಟ್ಟು ಈ ವಾಕ್ಯದರ್ಥವನ್ನು ಮನಸ್ಸಿಗೆ ತಂದುಕೊಳ್ಳಬೇಕು.

ಈಶ್ವರನಿಗೆ 'ಅಷ್ಟಮೂರ್ತಿ' ಎಂಬ ಹೆಸರೂ ಸುಪ್ರಸಿದ್ಧವಾಗಿದೆ. ಶೈವಾಗಮದಲ್ಲಿ ವಿಶಾರದರಾದವರಿಂದ ಮೂವತ್ತಾರು ತತ್ತ್ವಗಳು ಅಂಗೀಕರಿಸಲ್ಪಟ್ಟಿವೆ (೨–೪೨ಟಿ) ಎಂದು ಹಿಂದೆ ಹೇಳಿರುವದನ್ನೇ ಇಲ್ಲಿ ಈಶ್ವರೋಪಾಸನೆಯನ್ನು ಮುಖ್ಯವಾಗಿ ಪರಾಮರ್ಶಿಸಿರುವದರಿಂದ ಗ್ರಂಥಕರ್ತರಿಗೆ ಶೈವಾಗಮದಲ್ಲಿ ಹೆಚ್ಚು ಆದರವೆಂದು ತಿಳಿಯಿಸಿದಂತೆ ಆಗಿರುತ್ತದೆ.

**ಅನುಮೇಯೇಷು ನ ಮನಃ ಕ್ಷಿಪ್ರಮಾರೋಹತೀತ್ಯತಃ ।***
**ಮೂರ್ತ್ಯಷ್ಟಕಮಯೀಂ ಬ್ರೂತೇ ಗುರುಃ ಸರ್ವಾತ್ಮಭಾವನಾಮ್॥ ೩ ॥**

೩. ಅನುಮೇಯವಾದ (ಮೂರ್ತಿಗಳಲ್ಲಿ) ಮನಸ್ಸು ಬೇಗನೆ ಹತ್ತಿಕೊಳ್ಳಲಾರದು ; ಆದ್ದರಿಂದ ಗುರುವು ಮೂರ್ತ್ಯಷ್ಟಕರೂಪವಾದ (ಮೂರ್ತಿಗಳ ವಿಷಯದ) ಸರ್ವಾತ್ಮಭಾವನೆಯನ್ನೇ (ಇಲ್ಲಿ) ಹೇಳಿರುತ್ತಾನೆ :

ಭೂರಮ್ಭಾಂಸ್ಯನಲೋಽನಿಲೋಽಮ್ಬರಮಹರ್ನಾಥೋ ಹಿಮಾಂಶುಃ ಪುಮಾನ್
ಇತ್ಯಾಭಾತಿ ಚರಾಚರಾತ್ಮಕಮಿದಂ ಯಸ್ಯೈವ ಮೂರ್ತ್ಯಷ್ಟಕಮ್ ।
ನಾನ್ಯತ್ ಕಿಞ್ಚನ ವಿದ್ಯತೇ ವಿಮೃಶತಾಂ ಯಸ್ಮಾತ್ಪರಸ್ಮಾದ್ವಿಭೋ-
ಸ್ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ ಶ್ರೀದಕ್ಷಿಣಾಮೂರ್ತಯೇ ॥

ಭಾವಾರ್ಥ :– ಭೂಮಿ, ಅಪ್ಪು, ತೇಜಸ್ಸು, ವಾಯು, ಆಕಾಶ, ಸೂರ್ಯ, ಚಂದ್ರ ಪುರುಷ– ಎಂದಿಂತು ಸ್ಥಾವರಜಂಗಮಾತ್ಮಕವಾಗಿರುವ ಅಷ್ಟಮೂರ್ತಿಗಳ ಗುಂಪು ಯಾವಾತನದೇ ಆಗಿರುವದೋ, ವಿಮರ್ಶಿಸಿ ನೋಡುವವರಿಗೆ ಯಾವ ವಿಭುವಾದ (ಪರಮಶಿವ)ನಿಗಿಂತ ಮತ್ತೆ ಯಾವದೂ ಬೇರೆಯಾಗಿ ಇರುವದೇ ಇಲ್ಲವೋ– ಆ ಶ್ರೀಗುರುಮೂರ್ತಿಯಾದ ಶ್ರೀದಕ್ಷಿಣಾಮೂರ್ತಿಗೆ ಈ ನಮಸ್ಕಾರ !

**ಅಸ್ಯೈವಂ ಸಿದ್ಧಾನ್ತಃ–**

**ವಿರಾಟ್ಪುರುಷಶರೀರೇ ಬ್ರಹ್ಮಾಣ್ಡೇ ಪ್ರಾಣಿನಾಮಪಿ ವಿಗ್ರಹೇ ।**
**ಷಟ್ತ್ರಿಂಶತ್ತತ್ತ್ವಸಙ್ಘಾತಸ್ಸರ್ವತ್ರಾಪ್ಯನುವರ್ತತೇ ॥ ೪ ॥**
**ವ್ಯಾಪ್ತಿರ್ವ್ಯಷ್ಟಿಶರೀರೇಽಸ್ಮಿನ್ ಮನಸೋ ವ್ಯಷ್ಟಿರೂಪಿಣಃ ।**
**ತಸ್ಮಾತ್ ಸರ್ವಾತ್ಮಕಮಿದಂ ಸ್ವಶರೀರಂ ವಿಚಿನ್ತಯೇತ್ ॥ ೫ ॥**
**ವ್ಯಷ್ಟ್ಯುಪಾಸನಯಾ ಪುಂಸಃ ಸಮಷ್ಟಿವ್ಯಾಪ್ತಿಮಾಪ್ನುಯಾತ್ ।**
**ಉಪಸಂಕ್ರಾಮತೀತ್ಯೇವಂ ದಶಕೃತ್ವ ಉಪಾದಿಶತ್ ॥ ॥ ೬ ॥**

೪–೬. ಇದು ಈ ಶ್ಲೋಕದ ಸಿದ್ಧಾಂತವು : ವಿರಾಟ್ಪುರುಷನ ಶರೀರವಾದ ಬ್ರಹ್ಮಾಂಡದಲ್ಲಿಯೂ ಜೀವರುಗಳ ಶರೀರದಲ್ಲಿಯೂ ಮೂವತ್ತಾರು ತತ್ತ್ವಗಳ ಸಂಘಾತವು ಎಲ್ಲೆಲ್ಲಿಯೂ ಅನುಸರಿಸಿ

---

*'ಅಮೇಯಾಸು ಮನಃ ಕ್ಷಿಪ್ರಮಾರೋಢುಂ ನಾರ್ಹತೀತ್ಯತಃ' ಎಂದು ಪಾ॥

ಕೊಂಡುಬಂದಿರುತ್ತದೆ. ವ್ಯಷ್ಟಿರೂಪವಾದ ಮನಸ್ಸಿನ ಪ್ರಾಪ್ತಿಯು ಈ ವ್ಯಷ್ಟಿಶರೀರದಲ್ಲಿ (ಮಾತ್ರ). ಆದ್ದರಿಂದ ಈ ತನ್ನ ಶರೀರವನ್ನು ಸರ್ವಾತ್ಮಕವೆಂದು ಚಿಂತಿಸಬೇಕು. ಪುರುಷನ ವ್ಯಷ್ಟ್ಯುಪಾಸನೆಯಿಂದ ಸಮಷ್ಟಿವ್ಯಾಪ್ತಿಯನ್ನೂ ಪಡೆದುಕೊಳ್ಳಬಹುದು ; (ಆದ್ದರಿಂದಲೇ ವೇದವು) 'ಉಪಸಂಕ್ರಾಮತಿ' ( ಸೇರಿಕೊಳ್ಳುತ್ತಾನೆ) ಎಂದಿಂತು ಹತ್ತುಸಲ ಹೇಳಿರುತ್ತದೆ.

## ವಿವೇಚನೆ

ಪರಮಾತ್ಮನು ಸರ್ವವ್ಯಾಪಕನು, ಅವನ ಅಷ್ಟಮೂರ್ತ್ಯಾತ್ಮಕವಾದ ಶರೀರವು ಇಡಿಯ ವಿಶ್ವವೇ ಆಗಿರುತ್ತದೆ. ಅದನ್ನೇ ಕಟ್ಟನೆ ಎಲ್ಲರೂ ಮೊಟ್ಟಮೊದಲೇ ಚಿಂತಿಸಲಾರರು– ಎಂಬ ಕಾರಣದಿಂದ ವ್ಯಷ್ಟಿಶರೀರದಲ್ಲಿ ಎಲ್ಲಾ ತತ್ತ್ವಗಳನ್ನೂ ಮೊದಲು ಚಿಂತಿಸಬೇಕು. ವ್ಯಷ್ಟಿಶರೀರದಲ್ಲಿ ಮೊದಲು (ತತ್ತ್ವಗಳೆಲ್ಲವೂ ಇದೆ ಎಂದು) ಉಪಾಸನೆಮಾಡುವದರಿಂದ ಸಮಷ್ಟಿಯ ಉಪಾಸನೆಯೂ ದಕ್ಕುವದು. ಹೀಗೆನ್ನುವದಕ್ಕೆ '**एतमन्नमयमात्मानमुपसंक्रामति** ' (ಈ ಅನ್ನಮಯಾತ್ಮನನ್ನು ಸೇರಿಕೊಳ್ಳುತ್ತಾನೆ) ಎಂದೀ ಪರಿಯಲ್ಲಿ ಆನಂದವಲ್ಲಿಯೂ ಭೃಗುವಲ್ಲಿಯೂ ಒಟ್ಟು ಹತ್ತುಸಲ ಶ್ರುತಿಯು ಉಪದೇಶಿಸಿರುತ್ತದೆ ಎಂದು ಗ್ರಂಥಕರ್ತರ ಭಾವ.

ಇಲ್ಲಿ ವಿಚಾರಮಾಡತಕ್ಕದ್ದೇನೆಂದರೆ, ಬ್ರಹ್ಮಾನಂದವಲ್ಲಿಯೂ ಭೃಗುವಲ್ಲಿಯೂ ಜ್ಞಾನಪರವಾಗಿವೆಯೇ ಹೊರತು ಕೇವಲ ಉಪಾಸನಾಪರವಾಗಿಲ್ಲ. ಬ್ರಹ್ಮವನ್ನರಿತವನು ಪರಮಪುರುಷಾರ್ಥವನ್ನು ಪಡೆಯುತ್ತಾನೆ– ಎಂದು ಪ್ರತಿಜ್ಞೆಯನ್ನುಮಾಡಿ ಬ್ರಹ್ಮದಿಂದ ಆಕಾಶಾದ್ಯನ್ನಪರ್ಯಂತವಾಗಿರುವ ಸರ್ವಜಗತ್ತಿನ ಸೃಷ್ಟಿಯನ್ನು ಹೇಳಿದ ಬಳಿಕ ಅನ್ನಮಯನಾಗಿರುವ ಪುರುಷನಿಂದ ಹಿಡಿದು ಕ್ರಮಕ್ರಮವಾಗಿ ಪಂಚಕೋಶಗಳನ್ನು ಅರಿತುಕೊಂಡು ಬ್ರಹ್ಮವನ್ನೇ ಎಲ್ಲಕ್ಕೂ ಆಧಾರವೆಂದು ಅರಿತುಕೊಳ್ಳಬೇಕೆಂದು ಹೇಳುವದೇ ಬ್ರಹ್ಮಾನಂದವಲ್ಲಿಯ ಗುರಿ. ಭೃಗುವಲ್ಲಿಯಲ್ಲಿಯೋ ಎಂದರೆ : ಅನ್ನಪ್ರಾಣಾದಿಕಾರಣಗಳಲ್ಲಿ ಬ್ರಹ್ಮಬುದ್ಧಿಯನ್ನು ಸಂಪಾದಿಸಿಕೊಳ್ಳುವ ಕ್ರಮವನ್ನು ಬೋಧಿಸಿದಬಳಿಕ ಒಳಗಿರುವ ಆನಂದವೇ ಎಲ್ಲಕ್ಕೂ ಆತ್ಮನಾಗಿರುವ ಬ್ರಹ್ಮ ಎಂದು ನಿರ್ಣಯಿಸಿದೆ. ವ್ಯಷ್ಟಿಯಾಗಲಿ, ಸಮಷ್ಟಿಯಾಗಲಿ– ಆತ್ಮನ ಸ್ವರೂಪವನ್ನು ತಿಳಿಯುವದಕ್ಕಾಗಿ ಮಾಡಬೇಕಾಗಿರುವ ವಿಮರ್ಶನಕ್ರಮವನ್ನು ಶ್ರುತಿಯಲ್ಲಿ ಬೋಧಿಸಿರುತ್ತದೆಯೇ ಹೊರತು ಉಪಾಸನೆಯನ್ನೇ ಪ್ರಾಧಾನ್ಯವೆಂದು ಅಲ್ಲಿ ಹಿಡಿದಿಲ್ಲ. ಹೀಗಿರುವಲ್ಲಿ ವ್ಯಷ್ಟ್ಯುಪಾಸನೆಯಿಂದ ಮೊದಲುಮಾಡಿ ವಿರಾಟ್ಪುರುಷನ ಸಮಷ್ಟಿಶರೀರದ ಉಪಾಸನೆಗೆ ಹೋಗಬೇಕೆಂದು ಉಪದೇಶಿಸಿರ

ತ್ರವೆ- ಎಂದು ಶ್ರುತಿಯು ತಾತ್ಪರ್ಯವನ್ನು ಇಲ್ಲಿ ವರ್ಣಿಸಿರುವದು ಸರಿಯೆಂದು ನಮಗೆ ತೋರುವದಿಲ್ಲ:

ಇದು ಹೇಗಾದರೂ ಇರಲಿ. ವ್ಯಷ್ಟಿಯಾದ ಮನುಷ್ಯಶರೀರದಲ್ಲಿಯೂ ಸಮಷ್ಟಿ ಯಾದ ವಿರಾಟ್ಪುರುಷನ ಶರೀರದಲ್ಲಿರುವ ತತ್ತ್ವಗಳೆಲ್ಲವೂ ಇವೆ- ಎಂದು ಭಾವನೆ ಮಾಡುವದಕ್ಕೆ ಯಾವ ಅಡ್ಡಿಯೂ ಇಲ್ಲ.

## ಉಪಾಸನೆಯ ಪ್ರಕಾರ

ಬ್ರಹ್ಮಾಣ್ಡಸ್ಯೋದರೇ ಲೋಕಾಃ ಸಪ್ತ ಭೂರಾದಯಃ ಸ್ಥಿತಾಃ ।
ಮೂಲಾದಿಬ್ರಹ್ಮರನ್ಧ್ರಾನ್ತೇಷ್ವಾಧಾರೇಷು ವಸನ್ತಿ ತೇ ॥ ೭ ॥

೭. ಬ್ರಹ್ಮಾಂಡದ ಹೊಟ್ಟೆಯೊಳಗೆ ಭೂಲೋಕವೇ ಮುಂತಾದ ಸಪ್ತಲೋಕಗಳಿರುತ್ತವೆ. ಮೂಲಾಧಾರವನ್ನು ಮೊದಲುಮಾಡಿ ಕೊಂಡು ಬ್ರಹ್ಮರಂಧ್ರದವರೆಗೂ ಅವು ವಾಸಮಾಡಿಕೊಂಡಿರುತ್ತವೆ.

### ವಿವೇಚನೆ

ವ್ಯಷ್ಟ್ಯುಪಾಸನೆಯ ಪ್ರಕಾರವನ್ನು ಇನ್ನುಮುಂದೆ ಹೇಳುತ್ತೇವೆಂದು ಇಲ್ಲಿ ಸೂಚಿಸಲಾಗಿದೆ. ವಿರಾಟ್ಛರೀರದಲ್ಲಿರುವ ಲೋಕಗಳೆಲ್ಲವೂ ಈ ನಮ್ಮ ಶರೀರದಲ್ಲಿ ಯೇ ಮೂಲಾಧಾರದಿಂದ ಬ್ರಹ್ಮರಂಧ್ರದವರೆಗಿನ ಸ್ಥಾನಗಳಲ್ಲಿವೆಯೆಂದು ಉಪಾಸನೆ ಮಾಡಬೇಕೆಂಬುದು ಉಪಾಸನೆಯ ಪ್ರಕಾರದ ಸಾರ.

ವೀಣಾದಣ್ಡೋ ಮಹಾಮೇರುರಸ್ಥೀನಿ ಕುಲಪರ್ವತಾಃ ।
ಗಙ್ಗಾ ತು ಪಿಙ್ಗಲಾ ನಾಡೀ ಯಮುನೇಡಾ ಪ್ರಕೀರ್ತಿತಾ ॥ ೮ ॥
ಸರಸ್ವತೀ ಸುಷುಮ್ನೋಕ್ತಾ ನಾಡ್ಯೋಽನ್ಯಾಃ ಪುಣ್ಯನಿಮ್ನಗಾಃ ।
ದ್ವೀಪಾಃ ಸ್ಯುರ್ಧಾತವಃ ಸಪ್ತ ಸ್ವೇದಬಾಷ್ಪಾದಯೋಽಬ್ಧಯಃ ॥ ೯ ॥
ಮೂಲೇ ತಿಷ್ಠತಿ ಕಾಲಾಗ್ನಿರಸ್ಥಿಮಧ್ಯೇ ಚ ವಾಡವಃ ।
ವೈದ್ಯುತೋಽಗ್ನಿಃ ಸುಷುಮ್ನಾಯಾಂ ಪಾರ್ಥಿವೋ ನಾಭಿಮಣ್ಡಲೇ ॥
ಹೃದಿ ತಿಷ್ಠತಿ ಸೂರ್ಯಾಗ್ನಿಃ ಕಪಾಲೇ ಚನ್ದ್ರಮಣ್ಡಲಮ್ ।
ನಕ್ಷತ್ರಾಣ್ಯಪರಾಣ್ಯಾಹುರ್ನೇತ್ರಾದೀನೀನ್ದ್ರಿಯಾಣ್ಯಪಿ ॥ ೧೦ ॥
ಧಾರ್ಯನ್ತೇ ವಾಯುಭಿರ್ಲೋಕಾ ಯಥಾ ಪ್ರವಹಣಾದಿಭಿಃ ।
ಪ್ರಾಣಾದಿಭಿರ್ದಶವಿಧೈಃ ಧಾರ್ಯತೇ ವಾಯುಭಿರ್ವಪುಃ ॥ ೧೨ ॥
ಪ್ರಾಸ್ಯೇಡಾಪಿಙ್ಗಲೇ ಪ್ರಾಣೋ ಮೂಲಾತ್ ಸೂರ್ಯಸ್ವರೂಪತಃ ।
ನಾಸಿಕಾಭ್ಯಾಂ ಬಹಿರ್ಗತ್ವಾ ಲೀಯತೇ ದ್ವಿಷಡಙ್ಗುಲೇ ॥ ೧೩ ॥

ಆಪ್ಯಾಜ್ಯ ಲೇನ ಸೋಮಾತ್ಮಾ ನಾಡೀಭ್ಯಾಮನ್ತರಾವಿಶೇತ್ ।
ಮಲಮೂತ್ರಮರುಚ್ಛುಕ್ರಾಣ್ಯಪಾನೋ ವಿಸೃಜೇದ್ ಬಹಿಃ ॥ ೧೪ ॥
ಅಗ್ನೀಷೋಮಮಯೋ ಭೂತ್ವಾ ಸುಷುಮ್ನಾರನ್ಧ್ರಮಾಶ್ರಿತಃ ।
ಆಬ್ರಹ್ಮರನ್ಧ್ರಮುದ್ಗಚ್ಛನ್ನುದಾನೋ ವರ್ಧತೇ ಸ್ವಯಮ್ ॥ ೧೫ ॥
ವ್ಯಾಪಯೇದ್ ವಪುಷಿ ವ್ಯಾನೋ ಭುಕ್ತಾನ್ನರಸಮನ್ವಹಮ್ ।
ಸನ್ಧುಕ್ಷಣಂ ಸಮಾನಸ್ತು ಕಾಯಾಗ್ನೇಃ ಕುರುತೇ ಸದಾ ॥ ೧೬ ॥
ನಾಗೋ ಹಿಕ್ಕಾಕರಃ ಕೂರ್ಮೋ ನಿಮೇಷೋನ್ಮೇಷಕಾರಕಃ ।
ಕ್ಷುತಂ ಕರೋತಿ ಕೃಕರೋ ದೇವದತ್ತೋ ವಿಜೃಮ್ಭಣಮ್ ॥ ೧೭ ॥
ಸ್ಥೌಲ್ಯಂ ಧನಞ್ಜಯಃ ಕುರ್ಯಾನ್ಮೃತಂ ಚಾಪಿ ನ ಮುಞ್ಚತಿ ।
ಆಕಾಶೋ ಬಹಿರಪ್ಯನ್ತರವಕಾಶಂ ಪ್ರಯಚ್ಛತಿ ॥ ೧೮ ॥
ಚನ್ದ್ರಾರ್ಕೌ ಕಾಲನೇತಾರೌ ಪ್ರಾಣಾಪಾನೌ ಶರೀರಿಣಾಮ್ ।
ಸಾಕ್ಷೀ ಪುರುಷ ಇತ್ಯೇವಂ ಮೂರ್ತ್ಯಷ್ಟಕಮಿದಂ ವಪುಃ ॥ ೧೯ ॥

೮–೧೯. (1) ಬೆನ್ನುಮೂಳೆಯು ಮಹಾಮೇರುವೆಂದೂ (ಉಳಿದ) ಎಲುಬುಗಳು ಕುಲಪರ್ವತಗಳೆಂದೂ (2) ಪಿಂಗಳಾನಾಡಿಯು ಗಂಗೆಯೆಂದೂ ಇಡಾನಾಡಿಯು ಯಮುನಾನದಿಯೆಂದೂ ಹೇಳಿದೆ. ಸುಷುಮ್ನಾನಾಡಿಯು ಸರಸ್ವತಿಯೆನ್ನುತ್ತಾರೆ. ಉಳಿದ ನಾಡಿಗಳು ಪುಣ್ಯನದಿಗಳು ; ಚರ್ಮ, ರಕ್ತ, ಮಾಂಸ, ಕೊಬ್ಬು, ಎಲುಬು, ಮಜ್ಜೆ, ಶುಕ್ರ– ಇವುಗಳು ಏಳು ದ್ವೀಪಗಳು. ಬೆವರು, ಕಣ್ಣೀರು–ಮುಂತಾದವು ಸಮುದ್ರಗಳು. (3) ಮೂಲಾಧಾರದಲ್ಲಿ ಕಾಲಾಗ್ನಿಯಿರುತ್ತದೆ; ಮೂಳೆಗಳ ಮಧ್ಯದಲ್ಲಿ ಬಡಬಾಗ್ನಿ, ಸುಷುಮ್ನೆಯಲ್ಲಿ ಮಿಂಚಿನ ಅಗ್ನಿ, ಹೊಕ್ಕುಳೊಳಗೆ ಭೂಮಿಯ ಅಗ್ನಿ, ಹೃದಯದಲ್ಲಿ ಸೂರ್ಯಾಗ್ನಿ, ತಲೆಯ ಬುರುಡೆಯಲ್ಲಿ ಚಂದ್ರಮಂಡಲ (ಹೀಗೆ ಇರುತ್ತವೆ). ನೇತ್ರಾದೀಂದ್ರಿಯಗಳು ಉಳಿದ ನಕ್ಷತ್ರಗಳೆನ್ನುವರು. (4) ಪ್ರವಹಣವೇ ಮುಂತಾದ ವಾಯುಗಳು ಹೇಗೆ ಲೋಕಗಳನ್ನು ಧರಿಸಿರುತ್ತವೆಯೋ ಹಾಗೆಯೇ ಹತ್ತುಬಗೆಯ ಪ್ರಾಣವೇ ಮುಂತಾದ ವಾಯುಗಳು ಶರೀರವನ್ನು ನಿಲ್ಲಿಸಿಕೊಂಡಿವೆ. (ಹೇಗೆಂದರೆ) : ಮೂಲಾಧಾರದಿಂದ (ಎದ್ದ) ಪ್ರಾಣವು ಇಡಾಪಿಂಗಳೆಗಳೆಂಬ ನಾಡಿಗಳನ್ನು ಸೇರಿ ಸೂರ್ಯರೂಪದಿಂದ (ಬಿಸಿಯಾಗಿ) ಮೂಗಿನ ಹೊಳ್ಳೆಗಳ ಮೂಲಕ ಹೊರಕ್ಕೆ ಹೋಗಿ ಹನ್ನೆರಡಂಗುಲದ ದೂರದಲ್ಲಿ ಕಾಣದಂತಾಗುತ್ತದೆ ; ಚಂದ್ರ

ರೂಪವಾದ **ಅಪಾನವು** ಎಂಟಂಗುಲ(ದ ಕೆಡೆಯಿಂದ) ಬಂದು (ಇಡಾಪಿಂಗಳ) ನಾಡಿಗಳ ದ್ವಾರದಿಂದ ಶರೀರದೊಳಗೆ ಪ್ರವೇಶಿಸಿದೆ. ಮಲಮೂತ್ರವಾಯುಶುಕ್ರಗಳನ್ನು ಹೊರಕ್ಕೆ ಬಿಡುವ **ಉದಾನವು** ಅಗ್ನೀಷೋಮದ ರೂಪವಾಗಿ ಸುಷುಮ್ನಾರಂಧ್ರವನ್ನು ಅವಲಂಬಿಸಿ ಬ್ರಹ್ಮರಂಧ್ರದವರೆಗೆ ಮೇಲಕ್ಕೇರಿ ತಾನೂ ಹಬ್ಬಿಕೊಂಡಿರುತ್ತದೆ. **ವ್ಯಾನವು** ದಿನದಿನವೂ ಉಂಡ ಅನ್ನದ ರಸವನ್ನು ಶರೀರದಲ್ಲಿ ವ್ಯಾಪಿಸುವಂತೆ ಮಾಡುತ್ತದೆ. **ಸಮಾನವು** ಯಾವಾಗಲೂ ಶರೀರದ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುತ್ತಿರುವದು. **ನಾಗವು** ಬಿಕ್ಕಳಿಕೆಯನ್ನುಂಟುಮಾಡುವದು. **ಕೂರ್ಮವು** ಕಣ್ಣನ್ನು ಮುಚ್ಚುವದು, ತೆರೆಯುವದು–ಇವುಗಳನ್ನು ಮಾಡಿಸುವದು. **ಕೃಕರವು** ಸೀನನ್ನುಂಟುಮಾಡುತ್ತದೆ. **ದೇವದತ್ತವು** ಆಕಳಿಕೆಯನ್ನುಂಟುಮಾಡುವದು. **ಧನಂಜಯವು** (ಮೈಯನ್ನು) ದಪ್ಪನಾಗುವಂತೆ ಮಾಡುತ್ತದೆ, (ಅದು) ಸತ್ತವರನ್ನೂ ಬಿಡುವದಿಲ್ಲ. (5) ಆಕಾಶವು ಹೊರಗೂ ಒಳಗೂ ಅವಕಾಶವನ್ನು ಕೊಡುತ್ತಿರುವದು. (6–7) ಕಾಲಕ್ಕೊಡೆಯರಾಗಿರುವ ಚಂದ್ರಸೂರ್ಯರು ಶರೀರಿಗಳ ಪ್ರಾಣಾಪಾನಗಳೇ. (8) ಸಾಕ್ಷಿಯೇ **ಪುರುಷ.** ಹೀಗೆ ಈ ಶರೀರವು ಮೂರ್ತ್ಯಷ್ಟಕ (ರೂಪವಾಗಿರುತ್ತದೆ).

## ವಿವೇಚನೆ

ಈವರೆಗೆ ಬ್ರಹ್ಮಾಂಡದಲ್ಲಿರುವ ಅಷ್ಟಮೂರ್ತಿಗಳನ್ನು ಹೇಗೆ ಶರೀರದಲ್ಲಿ ಭಾವನೆಮಾಡಬೇಕೆಂಬುದನ್ನು ವಿವರಿಸಿದ್ದಾಯಿತು. ಎಂಟುಮೂರ್ತಿಗಳ ವಿವರದ ಆರಂಭದಲ್ಲಿ ನಾವು ಸಂಖ್ಯೆಯನ್ನು ಹಾಕಿ ತೋರಿಸಿರುತ್ತೇವೆ.

## ಅಮನಸ್ಕೋಪಾಸನೆ

**ಸಮನಸ್ಕಮಿದಂ ಯೋಗೀ ಸೇವಮಾನ ಉಪಾಸನಮ್ ।**
**ಅಷ್ಟಾಙ್ಗಯೋಗಯುಕ್ತಸ್ಸನ್ನಮನಸ್ಕಂ ಸ ಗಚ್ಛತಿ ॥ ೨೦ ॥**

೨೦. ಈ ಮನಸ್ಸಿನಿಂದೊಡಗೂಡಿದ ಧ್ಯಾನವನ್ನು ಅಭ್ಯಾಸ ಮಾಡುತ್ತಿರುವ ಯೋಗಿಯು ಅಷ್ಟಾಂಗಯೋಗದಿಂದ ಕೂಡಿಕೊಂಡವನಾದರೆ ಅಮನಸ್ಕವನ್ನು ಪಡೆಯುತ್ತಾನೆ.

## ವಿವೇಚನೆ

ಇದುವರೆಗೆ ಹೇಳಿದ್ದು ಮನಸ್ಸಿನಿಂದ ಮಾಡುವ ಧ್ಯಾನವು. ಇನ್ನುಮುಂದೆ ಅಷ್ಟಾಂಗಯೋಗವನ್ನು ಪಾಡಿ ಕ್ರಮಕ್ರಮವಾಗಿ ಮನಸ್ಸನ್ನು ಕರಗಿಸಿಕೊಳ್ಳುವ ಬಗೆಯನ್ನು ಹೇಳಲಾಗುವದು.

## ಅಷ್ಟಾಂಗಯೋಗ

**ಮನಃಪ್ರಸಾದಃ ಸನ್ತೋಷೋ ಮೌನಮಿನ್ದ್ರಿಯನಿಗ್ರಹಃ ।**
**ದಯಾದಾಕ್ಷಿಣ್ಯಮಾಸ್ತಿಕ್ಯಮಾರ್ಜವಂ ಮಾರ್ದವಂ ಕ್ಷಮಾ　　॥ ೨೧ ॥**
**ಭಾವಶುದ್ಧಿರಹಿಂಸಾ ಚ ಬ್ರಹ್ಮಚರ್ಯಂ ಸ್ಮೃತಿರ್ಧೃತಿಃ ।**
**ಇತ್ಯೇವಮಾದಯೋಽನ್ಯೇ ಚ ಮನಸ್ಸಾಧ್ಯಾ ಯಮಾಸ್ಸ್ಮೃತಾಃ ॥ ೨೨ ॥**

೨೧–೨೨. ಮನಸ್ಸನ್ನು ಸ್ವಚ್ಛವಾಗಿಟ್ಟುಕೊಳ್ಳುವದು, ತೃಪ್ತಿ, ಮೌನ, ಇಂದ್ರಿಯಗಳನ್ನು ಬಿಗಿಹಿಡಿದುಕೊಳ್ಳುವದು, ದಯೆ, ಔದಾರ್ಯ, ಆಸ್ತಿಕನಾಗಿರುವದು, (ಮನಃಕಾಯಕರ್ಮಗಳಲ್ಲಿ) ಋಜುವಾಗಿರುವದು, ಮೃದುಸ್ವಭಾವ, ಸಹನೆ, ಭಾವಗಳು ಶುದ್ಧವಾಗಿರುವದು, ಅಹಿಂಸೆ, ಬ್ರಹ್ಮಚರ್ಯ, (ಬೇಕಾದದ್ದನ್ನು) ನೆನಪಿನಲ್ಲಿಟ್ಟುಕೊಂಡಿರುವದು, (ಶರೀರಾದಿಗಳನ್ನು ಕುಸಿಯದಂತೆ) ತಡೆದಿಟ್ಟುಕೊಳ್ಳುವಿಕೆ, ಮತ್ತು ಇದೇ ಬಗೆಯ ಬೇರೆಯ ಮನಸ್ಸಿನಿಂದ ಸಾಧಿಸಿಕೊಳ್ಳಬೇಕಾದ ಸಾಧನಗಳು **ಯಮ**ವೆನಿಸುತ್ತವೆ.

**ಸ್ನಾನಂ ಶೌಚಂ ಕ್ರತುಸ್ಸತ್ಯಂ ಜಪೋ ಹೋಮಶ್ಚ ತರ್ಪಣಮ್ ।**
**ತಪೋ ದಾನಂ ತಿತಿಕ್ಷಾ ಚ ನಮಸ್ಕಾರಃ ಪ್ರದಕ್ಷಿಣಮ್　　॥ ೨೩ ॥**
**ವ್ರತೋಪವಾಸಾದ್ಯಾಶ್ಚಾನ್ಯೇ ಕಾಯಿಕಾ ನಿಯಮಾಃ ಸ್ಮೃತಾಃ ॥೨೩ತ್ತ॥**

೨೩–೨೩ತ್ತ. ಸ್ನಾನ, ಶುಚಿಯಾಗಿರುವದು, (ದೇವ)ಪೂಜೆ, ನಿಜವನ್ನಾಡುವದು, ಜಪ, ಅಗ್ನಿಯಲ್ಲಿ ಹೋಮಮಾಡುವದು, ತರ್ಪಣ ಮಾಡುವದು, (ಇಂದ್ರಿಯಸಂಯಮರೂಪವಾದ) ತಪಸ್ಸು, ದಾನ, (ಶೀತೋಷ್ಣಾದಿಗಳನ್ನು) ತಡೆದುಕೊಳ್ಳುವದು, ನಮಸ್ಕಾರ, ಪ್ರದಕ್ಷಿಣೆ –ವ್ರತೋಪವಾಸಗಳೇ ಮುಂತಾದ ಮಿಕ್ಕ ಶರೀರಸಾಧ್ಯವಾದ (ಸಾಧನಗಳು) **ನಿಯಮ**ಗಳೆನಿಸುತ್ತವೆ.

**ಸ್ವಸ್ತಿಕಂ ಗೋಮುಖಂ ಪದ್ಮಂ ಹಂಸಾಖ್ಯಂ ಬ್ರಾಹ್ಮಮಾಸನಮ್ ॥ ೨೪**
**ನೃಸಿಂಹಂ ಗರುಡಂ ಕೌರ್ಮಂ ನಾಗಾಖ್ಯಂ ವೈಷ್ಣವಾಸನಮ್ ।**
**ವೀರಂ ಮಯೂರಂ ವಜ್ರಾಖ್ಯಂ ಸಿದ್ಧಾಖ್ಯಂ ರೌದ್ರಮಾಸನಮ್ ॥ ೨೫॥**
**ಯೋನ್ಯಾಸನಂ ವಿದುಶ್ಶಾಕ್ತಂ ಶೈವಂ ಪಶ್ಚಿಮತಾನಕಮ್ ॥ ೨೫½ ॥**

೨೪–೨೫½. ಸ್ವಸ್ತಿಕ, ಗೋಮುಖ, ಪದ್ಮ, ಹಂಸವೆಂಬುದು ಬ್ರಾಹ್ಮ. ನೃಸಿಂಹ, ಗರುಡ, ಕೂರ್ಮ, ನಾಗವೆಂಬ (ಆಸನ), ವೈಷ್ಣವ. ವೀರ, ಮಯೂರ, ವಜ್ರ, ಸಿದ್ಧಾಸನವೆಂಬುದು ರೌದ್ರ. ಯೋನ್ಯಾಸನವು ಶಾಕ್ತೇಯವು, ಪಶ್ಚಿಮತಾನಕಾಸನವು ಶೈವವು– ಎನ್ನುತ್ತಾರೆ.

### ವಿವೇಚನೆ

ಇಲ್ಲಿ ಹೇಳಿರುವ ಆಸನಗಳ ವಿವರವನ್ನು ಯೋಗಗ್ರಂಥಗಳಿಂದ ತಿಳಿದುಕೊಳ್ಳಬೇಕು. ಪತಂಜಲಿಗಳು ಸ್ಥಿರವಾಗಿಯೂ ಸುಖವಾಗಿಯೂ ಇರುವದೇ ಆಸನ– ಎಂದಿಷ್ಟೇ ಬರೆದಿರುತ್ತಾರೆ. **ಬಾದರಾಯಣಾಚಾರ್ಯರು** (ವೇ.ಸೂ. ೪–೧–೧) ಯಾವ ಆಸನದಲ್ಲಿ ಏಕಾಗ್ರತೆಯು ದಕ್ಕುವದೋ ಆ ಆಸನವನ್ನೇ ಉಪಾಸನೆಗೆ ಬಳಸಿಕೊಳ್ಳಬೇಕೆಂದಿದಾರೆ. **ಶಂಕರಾಚಾರ್ಯರು** ಉಪಾಸನೆಗೆ ಆಸನವೂ ಅಂಗ; ಆದ್ದರಿಂದಲೇ ಯೋಗಶಾಸ್ತ್ರದಲ್ಲಿ ಪದ್ಮಕವೇ ಮುಂತಾದ ಆಸನಗಳನ್ನು ಹೇಳಿರುತ್ತಾರೆ; ಆದರೆ ಇಂಥ ಆಸನವೇ ಆಗಬೇಕೆಂಬ ನಿಯಮವಿಲ್ಲ– ಎಂದು ಬರೆದಿರುತ್ತಾರೆ. (ಸೂ. ಭಾ. ೪–೧–೧೦, ೧೧).

**ನಿರಾಲಮ್ಬನಯೋಗಸ್ಯ ನಿರಾಲಮ್ಬನಮಾಸನಮ್ ॥ ೨೬ ॥**
**ನಿರಾಲಮ್ಬತಯಾ ಧ್ಯಾನಂ ನಿರಾಲಮ್ಬಸ್ಸದಾಶಿವಃ ॥ ೨೬½ ॥**

೨೬–೨೬½. ನಿರಾಲಂಬನಯೋಗಕ್ಕೆ ನಿರಾಲಂಬನವಾದ ಆಸನವು (ಬೇಕು). (ಅದು) ಯಾವ ಆಲಂಬನವಿಲ್ಲದ್ದೆಂದು ಮಾಡುವ ಧ್ಯಾನವು. ಸದಾಶಿವನು ಆಲಂಬನರಹಿತನಾಗಿರುತ್ತಾನೆ.

### ವಿವೇಚನೆ

ಪರಮಾತ್ಮನು ಯಾವದೊಂದು ಆಲಂಬನವೂ ಇಲ್ಲದೆ ತನ್ನಲ್ಲಿ ತಾನು ಇದ್ದುಕೊಂಡಿರುತ್ತಾನೆಂದು ಧ್ಯಾನಿಸುವದೇ ನಿರಾಲಂಬನಯೋಗವು; ಆ ಯೋಗಕ್ಕೆ ಯಾವ ಶರೀರಾವಯವಗಳ ಆಲಂಬನೆಯೂ ಇರುವದಿಲ್ಲ– ಎಂಬುದು ವಾಕ್ಯದ ತಾತ್ಪರ್ಯ. ಆದರೆ ಪರಮಾತ್ಮನು ನಿರಾಲಂಬನನೆಂದು ಧ್ಯಾನಿಸುವದು ಯೋಗವೇ ಅಲ್ಲ; ಅದು ಪರಮಾತ್ಮನು ನಿರ್ವಿಶೇಷನು, ಅವನೇ ನನ್ನ ಆತ್ಮನು– ಎಂದು

ಅನುಭವಕ್ಕೆ ತಂದುಕೊಳ್ಳುವದು; ಅದನ್ನು ಈ ಯೋಗಪ್ರಕರಣಕ್ಕೆ ಗ್ರಂಥಕರ್ತರು ಹೇಗೆ ಹೊಂದಿಸಿಕೊಂಡಿರುತ್ತಾರೋ ತಿಳಿಯುವಂತಿಲ್ಲ.

**ರೇಚಕಃ ಪೂರಕಶ್ಚೈವ ಕುಮ್ಭಕಃ ಪ್ರಾಣಸಂಯಮಃ ॥ ೨೭ ॥**
**ಇನ್ದ್ರಿಯಾಣಾಂ ಸಮಸ್ತಾನಾಂ ವಿಷಯೇಭ್ಯೋ ನಿವಾರಣಮ್ ॥**
**ಪ್ರತ್ಯಾಹಾರ ಇತಿ ಪ್ರೋಕ್ತಂ ಪ್ರತ್ಯಾಹಾರಾರ್ಥವೇದಿಭಿಃ ॥ ೨೮ ॥**
**ಆಧಾರೇ ಕ್ವಾಪಿ ಮನಸಃ ಸ್ಥಾಪನಂ ಧಾರಣೋಚ್ಯತೇ ।**
**ಬ್ರಹ್ಮವಿಷ್ಣುಶಿವಾದೀನಾಂ ಚಿನ್ತಾ ಧ್ಯಾನಂ ಪ್ರಚಕ್ಷತೇ ॥ ೨೯ ॥**
**ಧ್ಯಾನಾದಸ್ಪನ್ದನಂ ಬುದ್ಧೇಃ ಸಮಾಧಿರಭಿಧೀಯತೇ ॥ ೨೯೹ ॥**

೨೭-೨೯೹. ರೇಚಕ (ಉಸಿರನ್ನು ಹೊರಕ್ಕೆ ಬಿಡುವದು), ಪೂರಕ (ಅದನ್ನು ಒಳಕ್ಕೆಳೆದುಕೊಳ್ಳುವದು), ಕುಂಭಕ (ಉಸಿರನ್ನು ಕಟ್ಟುವದು- ಈ ಮೂರೂ) **ಪ್ರಾಣಾಯಾಮವು.** ಇಂದ್ರಿಯಗಳೆಲ್ಲವನ್ನೂ ವಿಷಯಗಳಿಂದ ಹಿಂದಕ್ಕೆಳೆದುಕೊಳ್ಳುವದು **ಪ್ರತ್ಯಾಹಾರ**-ಎಂದು ಪ್ರತ್ಯಾಹಾರವೆಂಬ (ಶಬ್ದದ) ಅರ್ಥವನ್ನು ಬಲ್ಲವರು ಹೇಳುತ್ತಾರೆ. ಯಾವದಾದರೊಂದು ಆಧಾರದಲ್ಲಿ ಮನಸ್ಸನ್ನು ನಿಲ್ಲಿಸಿಕೊಳ್ಳುವದು **ಧಾರಣೆ**ಯೆನಿಸುವದು. ಬ್ರಹ್ಮ, ವಿಷ್ಣು, ಶಿವ- ಮೊದಲಾದವರನ್ನು ಚಿಂತಿಸುವದನ್ನು **ಧ್ಯಾನ**ವೆನ್ನುವರು. ಧ್ಯಾನದಿಂದ ಬುದ್ಧಿಯು ಅಲುಗಾಡದೆ ಇರುವದು **ಸಮಾಧಿ**ಯೆನಿಸುವದು.

## ವಿವೇಚನೆ

ಇಲ್ಲಿ ಅಷ್ಟಾಂಗಯೋಗದ ಉಳಿದ ಐದು ಅಂಗಗಳನ್ನು ಹೇಳಿದೆ. ಬ್ರಹ್ಮವಿಷ್ಣ್ವಾದಿಗಳನ್ನು ಚಿಂತಿಸುವದು ಧ್ಯಾನವೆಂಬ ಲಕ್ಷಣವನ್ನು ಎಲ್ಲಿಂದ ಗ್ರಂಥಕರ್ತರು ತಂದರು ? ಅದು ಹೇಗೆ ಇಲ್ಲಿಗೆ ಸಂಗತ ?- ಎಂಬುದು ತಿಳಿಯುವಂತಿಲ್ಲ.

**ಅಮನಸ್ಕಸಮಾಧಿಸ್ತು ಸರ್ವಚಿನ್ತಾವಿವರ್ಜಿತಮ್ ॥ ೩೦ ॥**

೩೦. ಅಮನಸ್ಕಸಮಾಧಿಯೆಂಬುದಾದರೊ, ಎಲ್ಲಾ ಚಿಂತೆಗಳನ್ನೂ ಬಿಟ್ಟುಬಿಡುವದು.

## ವಿವೇಚನೆ

ಬುದ್ಧಿಯು ಅಲುಗಾಡದೆ ಇರುವದೇ **ಸಮಾಧಿ**ಯೆಂದೂ ಎಲ್ಲಾ ಚಿಂತನಗಳನ್ನೂ ಬಿಟ್ಟಿರುವದು **ಅಮನಸ್ಕಸಮಾಧಿ**ಯೆಂದೂ ಇಲ್ಲಿ ಹೇಳಿರುವದನ್ನು

ಯೋಗಶಾಸ್ತ್ರಕ್ಕೆ ಹೇಗೋ ಹೊಂದಿಸಬಹುದಾದರೂ ಪ್ರಕೃತವೇದಾಂತಕ್ಕೆ ಹೇಗೆ ಹೊಂದಿಸಬೇಕೆಂಬುದು ತಿಳಿಯಲಿಲ್ಲ.

## ಯೋಗಸಾಧನೆ

**ಚಿತ್ತೇ ನಿಶ್ಚಲತಾಂ ಯಾತೇ ಪ್ರಾಣೋ ಭವತಿ ನಿಶ್ಚಲಃ ।**
**ಚಿತ್ತಸ್ಯ ನಿಶ್ಚಲತ್ವಾಯ ಯೋಗಂ ಸಧ್ಯಾನಮಭ್ಯಸೇತ್ ॥ ೩೧ ॥**
**ಆಕುಞ್ಚನಮಪಾನಸ್ಯ ಪ್ರಾಣಸ್ಯ ಚ ನಿರೋಧನಮ್ ।**
**ಲಮ್ಬಿಕೋಪರಿ ಜಿಹ್ವಾಯಾಃ ಸ್ಥಾಪನಂ ಯೋಗಸಾಧನಮ್ ॥ ೩೨ ॥**

೩೧–೩೨. ಚಿತ್ತವು ನಿಶ್ಚಲವಾದರೆ ಪ್ರಾಣವೂ ನಿಶ್ಚಲವಾಗುತ್ತದೆ. ಚಿತ್ತವು ನಿಶ್ಚಲವಾಗುವದಕ್ಕಾಗಿ ಧ್ಯಾನಸಹಿತವಾದ ಯೋಗವನ್ನು ಅಭ್ಯಾಸಮಾಡಬೇಕು. ಅಪಾನವನ್ನು ಸಂಕುಚಿತವಾಗಿ ಮಾಡಿಕೊಳ್ಳುವದೂ ಪ್ರಾಣವನ್ನು ತಡೆಗಟ್ಟುವದೂ ನಾಲಗೆಯನ್ನು ಕಿರುನಾಲಗೆಯಮೇಲೆ ಇರಿಸಿಕೊಳ್ಳುವದೂ ಯೋಗಸಾಧನವು.

## ವಿವೇಚನೆ

'ಚಿತ್ತವು ನಿಶ್ಚಲವಾದರೆ ಪ್ರಾಣವೂ ನಿಶ್ಚಲವಾಗುವದು' ಎಂದು ಹೇಳುವದಕ್ಕಿಂತ 'ಪ್ರಾಣವು ನಿಶ್ಚಲವಾದಂತೆ ಚಿತ್ತವೂ ನಿಶ್ಚಲವಾಗುವದು'– ಎನ್ನುವದು ಪ್ರಕೃತಕ್ಕೆ ಹೆಚ್ಚು ಒಪ್ಪುವ ಮಾತು; ಏಕೆಂದರೆ ಚಿತ್ತದ ನೈಶ್ಚಲ್ಯವೇ ಧ್ಯಾನಕ್ಕೆ ಬೇಕಾದದ್ದು. ಇಲ್ಲಿ ಲಂಬಿಕಾಯೋಗವನ್ನು ಯೋಗಸಾಧನವೆಂದು ಕರೆದಿರುವದು ಅಪ್ರಕೃತವೆಂದೇ ನಮ್ಮ ಭಾವನೆ. ಏಕೆಂದರೆ ಇದು ಧ್ಯಾನಯೋಗವೇ ಹೊರತು ಹಠಯೋಗವಲ್ಲ. ಮಾಯೆಯು ಹೋಗುವದು ಹೇಗೆ?– ಎಂಬ ಪ್ರಶ್ನೆಯನ್ನು ತೆಗೆದು ಅದಕ್ಕೆ ಉತ್ತರವನ್ನು ಹೇಳುವದಕ್ಕಾಗಿ ಉಪಾಸನೆಯನ್ನೂ ಯೋಗವನ್ನೂ ಹೇಳುವದಕ್ಕೆ ಆರಂಭಿಸಿತ್ತು. ಅಧ್ಯಾತ್ಮಯೋಗವೆಂಬ ಹೆಸರಿನಿಂದ ಕಠೋಪನಿಷತ್ತಿನಲ್ಲಿಯೂ (೧–೨–೧೨; ೧–೩–೧೩), ಧ್ಯಾನಯೋಗವೆಂಬ ಹೆಸರಿನಿಂದ ಭಗವದ್ಗೀತೆಯ ಆರನೆಯ ಅಧ್ಯಾಯದಲ್ಲಿಯೂ ಜ್ಞಾನಕ್ಕೆ ಸಾಧನವನ್ನು ಹೇಳಿರುವಲ್ಲಿ, ಇಲ್ಲಿ ಜ್ಞಾನದ ದ್ವಾರವೇ ಅಲ್ಲದ ಚಿತ್ತನೈಶ್ಚಲ್ಯ, ಲಂಬಿಕಾಯೋಗ– ಇವುಗಳನ್ನೇ ಹೇಳಿರುವದು ವೇದಾಂತಸಿದ್ಧಾಂತಕ್ಕೂ ಅನುಭವಕ್ಕೂ ಹೊಂದದ ಮಾತೆಂಬುದನ್ನು ಮತ್ತೆ ಬೇರೆ ಹೇಳಬೇಕಾದದ್ದೇ ಇಲ್ಲ. ಪೀಠಿಕೆಯನ್ನು ನೋಡಿ.

## ಯೋಗದಿಂದೊದಗುವ ಸಿದ್ಧಿಗಳು

**ಚಿತ್ತೇ ನಿಶ್ಚಲತಾಂ ಯಾತೇ ಪ್ರಾಣೇ ಮಧ್ಯಪಥಂ ಗತೇ ।**
**ಚಿಹ್ನಾನ್ಯೇತಾನಿ ಜಾಯನ್ತೇ ಪಞ್ಚಭೂತಜಯಾತ್ ಪೃಥಕ್ ॥ ೩೩ ॥**
**ಮಲಮೂತ್ರಕಫಾಲ್ಪತ್ವಮಾರೋಗ್ಯಂ ಲಘುತಾ ತನೋಃ ।**
**ಸುಗನ್ಧಸ್ವರವರ್ಣತ್ವಂ[1] ಪ್ರಥಮಂ ಯೋಗಲಕ್ಷಣಮ್ ॥ ೩೪ ॥**
**ಕಣ್ಟಕಾಗ್ರೇಷ್ವಸಙ್ಗತ್ವಂ ಜಲಪಙ್ಕೇಷ್ವಮಜ್ಜನಮ್ ।**
**ಕ್ಷುತ್ತೃಡಾದಿಸಹಿಷ್ಣುತ್ವಂ ದ್ವಿತೀಯಂ ಯೋಗಲಕ್ಷಣಮ್ ॥ ೩೫ ॥**
**ಬಹ್ವನ್ನಪಾನಭೋಕ್ತೃತ್ವಮಾತಪಾಗ್ನಿ[2]ಸಹಿಷ್ಣುತಾ ।**
**ದರ್ಶನಂ ಶ್ರವಣಂ ದೂರಾತ್ ತೃತೀಯಂ ಯೋಗಲಕ್ಷಣಮ್ ॥ ೩೬ ॥**
**ಮಣ್ಡೂಕಪ್ಲವನಂ ಭೂಮೌ ಮರ್ಕಟಪ್ಲವನಂ ದ್ರುಮೇ ।**
**ಆಕಾಶಗಮನಂ ಚೇತಿ ಚತುರ್ಥಂ ಯೋಗಲಕ್ಷಣಮ್ ॥ ೩೭ ॥**
**ಜ್ಞಾನಂ ತ್ರಿಕಾಲವಿಷಯಮೈಶ್ವರ್ಯಮಣಿಮಾದಿಕಮ್ ।**
**ಅನನ್ತಶಕ್ತಿಮತ್ತ್ವಂ ಚ ಪಞ್ಚಮಂ ಯೋಗಲಕ್ಷಣಮ್ ॥ ೩೮ ॥**

೩೩-೩೮. ಚಿತ್ತವು ನೈಶ್ಚಲ್ಯವನ್ನು ಹೊಂದಿ ಪ್ರಾಣವು ಮಧ್ಯಮಾರ್ಗವನ್ನು ಹೊಂದಿದರೆ ಪಂಚಭೂತಗಳ ಜಯದಿಂದ ಬೇರೆಬೇರೆಯಾದ ಗುರುತುಗಳುಂಟಾಗುವವು; (ಹೇಗೆಂದರೆ) : ಮಲ, ಮೂತ್ರ, ಕಫ- ಇವು ಸ್ವಲ್ಪವಾಗುವದು, ಆರೋಗ್ಯ, ಶರೀರವು ಹಗುರವಾಗುವದು, ಸುಗಂಧ, ಸುಸ್ವರ, ಸುವರ್ಣಗಳುಂಟಾಗುವದು- ಇದು ಯೋಗದ ಮೊದಲನೆಯ ಲಕ್ಷಣ. (೨) ಮುಳ್ಳಿನ ಮೊನೆಗಳು ಅಂಟಿಕೊಳ್ಳದಿರುವದು, ನೀರುಕೆಸರುಗಳಲ್ಲಿ ಮುಳುಗದೆ ಇರುವದು, ಹಸಿವುನೀರಡಿಕೆಗಳೇ ಮುಂತಾದದ್ದನ್ನು ಸಹಿಸಿಕೊಳ್ಳುವದು- ಇದು ಯೋಗದ ಎರಡನೆಯ ಲಕ್ಷಣವು. (೩) ಹೆಚ್ಚಾಗಿ ಅನ್ನಪಾನಗಳನ್ನು ಸೇವಿಸುವದು, ಬಿಸಿಲುಬೆಂಕಿಗಳ (ತಾಪವನ್ನು) ತಡೆದುಕೊಳ್ಳುವದು, ದೂರದಿಂದಲೇ ಕಾಣುವದು, ಕೇಳುವದು- ಇವು ಯೋಗದ ಮೂರನೆಯ ಗುರುತು. (೪) ನೆಲದಮೇಲೆ ಕಪ್ಪೆಯಂತೆ ಹಾರುವದು, ಮರದಮೇಲೆ ಕಪಿಯಂತೆ ನೆಗೆಯುವದು, ಆಕಾಶದಲ್ಲಿ ನಡೆಯುವದು- ಎಂಬುದು ಯೋಗದ ನಾಲ್ಕನೆಯ

1. 'ಸುಗಂಧಸ್ಸ್ವರ್ಣವರ್ಣತ್ವಮ್'- ಎಂಬ ಪಾಠಕ್ಕೆ, ಸುವಾಸನೆ, ಚಿನ್ನದ ಕಾಂತಿ- ಇವುಗಳುಂಟಾಗುವದು ಎಂದರ್ಥ. 2. 'ಆತಪಾದಿ' ಎಂದು ಪಾಠಾಂತರ.

ಲಕ್ಷಣವು; (೫) ಮೂರು ಕಾಲದಲ್ಲಿಯೂ ಆಗುವದನ್ನು ಅರಿತು ಕೊಳ್ಳುವದು, ಅಣಿಮಾದಿಸಿದ್ಧಿಗಳು, ಅನಂತಶಕ್ತಿಗಳನ್ನು ಪಡೆದು ಕೊಳ್ಳುವದು- ಇವು ಯೋಗದ ಐದನೆಯ ಗುರುತು.

## ವಿವೇಚನೆ

ಶ್ವೇತಾಶ್ವತರೋಪನಿಷತ್ತಿನ ಎರಡನೆಯ ಅಧ್ಯಾಯದಲ್ಲಿ (೧೨, ೧೩) ಕೆಲವು ಯೋಗಸಿದ್ಧಿಗಳನ್ನು ಹೇಳಿರುತ್ತದೆ. ಪ್ರಕೃತ ಮೂಲಶ್ಲೋಕದಲ್ಲಿ ಅಷ್ಟಮೂರ್ತಿಗಳು ಪರಮಾತ್ಮನಿಗೇ ಸೇರಿದವು; ಆತನನ್ನು ಬಿಟ್ಟರೆ ಮತ್ತೆ ಯಾವದೂ ವ್ಯತಿರಿಕ್ತ ವಾಗಿಲ್ಲವೆಂಬುದು ತತ್ತ್ವದ ವಿಮರ್ಶೆಯನ್ನು ಮಾಡಿದವರಿಗೆ ಗೊತ್ತಾಗುವದು- ಎಂದಿಷ್ಟೇ ಇದೆಯೇ ಹೊರತು ಮತ್ತೆ ಬೇರೆಯ ಸಿದ್ಧಿಗಳ ಸೊಲ್ಲೂ ಇಲ್ಲ. ಹೀಗಿರು ವಲ್ಲಿ ಅದನ್ನು ಇಲ್ಲಿ ಏತಕ್ಕೆ ಇಷ್ಟು ವಿಸ್ತಾರವಾಗಿ ಹೇಳಿದೆಯೆಂಬುದು ತಿಳಿಯು ವಂತಿಲ್ಲ. ಮುಂದಿನ ಶ್ಲೋಕದಲ್ಲಿ ಹೇಳಿರುವ ಅಣಿಮಾದಿಸಿದ್ಧಿಗಳ ವಿಷಯವನ್ನು ಅಲ್ಲಿರುವ ಮಾನಸೋಲ್ಲಾಸದ ವಿವೇಚನೆಯಲ್ಲಿಯೇ ಮಾಡುವೆವು.

**ಪ್ರಾಣೇ ಸುಷುಮ್ನಾಂ ಸಂಪ್ರಾಪ್ತೇ ನಾದೋಽನ್ತಃ ಶ್ರೂಯತೇಽಷ್ಟಧಾ ।**
**ಘಣ್ಟಾದುನ್ದುಭಿಶಙ್ಖಾಬ್ಧಿವೀಣಾವೇಣ್ವಾದಿತಾಲವತ್ ॥ ೩೯ ॥**
**ತನೂನಪಾತ್ತಟಿತ್ತಾರಾತಾರೇಶತಪನೋಪಮಮ್ ।**
**ಬ್ರಹ್ಮನಾಡೀಂ ಗತೇ ಪ್ರಾಣೇ ಬಿಮ್ಬರೂಪಂ ಪ್ರಕಾಶತೇ ॥ ೪೦ ॥**
**ಶ್ವಾಸಾಶ್ಚರನ್ತಿ ಯಾವನ್ತೋ ಮನುಷ್ಯಸ್ಯ ದಿನಂ ಪ್ರತಿ ।**
**ತಾವನ್ತಿ ಯೋಜನಾನ್ಯರ್ಕಃ ಶ್ವಾಸೇ ಶ್ವಾಸೇ ಪ್ರಧಾವತಿ ॥ ೪೧ ॥**
**ಏಕವಿಂಶತಿಸಾಹಸ್ರಂ ಷಟ್ಛತಂ ಶ್ವಾಸಸಙ್ಖ್ಯಯಾ ।**
**ಸೋಽಹಮಿತ್ಯುಚ್ಚರತ್ಯಾತ್ಮಾ ಮನ್ತ್ರಂ ಪ್ರತ್ಯಹಮಾಯುಷೇ ॥ ೪೨ ॥**
**ಸಕಾರಂ ಚ ಹಕಾರಂ ಚ ಲೋಪಯಿತ್ವಾ ಪ್ರಯೋಜಯೇತ್ ।**
**ಸನ್ಧಿಂ ವೈ ಪೂರ್ವರೂಪಾಖ್ಯಂ ತತೋಽಸೌ ಪ್ರಣವೋ ಭವೇತ್ ॥ ೪೩ ॥**

೩೯-೪೩. ಪ್ರಾಣವು ಸುಷುಮ್ನಾನಾಡಿಯನ್ನು ಸೇರಲು, ಒಳಗೆ- ಘಂಟೆ, ಭೇರಿ, ಶಂಖ, ಸಮುದ್ರ, ವೀಣೆ, ಕೊಳಲು, ತಾಳ -ಇವೇ ಮುಂತಾದವಂತೆ ಎಂಟು ಬಗೆಯ ಧ್ವನಿಯು ಕೇಳಬರುತ್ತದೆ. ಪ್ರಾಣವು **ಬ್ರಹ್ಮ(ಸುಷುಮ್ನಾ)ನಾಡಿಯನ್ನು** ಸೇರಲು, ಬೆಂಕಿ, ಮಿಂಚು, ನಕ್ಷತ್ರ, ಚಂದ್ರ, ಸೂರ್ಯ- ಇವರಂತೆ ಹೊಳೆಯುವ (ಈಶ್ವರನ) ಬಿಂಬರೂಪವು ತೋರಿಕೊಳ್ಳುತ್ತದೆ. ಮನುಷ್ಯನಿಗೆ ದಿನದಿನವೂ ಎಷ್ಟು ಶ್ವಾಸಗಳು ಚಲಿಸುತ್ತವೆಯೋ ಅಷ್ಟಷ್ಟು

ಯೋಜನಗಳ ದೂರಕ್ಕೂ ಪ್ರತಿಯೊಂದು ಶ್ವಾಸಕ್ಕೂ ಸೂರ್ಯನು ಓಡುತ್ತಿರುತ್ತಾನೆ. (ಮನುಷ್ಯನು) ಆಯುಸ್ಸಿನ ಪ್ರತಿಯೊಂದು ದಿನವೂ ಶ್ವಾಸಗಳ ಸಂಖ್ಯೆಗೆ ಸರಿಯಾಗಿ ಇಪ್ಪತ್ತೊಂದು ಸಾವಿರದ ಆರುನೂರು ಸಲ 'ಸೋಽಹಂ' (ಅವನೇ ನಾನು) ಎಂಬ ಮಂತ್ರವನ್ನು ಉಚ್ಚರಿಸುತ್ತಿರುತ್ತಾನೆ. ಸಕಾರವನ್ನೂ ಹಕಾರವನ್ನೂ ಲೋಪಮಾಡಿ ಪೂರ್ವರೂಪವೆಂಬ ಸಂಧಿಯನ್ನು ಮಾಡಿಕೊಳ್ಳಬೇಕು; ಆದರಿಂದ ಅದು ಪ್ರಣವವಾಗುತ್ತದೆ.

### ವಿವೇಚನೆ

ಇಲ್ಲಿ ಹೇಳಿರುವ ಎಂಟುಬಗೆಯ ನಾದಗಳಲ್ಲಿ ಸಂಖ್ಯಾಪೂರಣೆಗೆ ಮೃದಂಗದ ಧ್ವನಿಯನ್ನೂ ಸೇರಿಸಿಕೊಳ್ಳಬೇಕು. ಈಶ್ವರನ ಬಿಂಬರೂಪವೆಂದರೆ ಯಾವದೆಂದು ಇಲ್ಲಿ ವಿವರಿಸಿಲ್ಲ. ವ್ಯಾಖ್ಯಾನಕಾರರೂ ಬೆಂಕಿಯೇ ಮುಂತಾದವುಗಳಂತೆ ಹೊಳೆಯುತ್ತದೆ- ಎಂದಿಷ್ಟೇ ಹೇಳಿರುತ್ತಾರೆ. ಸೂರ್ಯನ ಗತಿಯನ್ನು ಶ್ವಾಸಕ್ಕೆ ಹೊಂದಿಸಿರುವದರ ಪ್ರಯೋಜನವೇನೆಂಬುದೂ ತಿಳಿಯುವಂತಿಲ್ಲ. ದಿನದ ಶ್ವಾಸಸಂಖ್ಯೆಯನ್ನು ಹೇಳಿ ಅಷ್ಟು ಸಲ 'ಸೋಽಹಂ' ಮಂತ್ರವನ್ನುಚ್ಚರಿಸುತ್ತಾನೆಂದೂ (=ಉಚ್ಛ್ವಾಸಕ್ಕೆ 'ಸೋ' ಎಂದೂ ನಿಃಶ್ವಾಸಕ್ಕೆ 'ಹಮ್' ಎಂದೂ ಉಚ್ಚರಿಸಿದಂತೆ ಆಯಿತೆಂದೂ), 'ಸೋಽಹಂ'ಮಂತ್ರದಲ್ಲಿ ಓಂಕಾರವೇ ಅಡಗಿದೆಯೆಂದು ಭಾವಿಸಬೇಕೆಂದೂ ಗ್ರಂಥಕರ್ತರ ಅಭಿಪ್ರಾಯವಿರಬಹುದು. ಇಲ್ಲಿ ಶ್ವಾಸೋಚ್ಛ್ವಾಸಗಳನ್ನು ಸೇರಿಸಿದರೆ ಪ್ರಣವಭಾವನೆಯು ಬಂದಂತಾಗುವದೇ ಹೊರತು ಉಪನಿಷತ್ತುಗಳಲ್ಲಿ ಹೇಳಿರುವ (1) ಪ್ರಣವವೇ ವೇದಸಾರವೆಂಬುದನ್ನಾಗಲಿ (2) ಪ್ರಣವವು ಪರಮಾತ್ಮನ ಪ್ರತೀಕವೆಂಬ ಉಪಾಸನೆಯ ಕ್ರಮವನ್ನಾಗಲಿ (3) ಅದು ಆತ್ಮನ ವಾಚಕವೆಂಬುದರ ಉಪಾಸನೆಯನ್ನಾಗಲಿ ಪರಾಮರ್ಶಿಸಿಲ್ಲ. (4) ಗೌಡಪಾದಕಾರಿಕೆಯಲ್ಲಿ ಹೇಳಿರುವಂತೆ ಪ್ರಣವವೇ ಪರಾಪರಬ್ರಹ್ಮವೆಂಬ ವೇದಾಂತಾರ್ಥವನ್ನೂ ಇಲ್ಲಿ ಹೇಳಿಲ್ಲ; ಮಾಂಡೂಕ್ಯದಲ್ಲಿ ಹೇಳಿರುವಂತೆ ಓಂಕಾರವೆಂಬುದು ಮಾತ್ರಾಪಾದಗಳನ್ನು ಮೀರಿದ ಅದ್ವಿತೀಯಾತ್ಮತತ್ತ್ವವೇ ಎಂಬ ಸಿದ್ಧಾಂತದ ಗಂಧಗಾಳಿಯೂ ಇಲ್ಲಿಲ್ಲ.

ಪರಮಾತ್ಮನಿಗಿಂತ ವ್ಯತಿರಿಕ್ತವಾಗಿ ಯಾವದೂ ಇಲ್ಲ ಎಂಬ ತತ್ತ್ವವನ್ನು ಸ್ತೋತ್ರರೂಪವಾದ ಮೂಲದಲ್ಲಿ ಹೇಳಿದ್ದರೂ ಇಲ್ಲಿ ಅದನ್ನು ಕೈಬಿಟ್ಟಿರುತ್ತದೆ ಎಂಬುದನ್ನು ಮತ್ತೊಮ್ಮೆ ಓದುಗರು ನೆನಪಿಗೆ ತಂದುಕೊಳ್ಳಬೇಕು.

**ಅಕಾರಶ್ಚಾಪ್ಯುಕಾರಶ್ಚ ಮಕಾರೋ ಬಿನ್ದುನಾದಕೌ ।**
**ಷಡ್ಜಾಕ್ಷರಾಣ್ಯಮೂನ್ಯಾಹುಃ ಪ್ರಣವಸ್ಥಾನಿ ಪಣ್ಡಿತಾಃ ॥ ೪೪ ॥**

**ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚಾಪೀಶ್ವರಶ್ಚ ಸದಾಶಿವಃ ।**
**ತೇಷ್ವಕ್ಷರೇಷು ತಿಷ್ಠನ್ತಿ ಷಟ್ತ್ರಿಂಶತ್ತತ್ತ್ವಸಂಯುತಾಃ ॥ ೪೫ ॥**

೪೪–೪೫. ಅಕಾರ, ಉಕಾರ, ಮಕಾರ, ಬಿಂದು, ನಾದ– ಈ ಐದಕ್ಷರಗಳು ಪ್ರಣವದಲ್ಲಿವೆಯೆಂದು ಪಂಡಿತರು ಹೇಳುತ್ತಾರೆ. ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ– (ಇವರು) ಆ ಅಕ್ಷರಗಳಲ್ಲಿ ಮೂವತ್ತಾರು ತತ್ತ್ವಗಳೊಡನೆ ಇರುತ್ತಾರೆ.

## ವಿವೇಚನೆ

ಇಲ್ಲಿ ಹೇಳಿರುವ ಐದು– ಅಕ್ಷರಗಳು (=ಮಾತ್ರೆಗಳು) ಪ್ರಣವದಲ್ಲಿವೆ ಎಂಬುದನ್ನು ಯಾವ ಮೂಲದಿಂದ ಗ್ರಂಥಕಾರರು ತೆಗೆದುಕೊಂಡಿರುತ್ತಾರೋ ಇವುಗಳ ಅರ್ಥವು ಏನೆಂದು ಅವರ ಮತವೋ ತಿಳಿಯದು. ವ್ಯಾಖ್ಯಾನಕಾರರಾದ ರಾಮತೀರ್ಥರು ಬರೆದಿರುವದು ಹೀಗಿದೆ :

(ಓಂಕಾರದ ಅವಯವಗಳಾದ ಅಕಾರ, ಉಕಾರ, ಮಕಾರ– ಇವುಗಳಲ್ಲಿ) ಮಕಾರದಲ್ಲಿ ಸ್ವರವಿಲ್ಲವಾಗಿ ಮುಂದಿನ ಬಿಂದುವಿನೊಡನೆ ಸೇರಿಸಿಕೊಳ್ಳಬೇಕು; ಆಗ 'ಓಮ್' ಎಂಬ ರೂಪವಾಗುವದು. ಇದು ಘೋಷವುಳ್ಳ ಪ್ರಾಣದೊಡನೆ ಒಂದಾಗಿ ಮೂಲಾಧಾರದಿಂದ ಎದ್ದ ಪ್ರಾಣೋಷ್ಮಸಂಚಾರದ ನಾಡಿಯೊಳಗಿನ ರಂಧ್ರದಲ್ಲಿ ಅಭಿವ್ಯಕ್ತವಾಗುತ್ತದೆ. **'ಏತಚ್ಚ ಘೋಷವತಾ ಪ್ರಾಣೇನ ಏಕೀಕಾರೇಣ ನಾದೇನ ಮೂಲಾಧಾರಾದುತ್ಥಿತೇನ ಪ್ರಾಣೋಷ್ಮಸಂಚರಣನಾಡೀಗತ ಸುಷಿರಾಭಿವ್ಯಕ್ತೇನ ಅಭಿವ್ಯಜ್ಯತೇ ಇತಿ'** (ಆದ್ದರಿಂದ ಇದು ನಾದಾಂತವೆನಿಸುತ್ತದೆ. ಹೀಗೆ ಪ್ರಣವದಲ್ಲಿರುವ ಎಂದರೆ ಪ್ರಣವಶಬ್ದವಾಚ್ಯವಾದ ಶರೀರದಲ್ಲಿರುವ ಈ ಐದಕ್ಷರಗಳೂ ಅಕಾರ, ಉಕಾರ, ಮಕಾರ, ಬಿಂದು ಎಂಬೀ ನಾಲ್ಕು, ಅವುಗಳ ಸಾಮಾನ್ಯರೂಪವಾದ ನಾದ ಎಂಬಿವು –ಎಂದು ಬಲ್ಲವರು ಹೇಳುತ್ತಾರೆ). ನಾವು ವ್ಯಾಖ್ಯಾನದ ಅಕ್ಷರಾರ್ಥವನ್ನು ಇಲ್ಲಿ ಬರೆದಿದೇವೆ; ಇದರ ಅಭಿಪ್ರಾಯವೇನೆಂಬುದನ್ನು ಓದುಗರೇ ಊಹಿಸಿಕೊಳ್ಳಬೇಕು.

ಈ ಐದು ಅವಯವಗಳಲ್ಲಿರುವ ಐದು ದೇವತೆಗಳೂ ಮೂವತ್ತಾರು ತತ್ತ್ವಗಳೂ ಯಾವವು? ಎಂಬುದನ್ನು ವ್ಯಾಖ್ಯಾನಕಾರರೂ ಸ್ಪಷ್ಟಪಡಿಸಿಲ್ಲ. ಮಾಂಡೂಕ್ಯದಲ್ಲಿರುವ 'ಇದೆಲ್ಲವೂ ಓಮೆಂಬ ಅಕ್ಷರವೇ' ಎಂಬ ವಾಕ್ಯವನ್ನು ಅವರು ಉದಾಹರಿಸುತ್ತಾರಾದರೂ ಅಲ್ಲಿರುವ ವೈಶ್ವಾನರಾದ್ಯಾತ್ಮರುಗಳನ್ನು ಮಾನಸೋಲ್ಲಾಸದಲ್ಲಿ ಏಕೆ ಪರಾಮರ್ಶಿಸಿಲ್ಲವೆಂಬುದನ್ನು ಅವರೂ ತಿಳಿಸಿಲ್ಲ. ಓಂಕಾರಬ್ರಹ್ಮರುಗಳನ್ನು ಅಭೇದವಾಗಿ ಪ್ರತಿಪಾದಿಸಿರುವದರಿಂದ ಪ್ರಣವವು ಪೂರ್ಣಾದ್ವಿತೀಯಬ್ರಹ್ಮ

ವಾಯಿತು ; ಆದ್ದರಿಂದ ಅದನ್ನು ಹಾಗೆಂದು ಉಪಾಸನೆಮಾಡಬೇಕು- ಎಂದು ಆ ಉಪನಿಷತ್ತಿನರ್ಥವನ್ನು ಉಪಾಸನೆಯಲ್ಲಿ ಪರ್ಯವಸಾನಮಾಡಿರುತ್ತಾರೆ !

## ಫಲಪ್ರಾಪ್ತಿಯಾಗುವದು ಹೇಗೆ ?

**ಗುರುಪ್ರಸಾದಾಲ್ಲಭತೇ ಯೋಗಮಷ್ಟಾಙ್ಗಲಕ್ಷಣಮ್ ।**
**ಶಿವಪ್ರಸಾದಾಲ್ಲಭತೇ ಯೋಗಸಿದ್ಧಿಂ ಚ ಶಾಶ್ವತೀಮ್ ॥ ೪೬ ॥**

೪೬. ಗುರುವಿನ ಅನುಗ್ರಹದಿಂದ ಅಷ್ಟಾಂಗಲಕ್ಷಣವಾದ ಯೋಗವು ಲಭಿಸುತ್ತದೆ. ಶಿವನ ಅನುಗ್ರಹದಿಂದ ಶಾಶ್ವತವಾದ ಯೋಗಸಿದ್ಧಿಯು ಲಭಿಸುತ್ತದೆ.

### ವಿವೇಚನೆ

ಮೂಲಶ್ಲೋಕದಲ್ಲಿ ಎಂಟು ಮೂರ್ತಿಗಳೂ ಪರಮೇಶ್ವರನವೇ, ಆತನಿಗಿಂತ ಬೇರೆ ಯಾವದೂ ಇಲ್ಲ- ಎಂದಿಷ್ಟೇ ಹೇಳಿದ್ದರೂ ಇದು ಯೋಗ ಮತ್ತು ಯೋಗದ ಫಲಸಿದ್ಧಿ- ಇವುಗಳಲ್ಲಿಯೇ ಪರ್ಯವಸಾನವಾಗಿದೆ ಎಂದು ವ್ಯಾಖ್ಯಾನಕಾರರು ವಿವರಿಸಿರುವದನ್ನು ಲಕ್ಷಿಸಬೇಕು.

**ಸಚ್ಚಿದಾನನ್ದರೂಪಾಯ ಬಿನ್ದುನಾದಾನ್ತರಾತ್ಮನೇ ।**
**ಆದಿಮಧ್ಯಾನ್ತಶೂನ್ಯಾಯ ಗುರೂಣಾಂ ಗುರವೇ ನಮಃ ॥ ೪೭ ॥**

೪೭. ಸಚ್ಚಿದಾನಂದಸ್ವರೂಪನೂ ಬಿಂದು, ನಾದ- ಇವುಗಳ ಅಂತರಾತ್ಮನೂ ಆದ ಆದಿ, ಮಧ್ಯ, ಅಂತ- ಇವುಗಳು ಯಾವವೂ ಇಲ್ಲದ ಗುರುಗಳ ಗುರುವಿಗೆ ನಮಸ್ಕಾರ !

### ವಿವೇಚನೆ

ಇವುಗಳನ್ನು ಇಲ್ಲಿ ಅನುಭವಾನುಸಾರಿಯಾದ ತರ್ಕದಿಂದ ಸಿದ್ಧಮಾಡಿಲ್ಲವಾದರೂ ಅಮನಸ್ಕೋಪಾಸನೆಯಿಂದ ಈ ತತ್ತ್ವದ ಸಾಕ್ಷಾತ್ಕಾರವಾಗುವದೆಂಬ ಅಭಿಪ್ರಾಯದಿಂದ ಇಲ್ಲಿ ಹೀಗೆ ಉಪಸಂಹಾರಮಾಡಿರಬಹುದು.

**ಇತಿ ಶ್ರೀದಕ್ಷಿಣಾಮೂರ್ತಿಸ್ತೋತ್ರಾರ್ಥಪ್ರತಿಪಾದಕೇ ।**
**ಪ್ರಬನ್ಧೇ ಮಾನಸೋಲ್ಲಾಸೇ ನವಮೋಲ್ಲಾಸಸಙ್ಗ್ರಹಃ ॥ ೪೮ ॥**

೪೮. ಇಂತು ಶ್ರೀದಕ್ಷಿಣಾಮೂರ್ತಿಸ್ತೋತ್ರದ ಅರ್ಥವನ್ನು ಪ್ರತಿಪಾದಿಸುವ ಮಾನಸೋಲ್ಲಾಸವೆಂಬ ಪ್ರಕರಣದಲ್ಲಿ ಒಂಬತ್ತನೆಯ ಉಲ್ಲಾಸದ ಸಂಗ್ರಹವು ಮುಗಿಯಿತು.

---

# ೧೦. ಸ್ತೋತ್ರದ ಪಾಠಾದಿಗಳಿಗೆ ಫಲ

## ಅವತರಣಿಕೆ

**ಪರಿಚ್ಛಿನ್ನಮಹಂಭಾವಂ ಪರಿತ್ಯಜ್ಯಾನುಷಙ್ಗಿಕಮ್ ।**
**ಪೂರ್ಣಾಹಮ್ಭಾವಲಾಭೋಽಸ್ಯ ಸ್ತೋತ್ರಸ್ಯ ಫಲಮುಚ್ಯತೇ ॥ ೧ ॥**

೧. (ಉಪಾಧಿಯ) ಸಂಬಂಧದಿಂದ ಉಂಟಾಗಿರುವ ಅಳತೆಗೆ ಕಟ್ಟುಬಿದ್ದಿರುವ ಅಹಂಭಾವವನ್ನು ಬಿಟ್ಟು ಪೂರ್ಣವಾದ ಅಹಂಭಾವವನ್ನು ಪಡೆದುಕೊಳ್ಳುವದೆಂಬ ಸ್ತೋತ್ರದ ಫಲವನ್ನು (ಇಲ್ಲಿ) ಹೇಳಲಾಗುವದು.

**ಸರ್ವಾತ್ಮತ್ವಮಿತಿ ಸ್ಫುಟೀಕೃತಮಿದಂ ಯಸ್ಮಾದಮುಷ್ಮಿಂಸ್ತವೇ ।**
**ತೇನಾಸ್ಯ ಶ್ರವಣಾತ್ತಥಾರ್ಥಮನನಾದ್ಧ್ಯಾನಾಚ್ಚ ಸಙ್ಕೀರ್ತನಾತ್ ॥**
**ಸರ್ವಾತ್ಮತ್ವಮಹಾವಿಭೂತಿಸಹಿತಂ ಸ್ಯಾದೀಶ್ವರತ್ವಂ ಸ್ವತಃ-**
**ಸಿದ್ಧ್ಯೇತ್ತತ್ಪುನರಷ್ಟಧಾ ಪರಿಣತಂ ಚೈಶ್ವರ್ಯಮವ್ಯಾಹತಮ್ ॥ ೧೦ ॥**

೧೦. ಈ ಸ್ತೋತ್ರದಲ್ಲಿ ಹೀಗೆ ಸರ್ವಾತ್ಮತ್ವವನ್ನು ಸ್ಫುಟಗೊಳಿಸಿದೆಯಾದ್ದರಿಂದಲೇ ಇದನ್ನು ಶ್ರವಣಮಾಡುವದರಿಂದಲೂ, ಮತ್ತು ಅರ್ಥವನ್ನು ಮನನಮಾಡುವದರಿಂದಲೂ ಧ್ಯಾನಿಸುವದರಿಂದಲೂ ಇದನ್ನು ಗಟ್ಟಿಯಾಗಿ ಹೇಳುವದರಿಂದಲೂ ಸರ್ವಾತ್ಮತ್ವವೆಂಬ ಮಹಾವಿಭೂತಿಯೊಡಗೂಡಿದ ಈಶ್ವರತ್ವವು ಸಿದ್ಧಿಸುವದು. ಎಂಟು ಬಗೆಯಾಗಿ ಮಾರ್ಪಟ್ಟ ಐಶ್ವರ್ಯವಾದರೋ ಯಾವ ಅಡ್ಡಿಯೂ ಇಲ್ಲದೆ ತಾನೇ ಸಿದ್ಧಿಸುವದು.

**ಇದಮತ್ರಾಕೂತಮ್-**

**ಪುತ್ರಪೌತ್ರಗೃಹಕ್ಷೇತ್ರಧನಧಾನ್ಯಸಮೃದ್ಧಯಃ ।**
**ಅರ್ವಾಚೀನಾಶ್ಚ ಸಿದ್ಧ್ಯನ್ತಿ ಸ್ವರ್ಗಪಾತಾಳಭೂಮಿಷು ॥ ೨ ॥**
**ಪಾಕೇ ಪ್ರವರ್ತಮಾನಸ್ಯ ಶೀತಾದಿಪರಿಹಾರವತ್ ।**
**ಪ್ರಾಸಙ್ಗಿಕಾಶ್ಚ ಸಿದ್ಧ್ಯನ್ತಿ ಸ್ತೋತ್ರೇಣಾನೇನ ಸರ್ವದಾ ॥ ೩ ॥**

೨-೩. ಇಲ್ಲಿ (ಸ್ತೋತ್ರದ) ಆಶಯವೇನೆಂದರೆ: ಸ್ವರ್ಗ, ಪಾತಾಳ, ಭೂಮಿ(ಗಳೆಂಬ ಲೋಕ)ಗಳಲ್ಲಿ ಮಗ, ಮೊಮ್ಮಗ, ಮನೆ, ಹೊಲ, ಹಣ, ದವಸ- ಇವುಗಳ ಸಮೃದ್ಧಿಗಳೆಂಬ (ಪರಮಾರ್ಥದಿಂದ) ಈಚೆಗೆ ಇರುವ ಸಿದ್ಧಿಗಳೂ ಉಂಟಾಗುತ್ತವೆ. ಅಡಿಗೆಯನ್ನು ಮಾಡುವದಕ್ಕೆ ಹೊರಟವನಿಗೆ ಚಳಿಯೇ ಮುಂತಾದದ್ದು ಹೋಗು

ವಂತೆ ಈ ಸ್ತೋತ್ರದಿಂದ ಆನುಷಂಗಿಕವಾದ ಫಲಗಳೂ ಯಾವಾಗಲೂ ದೊರೆಯುತ್ತವೆ.

**ಐಶ್ವರ್ಯಮೀಶ್ವರತ್ವಂ ಹಿ ತಸ್ಯ ನಾಸ್ತಿ ಪೃಥಕ್ ಸ್ಥಿತಿಃ ।**
**ಪುರುಷೇ ಧಾವಮಾನೇಽಪಿ ಛಾಯಾ ತಮನುಧಾವತಿ ॥ ೪ ॥**
**ಅನನ್ತಶಕ್ತಿರೈಶ್ವರ್ಯಂ ನಿಷ್ಯನ್ದಾ ಹ್ಯಣಿಮಾದಯಃ ।**
**ಸ್ವಸ್ಯೇಶ್ವರತ್ವೇ ಸಂಸಿದ್ಧೇ ಸಿಧ್ಯನ್ತಿ ಸ್ವಯಮೇವ ಹಿ ॥ ೫ ॥**
**ಯದೀಯೈಶ್ವರ್ಯವಿಪ್ರುಡ್ಭಿರ್ಬ್ರಹ್ಮವಿಷ್ಣುಶಿವಾದಯಃ ।**
**ಐಶ್ವರ್ಯವನ್ತೋ ಭಾಸನ್ತೇ ಸ ಏವಾತ್ಮಾ ಸದಾಶಿವಃ ॥ ೬ ॥**
**ಪುಷ್ಪಮಾನಯತಾ ಗನ್ಧೋ ವಿನೇಚ್ಛಾಮನುಭೂಯತೇ ।**
**ಪೂರ್ಣಾಹಮ್ಭಾವಯುಕ್ತೇನ ಪರಿಚ್ಛಿನ್ನಾ ವಿಭೂತಯಃ ॥ ೭ ॥**

೪-೭. ಐಶ್ವರ್ಯವೆಂದರೆ ಈಶ್ವರನ ಸ್ವರೂಪವೇ (ಹೊರತು ಆತನಿಗಿಂತ) ಬೇರೆಯಾಗಿರುವದಲ್ಲ. ಮನುಷ್ಯನು ಓಡುತ್ತಿದ್ದರೂ ಆವನ (ನೆರಳು) ಆತನನ್ನು ಹಿಂಬಾಲಿಸಿಕೊಂಡೇ ಇರುತ್ತದೆ(ಯಷ್ಟೆ)? ಐಶ್ವರ್ಯ, ಅನಂತವಾದ ಶಕ್ತಿ, ಅಣಿಮಾದಿಗಳು-(ಅದರಿಂದ) ಹೊರಹೊಮ್ಮುವ ಹನಿಗಳು. ತನ್ನ ಈಶ್ವರತ್ವವು ಸಿದ್ಧವಾಯಿತೆಂದರೆ ಅಣಿಮಾದಿಗಳು ತಮಗೆತಾವೇ ಸಿದ್ಧವಾಗುವವಷ್ಟೆ ? ಯಾವಾತನು ಐಶ್ವರ್ಯದಿಂದ (ಹಾರುವ) ಸೀರ್ಪನಿಗಳಿಂದ ಬ್ರಹ್ಮ, ವಿಷ್ಣು, ಶಿವ -ಮೊದಲಾದವರು ಐಶ್ವರ್ಯವಂತರಾಗಿ ತೋರಿಕೊಳ್ಳುತ್ತಾರೋ ಅದೇ ಆತ್ಮನೇ ಸದಾಶಿವನು. ಹೂವನ್ನು ತರುತ್ತಿರುವವನಿಗೆ (ಅದರ) ಸುವಾಸನೆಯು ಇಚ್ಛೆಯಿಲ್ಲದಿದ್ದರೂ ತಾನೇ ಅನುಭವಕ್ಕೆ ಬರುತ್ತದೆ. ಪೂರ್ಣಾಹಂಭಾವದಿಂದೊಡಗೂಡಿದಾತನಿಗೆ ಅಳತೆಗೆ ಸಿಕ್ಕಿದ ವಿಭೂತಿಗಳು (ತಾವೇ ಬಂದೊದಗುವವು).

## ವಿವೇಚನೆ

'ಎಲ್ಲವೂ ನಾನೇ' ಎಂಬುದೇ ಈಶ್ವರತ್ವವು. ಅದು ಸಿದ್ಧವಾದರೆ ಮಿಕ್ಕ ಸಿದ್ಧಿಗಳು ದೊರಕುವವೆಂದು ಬೇರೆಯಾಗಿ ಹೇಳಬೇಕಾದದ್ದೇ ಇಲ್ಲ-ಎಂದಭಿಪ್ರಾಯ.

ಇಲ್ಲಿ ಅನಂತಶಕ್ತಿಯುಕ್ತನಾದ ಈಶ್ವರನೇ ತಾನೆಂಬುದೇ ಈಶ್ವರತ್ವವೆಂದು ಹೇಳಿರುತ್ತದೆ. ಇದನ್ನು ಹಿಂದೆಯೂ (೬-೪೮) ಹೇಳಿದೆ. ಚಿತ್ಪ್ರಕಾಶವಾಗಿರುವದೇ ಸರ್ವಾತ್ಮತ್ವವು (೩-೪೭). ಅಹಂಭಾವವು ನಿರ್ವಿಕಲ್ಪಕವಾಗಿಯೂ ಇರುತ್ತದೆ

೪–೩೦ತ್ತ). ಹೀಗಿರುವದರಿಂದ ಪೂರ್ಣಾಹಂಭಾವವೂ ಚಿನ್ಮಾತ್ರಪ್ರಕಾಶವೂ ಒಂದೇ ಎಂದು ಹೇಳಿದಂತೆ ಆಗಿದೆ. ಆದ್ದರಿಂದ ಅದೇ ಸರ್ವಶಕ್ತಿಯುಕ್ತವಾದದ್ದೆಂದಾಯಿತು. ಆತ್ಮನು 'ನೇತಿ ನೇತಿ' ಎಂದು ಉಪನಿಷತ್ತಿನಲ್ಲಿ ಹೇಳಿರುವಂತೆ ನಿರ್ವಿಶೇಷನು– ಎಂಬುದನ್ನು ಮಾತ್ರ ಇಲ್ಲಿ ಎಲ್ಲಿಯೂ ಬಾಯಿಬಿಟ್ಟು ಹೇಳಿಲ್ಲ. ಪ್ರಣವಾವಯವಗಳಾದ ಅಕಾರಾದಿಗಳಿಗೆ ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ– ಇವರು ಅಧಿದೇವತೆಗಳೆಂದೂ (೯–೪೫) ಬ್ರಹ್ಮವಿಷ್ಣುಶಿವರುಗಳೂ ಸದಾಶಿವನ ಕಣಗಳೆಂದೂ ಇಲ್ಲಿ ಹೇಳಿರುವದನ್ನು ಮನಸ್ಸಿನಲ್ಲಿ ಹೊರಳಾಡಿಸಿದರೆ 'ಸದಾಶಿವ'ನೆಂಬ ಹೆಸರಿಗೆ ಗ್ರಂಥಕರ್ತರ ದರ್ಶನದಲ್ಲಿ ಹೆಚ್ಚಿನ ಸ್ಥಾನವಿದೆಯೆಂದು ಗೊತ್ತಾಗುವದು.

ಅಣಿಮಾ ಮಹಿಮಾ ಚೈವ ಲಘಿಮಾ ಗರಿಮಾ ತಥಾ[1] ।
ಪ್ರಾಪ್ತಿಃ ಪ್ರಾಕಾಮ್ಯಮೀಶಿತ್ವಂ ವಶಿತ್ವಂ ಚಾಷ್ಟಸಿದ್ಧಯಃ ॥ ೮ ॥

ಅತ್ಯನ್ತಮಣುಷು ಪ್ರಾಣಿಷ್ವಾತ್ಮತ್ವೇನ ಪ್ರವೇಶನಮ್ ।
ಅಣಿಮಾ ಸಂಜ್ಞಮೈಶ್ವರ್ಯಂ ವ್ಯಾಪ್ತಸ್ಯ ಪರಮಾತ್ಮನಃ ॥ ೯ ॥

ಬ್ರಹ್ಮಾಣ್ಡಾದಿಶಿವಾನ್ತಾಯಾಃ ಷಟ್ತ್ರಿಂಶತ್ತತ್ತ್ವಸಂಹತೇಃ ।
ಬಹಿಶ್ಚ ವ್ಯಾಪ್ಯ ವೃತ್ತಿತ್ವಮೈಶ್ವರ್ಯಂ ಮಹಿಮಾಹ್ವಯಮ್ ॥ ೧೦ ॥

ಮಹಾಮೇರುಸಮಾಙ್ಗಸ್ಯ ಸಮುದ್ಧರಣಕರ್ಮಣಿ ।
ಯೋಗಿನಸ್ತೂಲತುಲ್ಯತ್ವಂ ಲಘಿಮಾನಂ ವಿದುರ್ಬುಧಾಃ ॥ ೧೧ ॥

ಪರಮಾಣುಸಮಾಙ್ಗಸ್ಯ ಸಮುದ್ಧರಣಕರ್ಮಣಿ ।
ಗೌರವೇ ಮೇರುತುಲ್ಯತ್ವಂ ಗರಿಮಾಣಂ ವಿದುರ್ಬುಧಾಃ ॥ ೧೨ ॥

ಪಾತಾಲವಾಸಿನಃ ಪುಂಸೋ ಬ್ರಹ್ಮಲೋಕಾವಲೋಕನಮ್ ।
ಪ್ರಾಪ್ತಿರ್ನಾಮ ಮಹೈಶ್ವರ್ಯಂ ಸುದುಷ್ಪ್ರಾಪಮಯೋಗಿನಾಮ್ ॥೧೩॥

ಆಕಾಶಗಮನಾದೀನಾಮನ್ಯಾಸಾಂ ಸಿದ್ಧಿಸಮ್ಪದಾಮ್ ।
ಸ್ವೇಚ್ಛಾಮಾತ್ರೇಣ ಸಂಸಿದ್ಧಿಃ ಪ್ರಾಕಾಮ್ಯಮಭಿಧೀಯತೇ ॥ ೧೪ ॥

ಸ್ವಶರೀರಪ್ರಕಾಶೇನ ಸರ್ವಾರ್ಥಾನಾಂ ಪ್ರಕಾಶನಮ್ ।
ಪ್ರಾಕಾಶ್ಯಮಿದಮೈಶ್ವರ್ಯಮಿತಿ ಕೇಚಿತ್ ಪ್ರಚಕ್ಷತೇ ॥ ೧೫ ॥

ಸ್ವೇಚ್ಛಾಮಾತ್ರೇಣ ಲೋಕಾನಾಂ ಸೃಷ್ಟಿಸ್ಥಿತ್ಯನ್ತಕರ್ತೃತಾ ।
ಸೂರ್ಯಾದೀನಾಂ ನಿಯೋಕ್ತೃತ್ವಮೀಶಿತ್ವಮಭಿಧೀಯತೇ ॥ ೧೬ ॥

ಸಲೋಕಪಾಲಾಃ ಸರ್ವೇಽಪಿ ಲೋಕಾಃ ಸ್ವವಶವರ್ತಿನಃ ।
ತದೈಶ್ವರ್ಯಂ ವಶಿತ್ವಾಖ್ಯಂ ಸುಲಭಂ ಶಿವಯೋಗಿನಾಮ್ ॥ ೧೭ ॥

---

1. "ಗರಿಮಾ ಲಘಿಮಾ ತಥಾ"– ಪಾ.

೮-೧೭. ಅಣಿಮಾ, ಮಹಿಮಾ, ಲಘಿಮಾ, ಗರಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ-ಎಂಬಿವು ಎಂಟು ಸಿದ್ಧಿಗಳು. (೧) ಅತ್ಯಂತಸೂಕ್ಷ್ಮವಾಗಿರುವ ಪ್ರಾಣಿಗಳಲ್ಲಿ ಅವುಗಳ ಆತ್ಮನಾಗಿರುವದೇ ಸರ್ವವ್ಯಾಪಿಯಾದ ಪರಮಾತ್ಮನ **ಅಣಿಮೆ** (ಸಣ್ಣದಾಗಿರುವದು) ಎಂಬ ಐಶ್ವರ್ಯ. (೨) ಬ್ರಹ್ಮಾಂಡದಿಂದ ಶಿವತತ್ತ್ವದವರೆಗಿನ ಮೂವತ್ತಾರು ತತ್ತ್ವಗಳನ್ನು ಒಳಗೊಂಡು ಅವುಗಳ ಹೊರಗೂ ವ್ಯಾಪಿಸಿಕೊಂಡಿರುವದು **ಮಹಿಮೆ** ಎಂಬ ಹೆಸರಿನ ಐಶ್ವರ್ಯವು. (೩) ಯೋಗಿಯು ಮಹಾಮೇರುವಿಗೆ ಸಮವಾಗಿರುವ ದೇಹವುಳ್ಳವನಾದರೂ ಎತ್ತುವ ಕ್ರಿಯೆಯಲ್ಲಿ (ಜನರಿಗೆ) ಹತ್ತಿಯಂತೆ ಹಗುರವಾಗಿರುವದು **ಲಘಿಮೆ** ಎಂದು ತಿಳಿದವರು ಎಣಿಸುತ್ತಾರೆ. (೪) ಪರಮಾಣುವಿಗೆ ಸಮವಾದ ದೇಹವುಳ್ಳವನಾದರೂ ಎತ್ತುವ ಕರ್ಮದಲ್ಲಿ (ವ್ಯಾಪೃತವಾದವರಿಗೆ) ಮೇರುಪರ್ವತದಂತೆ ಭಾರವಾಗಿರುವದು **ಗರಿಮೆ** ಎಂದು ಬಲ್ಲವರು ಎಣಿಸಿರುತ್ತಾರೆ. (೫) ಪಾತಾಳದಲ್ಲಿರುವ ಮನುಷ್ಯನು ಬ್ರಹ್ಮಲೋಕವನ್ನು ನೋಡುವದು **ಪ್ರಾಪ್ತಿ** ಎಂಬ ದೊಡ್ಡ ಐಶ್ವರ್ಯವು; ಯೋಗಿಗಳಲ್ಲದವರಿಗೆ ಇದನ್ನು ಪಡೆಯುವದು ಬಲು ಕಷ್ಟ. (೬) ಆಕಾಶದಲ್ಲಿ ನಡೆದಾಡುವದೇ ಮುಂತಾದ ಮಿಕ್ಕ ಸಿದ್ಧಿಯ ಸಂಪತ್ತುಗಳು ಬರಿಯ ತನ್ನ ಇಚ್ಛೆಯಿಂದಲೇ ಸಿದ್ಧಿಯಾದರೆ (ಸಿದ್ಧಿಸುವದು) **ಪ್ರಾಕಾಮ್ಯ**ವೆನಿಸುವದು. (ಅ.) ತನ್ನ ಇಚ್ಛೆಯಿಂದಲೇ ಎಲ್ಲಾ ವಿಷಯಗಳನ್ನೂ ಬೆಳಗಿತೋರಿಸುವದು ಎಂಬುದು 'ಪ್ರಾಕಾಮ್ಯ' (ಪ್ರಾಕಾಮ್ಯದ ಸ್ಥಾನದಲ್ಲಿ)ರುವ ಮತ್ತೊಂದು ಸಿದ್ಧಿ-ಎಂದು ಕೆಲವರು ಹೇಳುತ್ತಾರೆ. (೭) ಬರಿಯ ತನ್ನ ಇಚ್ಛೆಯಿಂದಲೇ ಲೋಕಗಳ ಸೃಷ್ಟಿಸ್ಥಿತಿಲಯಗಳನ್ನು ಮಾಡುವದೂ ಸೂರ್ಯಾದಿಗಳಮೇಲೂ ಕಟ್ಟುಮಾಡುವದೂ **ಈಶಿತ್ವ**ವೆಂದು ಕರೆಯುತ್ತಾರೆ. (೮) ಲೋಕಪಾಲರನ್ನು ಸೇರಿಸಿಕೊಂಡು ಎಲ್ಲಾ ಲೋಕಗಳೂ (ತನ್ನ) ಅಧೀನದಲ್ಲಿದ್ದುಕೊಂಡಿರುವ ಆ (ಶಕ್ತಿಯೇ) **ವಶಿತ್ವ**ವೆಂಬ ಐಶ್ವರ್ಯವು. (ಅದು) ಶಿವಯೋಗಿಗಳಿಗೆ ಆಯಾಸವಿಲ್ಲದೆ ದೊರೆಯುವದು.

### ಸರ್ವಾತ್ಮತ್ವವನ್ನು ಪಡೆದುಕೊಂಡವರ ಸ್ತುತಿ

**ಯಸ್ತ್ವೇವಂ ಬ್ರಾಹ್ಮಣೋ ವೇತ್ತಿ ತಸ್ಯ ದೇವಾ ವಶೇ ಸ್ಥಿತಾಃ ।**
**ಕಿಂ ಪುನಃ ಕ್ಷ್ಮಾಪತಿವ್ಯಾಘ್ರವ್ಯಾಳಸ್ತ್ರೀಪುರುಷಾದಯಃ ॥ ೧೮ ॥**
**ಸರ್ವಾತ್ಮಭಾವಸಾಮ್ರಾಜ್ಯನಿರನ್ತರಿತಚೇತಸಾಮ್ ।**
**ಪರಿಪಕ್ವಸಮಾಧೀನಾಂ ಕಿಂ ಕಿಂ ನಾಮ ನ ಸಿಧ್ಯತಿ ॥ ೧೯ ॥**

೧೮–೧೯. 'ಯಾವ ಬ್ರಾಹ್ಮಣನು ಹೀಗೆಂದು ಅರಿತು ಕೊಳ್ಳುವನೋ ಅವನಿಗೆ ದೇವತೆಗಳೂ ವಶದಲ್ಲಿರುವರು. ಹೀಗಿರು ವಲ್ಲಿ ದೊರೆ, ಹುಲಿ, ಸರ್ಪ, ಹೆಂಗಸು, ಗಂಡಸು– ಮುಂತಾದವರೂ (ವಶದಲ್ಲಿರುವರೆಂದು) ಹೇಳತಕ್ಕದ್ದೇನಿದೆ ? ಸರ್ವಾತ್ಮಭಾವವೆಂಬ ಸಾಮ್ರಾಜ್ಯದಲ್ಲಿಯೇ ನಿರ್ವಿಘ್ನವಾಗಿ ಚಿತ್ತವನ್ನಿಟ್ಟ ಸಮಾಧಿಯು ಪರಿಪಾಕವುಳ್ಳವರಿಗೆ ಯಾವಯಾವದುತಾನೆ ಸಿದ್ಧಿಸಲಾರದು ?

### ವಿವೇಚನೆ

ಇಲ್ಲಿ ಗ್ರಂಥಕಾರರು ತೈತ್ತಿರೀಯ ಆರಣ್ಯಕ (೩–೧೩) ವಾಕ್ಯದ ಅರ್ಥವನ್ನು ಅನುವಾದಮಾಡಿಕೊಂಡಿರುತ್ತಾರೆ.

### ಸರ್ವಾತ್ಮಭಾವವನ್ನು ಸಾಧಕನು ಅಭ್ಯಾಸಮಾಡಬೇಕು

**ಸ್ತೋತ್ರಮೇತತ್ ಪಠೇದ್ಧೀಮಾನ್ ಸರ್ವಾತ್ಮತ್ವಂ ಚ ಭಾವಯೇತ್ ।**
**ಅರ್ವಾಚೀನೇ ಸ್ಪೃಹಾಂ ಮುಕ್ತ್ವಾ ಫಲೇ ಸ್ವರ್ಗಾದಿಸಮ್ಭವೇ ॥ ೨೦ ॥**
**ಸ್ವರ್ಗಾದಿರಾಜ್ಯಂ ಸಾಮ್ರಾಜ್ಯಂ ಮನುತೇ ನ ಹಿ ಪಣ್ಡಿತಃ ।**
**ತದೇವ ತಸ್ಯ ಸಾಮ್ರಾಜ್ಯಂ ಯತ್ತು ಸ್ವಾರಾಜ್ಯಮಾತ್ಮನಿ ॥ ೨೧ ॥**
**ಸರ್ವಾತ್ಮಭಾವನಾವನ್ತಂ ಸೇವನ್ತೇ ಸರ್ವಸಿದ್ಧಯಃ ।**
**ತಸ್ಮಾದಾತ್ಮನಿ ಸಾಮ್ರಾಜ್ಯಂ ಕುರ್ಯಾನ್ನಿಯತಮಾನಸಃ ॥ ೨೨ ॥**

೨೦–೨೨. ವಿವೇಕಿಯಾದವನು ಈ ಸ್ತೋತ್ರವನ್ನು ಪಠಿಸುತ್ತಿರ ಬೇಕು. ಸ್ವರ್ಗಾದಿಗಳಲ್ಲಿ ಉಂಟಾಗಬಹುದಾದ ಈಗಿನ ಫಲವನ್ನೂ ಆಶೆಯನ್ನೂ ಬಿಟ್ಟು ಸರ್ವಾತ್ಮತ್ವವನ್ನೇ ಭಾವಿಸುತ್ತಿರಬೇಕು. ಪಂಡಿತ ನಾದವನು ಸ್ವರ್ಗಾದಿರಾಜ್ಯವು ಸಾಮ್ರಾಜ್ಯವೆಂದು ಎಣಿಸಿರುವದೇ ಇಲ್ಲ. ಆತ್ಮನನ್ನು ಪಡೆಯುವ ಸ್ವಾರಾಜ್ಯವಿದೆಯಲ್ಲ, ಅದು ಅವನಿಗೆ ಸ್ವಾರಾಜ್ಯವು. ಸರ್ವಾತ್ಮಭಾವನೆಯುಳ್ಳಾತನನ್ನು ಎಲ್ಲಾ ಸಿದ್ಧಿಗಳೂ ಸೇವಿಸುವವು. ಆದ್ದರಿಂದ ಆತ್ಮನಲ್ಲಿ ಉಂಟಾಗುವ ಸಾಮ್ರಾಜ್ಯ ವನ್ನು ಮನೋನಿಗ್ರಹಪೂರ್ವಕವಾಗಿ ಮಾಡುತ್ತಿರಬೇಕು.

### ವಿವೇಚನೆ

ಇಲ್ಲಿ "स स्वराड् भवति" (ಅವನು ಸ್ವಾರಾಜ್ಯವುಳ್ಳವನಾಗುತ್ತಾನೆ) ಎಂಬ (ಛಾಂ. ೭–೨೫–೨) ಛಾಂದೋಗ್ಯೋಪನಿಷತ್ತಿನ ವಾಕ್ಯವನ್ನು ಸೂಚಿಸಿರುತ್ತದೆ.

## ಗ್ರಂಥಕ್ಕೆ ಅಧಿಕಾರಿ

**ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ ।**
**ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶನ್ತೇ ಮಹಾತ್ಮನಃ　　॥ ೨೩ ॥**

೨೩. ಯಾವನಿಗೆ ದೇವನಲ್ಲಿ ಪರಭಕ್ತಿಯಿರುವದೋ ದೇವನಲ್ಲಿರುವಂತೆ ಗುರುವಿನಲ್ಲಿಯೂ ಪರಭಕ್ತಿಯಿರುವದೋ ಆ ಮಹಾತ್ಮನಿಗೆ ಇಲ್ಲಿ ಹೇಳಿರುವ ಅರ್ಥಗಳು ಬೆಳಗಿತೋರುವವು.

### ವಿವೇಚನೆ

ಇದು ಶ್ವೇತಾಶ್ವತರ (೬–೨೩) ವಚನವು. ಇದನ್ನು ಹೇಳಿರುವದು ವೇದಾಂತಾರ್ಥವನ್ನೇ ನಾವು ಹೇಳಿರುತ್ತೇವೆ ಎಂದು ಸೂಚಿಸುವದಕ್ಕೆ.

## ಮಂಗಲ

**ಪ್ರಕಾಶಾತ್ಮಿಕಯಾ ಶಕ್ತ್ಯಾ ಪ್ರಕಾಶಾನಾಂ ಪ್ರಭಾಕರಃ ।**
**ಪ್ರಕಾಶಯತಿ ಯೋ ವಿಶ್ವಂ ಪ್ರಕಾಶೋಽಯಂ ಪ್ರಕಾಶತಾಮ್ ॥ ೨೪ ॥**

೨೪. ಪ್ರಕಾಶರೂಪವಾದ (ತನ್ನ) ಶಕ್ತಿಯಿಂದ ಬೆಳಕುಗಳಿಗೂ ಬೆಳಕನ್ನು ಕೊಟ್ಟು ವಿಶ್ವವನ್ನು ಬೆಳಗುತ್ತದೆಯಲ್ಲ, ಆ ಪ್ರಕಾಶವು ಪ್ರಕಾಶಿಸಲಿ !

### ವಿವೇಚನೆ

ಸ್ತೋತ್ರದಲ್ಲಿ 'ತಮೇವ ಭಾನ್ತಮನುಭಾತ್ಯೇತತ್ ಸಮಸ್ತಮ್' (ಶ್ಲೋ. ೪) ಎಂಬ ಶ್ಲೋಕದಲ್ಲಿಯೂ ಮಾನಸೋಲ್ಲಾಸದ ೪–೩೭ನೆಯ ಶ್ಲೋಕದಲ್ಲಿಯೂ ಹೇಳಿರುವ ಅರ್ಥವೇ ಇದು.

**ಇತಿ ಶ್ರೀದಕ್ಷಿಣಾಮೂರ್ತಿಸ್ತೋತ್ರಾರ್ಥಪ್ರತಿಪಾದಕೇ ।**
**ಪ್ರಬನ್ಧೇ ಮಾನಸೋಲ್ಲಾಸೇ ದಶಮೋಲ್ಲಾಸಸಙ್ಗ್ರಹಃ　　॥ ೨೫ ॥**

೨೫. ಇಂತು ಶ್ರೀದಕ್ಷಿಣಾಮೂರ್ತಿಸ್ತೋತ್ರದ ಅರ್ಥವನ್ನು ಪ್ರತಿಪಾದಿಸುವ ಮಾನಸೋಲ್ಲಾಸವೆಂಬ ಪ್ರಬಂಧದಲ್ಲಿ ಹತ್ತನೆಯ ಉಲ್ಲಾಸದ ಸಂಗ್ರಹವು ಮುಗಿಯಿತು.

**ಇತಿ ಶ್ರೀಮಚ್ಛಙ್ಕರಭಗವತ್ಪಾದಾಚಾರ್ಯಕೃತ**
**ದಕ್ಷಿಣಾಮೂರ್ತಿಸ್ತೋತ್ರಭಾವಾರ್ಥವಾರ್ತಿಕಂ**
**ಶ್ರೀಸುರೇಶ್ವರಾಚಾರ್ಯಕೃತಂ**
**ಸಮಾಪ್ತಮ್**

---

# ಪರಿಶಿಷ್ಟ

## ಸ್ತೋತ್ರಾಕ್ಷರಾನುಕ್ರಮಣಿಕೆ

### ಶ್ಲೋಕಾರ್ಧಗಳ ಪ್ರತೀಕ



---

# ಮಾನಸೋಲ್ಲಾಸದಲ್ಲಿ
# ಉದಾಹೃತವಾಗಿರುವ ಪ್ರಮಾಣವಚನಗಳು

**ಸೂಚನೆ :–** ಇಲ್ಲಿ ಪ್ರಮಾಣವಾಕ್ಯದ ಪ್ರತೀಕ, ಮೂಲಗ್ರಂಥದ ಅಧ್ಯಾಯಾದಿಗಳ ಸಂಖ್ಯೆ, ಉಲ್ಲಾಸಶ್ಲೋಕಗಳ ಸಂಖ್ಯೆ, ಪುಟಸಂಖ್ಯೆ– ಇವನ್ನು ಕ್ರಮವಾಗಿ ಕೊಟ್ಟಿರುತ್ತದೆ.

| ಪ್ರತೀಕ | ಮೂಲ | ಉಲ್ಲಾಸಶ್ಲೋಕ | ಪುಟ |
|---|---|---|---|
| ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಮ್ | ಶ್ವೇ. ೪–೫ | ೮–೨೭ | ೧೦೨ |
| ಅಜ್ಞಾನೇನಾವೃತಂ ಜ್ಞಾನಮ್ | ಗೀ. ೫–೧೫ | ೩–೮ | ೩೮ |
| ಅನಾದಿಮಾಯಯಾ ಸುಪ್ತಃ | ಗೌ.ಕಾ. ೧–೧೬ | ೧–೧೩ | ೬ |
| *ಅನೇನ ಜೀವೇನಾತ್ಮನಾ | ಛಾಂ. ೬–೩–೨ | ೩–೨೦ | ೪೨ |

[* ಇಲ್ಲಿ ಶ್ರುತ್ಯರ್ಥವನ್ನು ಮಾತ್ರ ಕೊಟ್ಟಿದೆ. ಬೇರೆ ಶ್ರುತಿಗಳಲ್ಲಿರುವ ಪ್ರವೇಶವಾಕ್ಯಗಳೂ ಸೂಚಿತವಾಗಿವೆ.]

| ಪ್ರತೀಕ | ಮೂಲ | ಉಲ್ಲಾಸಶ್ಲೋಕ | ಪುಟ |
|---|---|---|---|
| ಅನ್ತಃ ಪ್ರವಿಷ್ಟಃ ಶಾಸ್ತಾ | ತೈ. ಆ. ೩–೫ | ೫–೩೨ಟಿ | ೬೭ |
| ಅನ್ತರಸ್ಮಿನ್ನಿಮೇ ಲೋಕಾಃ | ತೈ. ಬ್ರಾ. ೨–೮–೮ | ೧–೮ | ೪ |
| ಅಣೋರಣೀಯಾನ್ | ಕಾ. ೨–೨೦ | ೧–೨೯ | ೧೩ |
| *ಅಸನ್ನೇವ ಸ ಭವತಿ | ತೈ. ೨–೬ | ೬–೩೧ | ೭೮ |

[* ಶ್ರುತ್ಯರ್ಥವನ್ನು ಬರೆದಿದೆ.]

| ಪ್ರತೀಕ | ಮೂಲ | ಉಲ್ಲಾಸಶ್ಲೋಕ | ಪುಟ |
|---|---|---|---|
| ಆತ್ಮಲಾಭಾನ್ನ ಪರಂ ವಿದ್ಯತೇ | ಆ.ಧ. ೧–೮–೨೨–೧ | ೧–೨ | ೧ |
| ತತ್ರ ಕೋ ಮೋಹಃ ಕಃ ಶೋಕಃ | ಈ. ೭ | ೬–೨೯ | ೭೮ |
| ತಸ್ಮಾದ್ವಾ ಏತಸ್ಮಾದಾತ್ಮನಃ | ತೈ. ೨–೧ | ೨–೫೨ | ೩೨ |
| ದ್ವಾ ಸುಪರ್ಣಾ ಸಯುಜಾ | ಮುಂ. ೩–೧–೧ | ೮–೨೭ | ೧೦೭ |
| ಯತೋ ವಾಚೋ ನಿವರ್ತನ್ತೇ | ತೈ. ೨–೯ | ೬–೨೮ | ೭೮ |
| ಯಸ್ತ್ವೇವಂ ಬ್ರಾಹ್ಮಣೋ ವಿದ್ವಾನ್ | ಪುರುಷಸೂಕ್ತ | ೧೦–೧೮ | ೧೨೮ |
| ಶತಂ ಚೈಕಾ ಚ ಹೃದಯಸ್ಯ ನಾಡ್ಯಃ | ಕಾ. ೬–೧೬ | ೪–೨೩ | ೫೨ |
| ಸತ್ಯಂ ಜ್ಞಾನಮನನ್ತಂ ಬ್ರಹ್ಮ | ತೈ. ೨–೧ | ೪–೨೯ಟಿ | ೫೬ |
| ಸೂತ್ರೇ ಮಣಿಗಣಾ ಇವ | ಗೀ. ೭–೭ | ೩–೪ | ೩೭ |
| ಸೋಽಕಾಮಯತ | ತೈ. ೨–೬ | ೨–೫೨ | ೩೨ |
| ಸ್ಮೃತಿಃ ಪ್ರತ್ಯಕ್ಷಮೈತಿಹ್ಯಮ್ | ತೈ.ಆ. ೧–೨–೧ | ೭–೩೨ | ೯೭ |

# ಸೂಚಿತಶ್ರುತಿಗಳು

[ಈ ಮುಂದೆ ಕೊಟ್ಟಿರುವ ಶ್ರುತಿಗಳು ಮಾನಸೋಲ್ಲಾಸ ೬–೨೫ರಿಂದ ೬–೩೧ರವರೆಗಿನ ಶ್ಲೋಕಗಳಲ್ಲಿ ಸೂಚಿತವಾಗಿವೆ.]

| ಪ್ರತೀಕ | ಮೂಲ | ಉಲ್ಲಾಸ ಶ್ಲೋಕ | ಪುಟ |
|---|---|---|---|
| ಅಪಾಪವಿದ್ಧಮ್ | ಈ. ೮ | ೬–೨೫ | ೭೮ |
| ನಿಷ್ಕಲಮ್....ನಿರಞ್ಜನಮ್ | ಶ್ವೇ. ೬–೧೯ | ೬–೨೭ | ,, |
| ನ ಜಾಯತೇ ಮ್ರಿಯತೇ ವಾ | ಕಾ. ೨–೧೮ | ೬–೨೭ | ,, |
| ನ್ಯಗ್ರೋಧಫಲಮ್..... | ಛಾಂ. ೬–೧೨–೧ | ೬–೨೬ | ,, |
| ಮುಞ್ಜಾದಿವೇಷೀಕಾಮ್ | ಕಾ. ೬–೧೭ | ೬–೨೬ | ,, |
| ತತ್ಸರ್ವಂ ಪರೇ ಆತ್ಮನಿ ಸಂಪ್ರತಿಷ್ಠತೇ । ಪೃಥಿವೀ ಚ ಪೃಥಿವೀಮಾತ್ರಾ ಚ | ಪ್ರ. ೪–೭, ೮ | ೬–೨೮ | ,, |
| ಸ ಯಥೇಮಾ ನದ್ಯಃ ಸ್ಯನ್ದಮಾನಾಃ | ಪ್ರ. ೬–೫ | ೬–೨೯ | ,, |
| ನಾನ್ತಃ ಪ್ರಜ್ಞಂ.... ಚತುರ್ಥಂ ಮನ್ಯನ್ತೇ | ಮಾಂ. ೭ | ೬–೨೫ | ,, |
| ಯತೋ ವಾಚೋ ನಿವರ್ತನ್ತೇ | ತೈ. ೨–೯ | ೬–೨೮ | ,, |
| ತತ್ರ ಕೋ ಮೋಹಃ | ಈ. ೭ | ೬–೨೯ | ,, |
| ಅಸನ್ನೇವ ಸ ಭವತಿ.... ತತೋ ವಿದುರಿತಿ | ತೈ. ೨–೬ | ೬–೩೧ | ,, |

# ಮಾನಸೋಲ್ಲಾಸ ಶ್ಲೋಕಾರ್ಧಪ್ರತೀಕಗಳ

# ಅಕ್ಷರಾನುಕ್ರಮಣಿಕೆ

## ಶ್ಲೋಕಾರ್ಧಪ್ರತೀಕಗಳ ಅಕ್ಷರಾನುಕ್ರಮಣಿಕೆ



ಪ್ರತಿ ಉಲ್ಲಾಸದ ಕೊನೆಯಲ್ಲಿಯೂ ಈ ವಾಕ್ಯಗಳಿವೆ. ಇವಕ್ಕೆ ಸಂಖ್ಯೆಯನ್ನು ಹಾಕಿಲ್ಲ.

# ಶಬ್ದಾನುಕ್ರಮಣಿಕೆ

**ವಿಶೇಷ :** ಇಲ್ಲಿ ಶಬ್ದಾನುಕ್ರಮಣಿಕೆಯಲ್ಲಿ **ಕಪ್ಪಕ್ಷರದಲ್ಲಿ (Antique)** ಕೊಟ್ಟಿರುವ ಪದಗಳಿಗೆ ಆಯಾ ಶಬ್ದಗಳನ್ನು ಮೂಲಶ್ಲೋಕಗಳಲ್ಲಿ ನೋಡಬೇಕೆಂದು ಅರ್ಥ. ಸಂಖ್ಯೆಗಳು ಕ್ರಮವಾಗಿ ಸ್ತೋತ್ರದ ಶ್ಲೋಕ, ಮಾನಸೋಲ್ಲಾಸಶ್ಲೋಕಗಳ ಸಂಖ್ಯೆಯನ್ನು ಸೂಚಿಸುತ್ತವೆ.

**ಅಮನಸ್ಕ :** ಸಮನಸ್ಕನಾದ ಉಪಾಸನೆಯನ್ನು ಮಾಡುವವನು ಅಷ್ಟಾಂಗ ಯೋಗಯುಕ್ತನಾಗಿ ಪಡೆಯುವ ಉಪಾಸನೆ; ಸಮಾಧಿ; ಅಮನಸ್ಕಸಮಾಧಿಯಲ್ಲಿ ಯಾವ ಚಿಂತನೆಯೂ ಇರುವದಿಲ್ಲ ೯–೩೦.

**ಅರ್ಥಕ್ರಿಯೆ :** ಯಾವದಾದರೊಂದು ಪ್ರಯೋಜನವನ್ನುಂಟುಮಾಡುವ ಕ್ರಿಯೆ ; ಆಕಾಶವು ಅರ್ಥಕ್ರಿಯೆಯಾಗಿದುವಂತೆ ಆತ್ಮನಿಗೆ ಕರ್ತೃತ್ವಜ್ಞಾತೃತ್ವಾದಿಗಳು ಅರ್ಥಕ್ರಿಯೆ ೬–೨೦.

**ಅರ್ಥಾಪತ್ತಿ :** ಈ ಪ್ರಮಾಣವನ್ನು ಪ್ರಾಭಾಕರರು ಒಪ್ಪಿದ್ದಾರೆ ೨–೧೮.

**ಅವಕಾಶಪ್ರದಾತೃತ್ವ :** ಎಲ್ಲಕ್ಕೂ ಅವಕಾಶವನ್ನು ಕೊಡುವದು ; ಇದು ಆಕಾಶದ ಅರ್ಥಕ್ರಿಯೆ ೬–೨೦.

**ಅವಸ್ಥಾತ್ರಯ :** ಜಾಗ್ರತ್–ಸ್ವಪ್ನ–ಸುಷುಪ್ತಿಗಳು ; ಇವು ಆತ್ಮನಿಗೆ ನಿಜವಾಗಿ ಇಲ್ಲ ೬–೨೫.

**ಅವಿಚಾರಿತಸಿದ್ಧ :** ವಿಚಾರವನ್ನು ಮಾಡದೆ ಇರುವ ಅಜ್ಞರಿಗೆ ತೋರುವ ಮಾಯೆ ೭–೧೬. **ಯುಕ್ತಿಹೀನಪ್ರಕಾಶಶಬ್ದವನ್ನು ನೋಡಿ.**

**ಅವಿದ್ಯಾ :** ಅಜ್ಞಾನ ; ಸಾಂಖ್ಯರ ಪ್ರಧಾನ ೨–೩೧ ; ಅವಿದ್ಯೆಯು ಮರೆಯಾಗಿ ಹೋದರೆ ಈಶ್ವರತ್ವವು ತಾನೇ ಕಾಣಿಸಿಕೊಳ್ಳುವದು ೪–೩೬, ೩೭.

**ಅವ್ಯಾಕೃತ :** ಜಗತ್ತಿನ ಸೂಕ್ಷ್ಮಸ್ಥಿತಿ; ಸಾಂಖ್ಯರ ಪ್ರಧಾನಕ್ಕೆ ಹೆಸರು ೨–೩೧.

**ಅಷ್ಟಮೂರ್ತಿಗಳು :** (1) ಈಶ್ವರನಿಗೆ ಇವೆಯೆಂದು ಪ್ರತ್ಯಕ್ಷವಾಗಿ ತೋರುವ ಭೂರಾದಿಯಾದ ಎಂಟು ಮೂರ್ತಿಗಳು ೯–೨; ಇವುಗಳ ರೂಪದಿಂದ ಸರ್ವಾತ್ಮಭಾವನೆ ೯–೩.

**ಅಷ್ಟಾಂಗಯೋಗ :** ಸಮನಸ್ಕೋಪಾಸನೆಯನ್ನು ಮಾಡಿದವನು ಈ ಯೋಗವನ್ನು ಮಾಡಿದರೆ ಅಮನಸ್ಕೋಪಾಸನೆಯನ್ನು ಪಡೆದುಕೊಳ್ಳುತ್ತಾನೆ ೯–೨೦ ; ಇವುಗಳ ವಿವರಣೆ ೯–೨೧ರಿಂದ ೩೦.

**ಅಸ್ತಿತ್ವ, ಪ್ರಕಾಶತ್ವ :** ಇರವು, ತೋರುವದು ; ಇವುಗಳನ್ನು ಕುರಿತ ಪ್ರಶ್ನೆ ೧–೪,೫ ; ಇವು ಘಟಪಟಾದಿಗಳಲ್ಲಿರುತ್ತವೆ– ಎಂಬ ಪೂರ್ವಪಕ್ಷ ೪–೧; ಇದರಲ್ಲಿ ದೋಷ ೪–೪ರಿಂದ ೭ ; ಇವು ನಿತ್ಯನಾದ ಈಶ್ವರನಿಂದಲೇ ಬಂದು ಜಡವಸ್ತುಗಳಲ್ಲಿ ಸೇರಿರುತ್ತವೆ ೩–೨; ಇವುಗಳ ವಿಷಯಕ್ಕೆ ಬೌದ್ಧಸಿದ್ಧಾಂತ ೬–೧೨; **ಸತ್ತಾ, ಸ್ಫುರತ್ತಾ, ( ಸ್ಫುರಣ )** – ಈ ಶಬ್ದಗಳನ್ನು ನೋಡಿರಿ.

**ಅಹಮ್ :–** (ನಾನೆಂಬುದು) ಅಹಂಕಾರ; ಈಶ್ವರನು ಜೀವರುಗಳಲ್ಲೆಲ್ಲ 'ನಾನು' ಎಂದು ತೋರಿಕೊಳ್ಳುತ್ತಿರುತ್ತಾನೆ ೪–೩೧ ; ಅಹಂನಲ್ಲಿ ಮೂರು ವಿಧ ೪–೩೧ರಿಂದ ೩೪ ; ನಾನು ಎಂಬ ಜೀವನು ಈಶ್ವರನನ್ನು ಅರಿತುಕೊಂಡಾಗ **ಸರ್ವಜ್ಞನೂ ಸರ್ವಕರ್ತನೂ** ಆಗುತ್ತಾನೆ ೪–೩೪, ೩೫.

**ಜೀವನ್ಮುಕ್ತ :** ಬದುಕಿರುವಾಗಲೇ ಮುಕ್ತನು ೮–೨೬.

**ಜ್ಞಾನ :** ಸರ್ವಜೀವರುಗಳಲ್ಲಿಯೂ ಜ್ಞಾನಕ್ರಿಯೆಗಳು ಈಶ್ವರನಿಂದಲೇ ಬಂದು ಸೇರಿವೆ ೧–೨೧; ಘಟಾದಿಗಳಲ್ಲಿ ಈ ಜ್ಞಾನವು ಸೂರ್ಯನ ಪ್ರಭೆಯಂತೆ ಕಾಣಿಸುತ್ತದೆ, ಆದ್ದರಿಂದ ಇದು ಸ್ವಯಂಸಿದ್ಧ ೧–೩೩; ಈಶ್ವರನ ಶಕ್ತಿಯಿಂದ ಜಗತ್ತು ಜ್ಞಾತೃಜ್ಞಾನಜ್ಞೇಯರೂಪವಾಗಿದೆ ೨–೧೪; ಸವಿಕಲ್ಪನಿರ್ವಿಕಲ್ಪ ಜ್ಞಾನಗಳು ೨–೧೫, ೧೬; ಈಶ್ವರನ ಜ್ಞಾತೃತ್ವವೂ ಕರ್ತೃತ್ವವೂ ಸ್ವಾತಂತ್ರ್ಯದಿಂದ ೨–೫೧; ಜಾನಾಮಿ (ಇದನ್ನು ಅರಿಯುತ್ತೇನೆ) ಎಂದು ಪದಾರ್ಥಗಳಲ್ಲಿಯೂ ಜ್ಞಾನವು (ನನ್ನಿಂದ ಅರಿಯಬಂತು) ಎಂದು ಅಂತರಾತ್ಮನಲ್ಲಿ ನಿಲ್ಲುತ್ತದೆ ೩–೬; ನಾನು ಅರಿಯುತ್ತಿದೇನೆ – ಎಂಬ ಅನುಭವದಿಂದಲೇ ಎಲ್ಲವೂ ತೋರುತ್ತಿದೆ ೪–೨; ಈಶ್ವರನ ಜ್ಞಾನದಿಂದಲೇ ಎಲ್ಲವೂ ತೋರುತ್ತಿರುತ್ತದೆ ೪–೨೪ರಿಂದ ೨೯; ಆತ್ಮನು ಸ್ವಯಂಪ್ರಕಾಶನಾದ್ದರಿಂದ ತನ್ನನ್ನು ತಾನೇ ಅರಿಯುತ್ತಾನೆ ೬–೨೨.

**ಜ್ಞಾನೇಂದ್ರಿಯಗಳು :** ಐದು, ಇವುಗಳ ವಿಷಯಗಳು ಮತ್ತು ದೇವತೆಗಳು; ಶ್ರೋತ್ರ, ತ್ವಕ್ಕು, ಚಕ್ಷುಸ್ಸು, ಜಿಹ್ವೆ, ಘ್ರಾಣ – ಇವು. ಶಬ್ದಾದಿಗಳು ವಿಷಯಗಳು ೨–೩೪; ಇವುಗಳಿಗೆ ದಿಕ್ಕುಗಳು, ವಾಯು, ಸೂರ್ಯ, ವರುಣ, ಅಶ್ವಿನೀದೇವತೆಗಳು – ಇವರು ಅಧಿಷ್ಠಾತೃದೇವತೆಗಳು ೨–೩೭.

**ತಟಸ್ಥಲಕ್ಷಣ :** ಈಶ್ವರನಿಗೆ ಕಾರಣತ್ವ, ಜೀವನಿಗೆ ಕಾರ್ಯತ್ವ - ಇವು ತಟಸ್ಥ ಲಕ್ಷಣ ೩–೩೨.

**ತತ್ತ್ವಗಳು :** (೧) ಸಾಂಖ್ಯರ ಮತದಲ್ಲಿ ಇಪ್ಪತ್ತನಾಲ್ಕು ಇವೆ ೨–೪೦; (೨) ಪೌರಾಣಿಕಮತದಂತೆ ಮೂವತ್ತು (೩) ಶೈವಾಗಮದಂತೆ ಮೂವತ್ತಾರು ೨–೪೨.

**ತತ್ತ್ವಮಸಿ :** ಈ ವಾಕ್ಯದಿಂದ ಜೀವಪರಮೇಶ್ವರರ ಐಕ್ಯವನ್ನು ಹೇಳಿದೆ; ಇದಕ್ಕೆ ಸೋಽಯಂ ಪುರುಷಃ (ಅವನೇ ಈ ಮನುಷ್ಯನು) ಎಂಬ ದೃಷ್ಟಾಂತ ೩–೧; ಇಲ್ಲಿ ಲಕ್ಷಣೆಯಿಂದ ಐಕ್ಯವನ್ನು ಹೇಳಿದೆ ೩–೧೪; ಇಲ್ಲಿ ಪದಗಳಿಗೆ ಸಾಮಾನಾಧಿಕರಣ್ಯ, ಅರ್ಥಗಳಿಗೆ ವಿಶೇಷ್ಯವಿಶೇಷಣತ್ವ, ಐಕ್ಯವು ಲಕ್ಷ್ಯಲಕ್ಷಣ ಸಂಬಂಧದಿಂದ ೩–೧೫, ೧೬; ಇಲ್ಲಿ ಒಪ್ಪಿರುವ ಭಾಗಲಕ್ಷಣೆ ೩–೧೭; ಈ ವಾಕ್ಯಕ್ಕೆ ಒಪ್ಪಾಗದ ಇತರ ಅರ್ಥಗಳು ೩–೨೨ರಿಂದ ೨೪; ಇದು ಉಪಾಸನಾಪರವಲ್ಲ ೩–೨೪.

**ತಾಮಸಾಹಂಕಾರ :** ಸಾಂಖ್ಯರು ಈ ಅಹಂಕಾರದಿಂದ ಉಂಟಾಗುವವೆಂದು ಹೇಳುವ ವಿಕಾರಗಳು ೨–೩೩, ೩೪.

**ದೇಹ :** ಆತ್ಮನು ದೇಹದೊಳಗಿದ್ದರೂ ವ್ಯಾಪಕನೇ ೫–೨೯.

**ದೇಹಾದಿ :** ದೇಹಾದಿಪರಿಚ್ಛಿನ್ನನಾದ ಜೀವನು ತ್ವಂಪದಾರ್ಥ, ಜಗತ್ಕಾರಣ ತತ್ತ್ವವು ತತ್ಪದಾರ್ಥ ೩-೧೧; ದೇಹಾದಿಸಂಘಾತವನ್ನು ಆತ್ಮಸಂಬಂಧದಿಂದ ಅಜ್ಞರು ಅದನ್ನೇ ಆತ್ಮನೆನ್ನುತ್ತಾರೆ ೩-೨೫, ೨೬; ದೇಹಪ್ರಾಣಾದಿಗಳು, **ಪಂಚಕೋಶಗಳು** – ಇವುಗಳಿಂದ ಆತ್ಮನು ಪರಿಚ್ಛಿನ್ನನಾಗಿರುವಂತೆ ಕಾಣುತ್ತಾನೆ ೩-೩೦, ೩೧; ದೇಹೇಂದ್ರಿಯಾದಿಗಳ ಸಂಬಂಧದಿಂದ ಈಶ್ವರನು ನಾನು (ಅಹಂ) ಎಂದು ಮಲಿನವಾಗಿ ಕಾಣಿಸುತ್ತಾನೆ ೪-೩೪; ದೇಹಾದಿಗಳಲ್ಲಿ ಆತ್ಮಬುದ್ಧಿಯನ್ನು ಮಾಡುವ ಚಾರ್ವಾಕಾದಿಗಳ ಮತ ೫-೧ರಿಂದ ೯; ಈ ಮತಗಳ ಖಂಡನೆ ೫-೧೦ರಿಂದ ೨೮; ದೇಹಾದಿಸಂಘಾತವೂ ಆತ್ಮನಲ್ಲ ೫-೨೬, ೨೭; ಇವುಗಳಲ್ಲಿ ನಾನೆಂಬ ಭ್ರಮೆಯೇ ಸಂಸಾರಕ್ಕೆ ಕಾರಣ ೫-೩೨ತ್ತಿ.

**ಧಾರಣೆ :** ಯಾವದಾದರೊಂದು ಆಧಾರದಲ್ಲಿ ಮನಸ್ಸನ್ನು ನಿಲ್ಲಿಸುವದು ೯-೨೯.

**ಧ್ಯಾನ :** ಬ್ರಹ್ಮಾದಿಗಳ ಚಿಂತನೆ ೯-೨೯.

**ನಾಡಿಗಳು :** ಇವುಗಳ ವಿವರ ೪-೧೪ರಿಂದ ೨೩.

**ನಾಡೀಚಕ್ರ :** ಇದರಿಂದ ಹೊರಟ ನಾಡಿಗಳು ಹೊಕ್ಕುಳಪ್ರದೇಶವನ್ನಾಶ್ರಯಿಸಿವೆ. ೨-೧೬, ೧೭.

**ನಾದ :** ಪ್ರಾಣವು ಸುಷುಮ್ನೆಯನ್ನು ಸೇರಿಕೊಂಡಾಗ ಎಂಟು ಬಗೆಯ ನಾದಗಳು ಕೇಳಬರುವವು ೯-೩೯.

**ಪಂಚಕೋಶಗಳು :** ಅನ್ನಮಯಾದಿಗಳು, ಇವುಗಳ ವಿವರ: ೩-೨೭ರಿಂದ ೩೦; ಪರಮೇಶ್ವರನು ಇವುಗಳಿಂದ ವ್ಯಾಪ್ತನಾದರೂ ಉಪಾಧಿಯಿಂದ ಪರಿಚ್ಛಿನ್ನನಂತೆ ಕಾಣಿಸುತ್ತಾನೆ ೩-೩೦, ೩೧.

**ಪಂಚಾಕ್ಷರಗಳು :** ಪ್ರಣವಕ್ಕೆ ಅಕಾರ ಉಕಾರ, ಮಕಾರ, ನಾದ, ಬಿಂದು – ಇವು ೯-೪೪; ಇವುಗಳ ದೇವತೆಗಳು ಬ್ರಹ್ಮಾದಿಗಳು ೯-೪೫.

**ಪರಮಾಣುವಾದ :** ವೈಶೇಷಿಕರದು. ೨-೧ರಿಂದ ೬; ಇದರ ಖಂಡನೆ ೨-೧೩.

**ಪದಾರ್ಥಗಳು :** ವೈಶೇಷಿಕರು ಹೇಳುವ ಆರು ಪದಾರ್ಥಗಳು. ೨-೨೦.

**ಪರಮಾತ್ಮ, ಪರಮೇಶ್ವರ :** ಪರಮಾತ್ಮಜೀವರಿಗೆ ದೇಹಕೃತಭೇದ ೩-೯; ಜೀವನು ಪರಮಾತ್ಮನ ಅಂಶವಾಗಲಿ ವಿಕಾರವಾಗಲಿ ಅಲ್ಲ ೩-೧೯; ತತ್ತ್ವಮಸಿ ವಾಕ್ಯವು ಜೀವಪರಮಾತ್ಮರ ಐಕ್ಯವನ್ನು ಲಕ್ಷಣೆಯಿಂದ ಹೇಳುತ್ತದೆ ೩-೧೪; ವಿಶ್ವವನ್ನೆಲ್ಲ ಸೃಷ್ಟಿಸಿ ಮನಸ್ಸಿನಲ್ಲಿ ನಿಂತಿರುವ ಪರಮೇಶ್ವರನನ್ನೇ ಈ ಸ್ತೋತ್ರದಲ್ಲಿ ಸ್ತುತಿಸಿರುತ್ತದೆ ೧-೩; ಪರಮೇಶ್ವರನು ಎಲ್ಲರ ಆತ್ಮನು ೧-೨, ೩.

**ಪರಿಪಕ್ವ :** ವಿಶ್ವಾಮಿತ್ರನೇ ಮುಂತಾದ ಪರಿಪಕ್ವಸಮಾಧಿಯ ಯೋಗಿಗಳು ಇದರ ಅಪೇಕ್ಷೆಯಿಲ್ಲದೆ ಸೃಷ್ಟಿಸುತ್ತಾರೆ ೨–೪೬, ೪೭; ಸಮಾಧಿಯು ಪರಿಪಕ್ವ ವಾಸವರಿಗೆ ದೊರೆಯುವ ಸಿದ್ಧಿಯೇ ಇಲ್ಲ ೧೦–೧೯; ಸರ್ವಾತ್ಮಭಾವನೆಯು ಪರಿಪಕ್ವವಾದವನು ಸಾಕ್ಷಾತ್ ಪರಮೇಶ್ವರನೇ ೩–೩೮.

**ಪುಮಾನ್, ಪುರುಷಃ :** (೧) 'ಸೋऽಯಂ ಪುರುಷಃ' (ಅವನೇ ಈ ಮನುಷ್ಯನು) ಎಂಬ ವಾಕ್ಯದಂತೆ ತತ್ತ್ವಮಸಿವಾಕ್ಯಕ್ಕೆ ಲಕ್ಷಣೆಯಿಂದ ಜೀವಾತ್ಮೈಕ್ಯವನ್ನು ಹೇಳಿವೆ ೩–೧೩; ಈಶ್ವರನ ಅಷ್ಟಮೂರ್ತಿಗಳಲ್ಲಿ ಒಬ್ಬನು ಪುರುಷನು ೯–೧೯.

**ಪೂರ್ಣಾಹಂತಾ, ಪೂರ್ಣಾಹಂಭಾವ :** ಜ್ಞಾನದಿಂದ ಈಶ್ವರನೇ ಎಂಬುದೇ ಪೂರ್ಣಾಹಂತೆ ೧–೧೫; ಸದಾಶಿವಾತ್ಮರೂಪದ ಪೂರ್ಣಾಹಂಭಾವವನ್ನು ಪಡೆದುಕೊಂಡವನಿಗೆ ಪರಿಚ್ಛಿನ್ನವಿಭೂತಿಗಳು ಬೇಡವೆಂದರೂ ಅನುಭವಕ್ಕೆ ಒರುವವು ೧೦–೭; ಇದು ಸ್ತೋತ್ರದ ಫಲ ೧೦–೧.

**ಪೌರಾಣಿಕರು :** ಇವರ ಮತದಲ್ಲಿ ಮೂವತ್ತಾರು ತತ್ತ್ವಗಳು ೨–೪೧.

**ಪ್ರಕಾಶ :** ಕಾರ್ಯಕಾರಣ, ಅಂಶಾಂಶಿ, ಜಾತಿವ್ಯಕ್ತಿ, ಗುಣಗುಣಿ, ಕ್ರಿಯಾ-ಕ್ರಿಯಾವಾನ್- ಇವೆಲ್ಲ ಪ್ರಕಾಶದಲ್ಲಿ ಕಲ್ಪಿತ ೨–೧೨; ಆತ್ಮಸತ್ತೆಯು (ಇರವೇ) ಪದಾರ್ಥಗಳ ಇರವು ೧–೧೧; 'ಪ್ರಕಾಶತ್ವ'ವೆಂದರೆ ವಸ್ತುಗಳು ತೋರುವದು, ಇದು ಈಶ್ವರನಲ್ಲಿಯೇ ಇರುತ್ತದೆ ೩–೨; ಪ್ರಕಾಶಾಭಿನ್ನನಾದ್ದರಿಂದ ಜೀವನು ಸರ್ವಾತ್ಮನು ೩–೩೬; ಪ್ರಕಾಶತ್ವವೇ ಸರ್ವಾತ್ಮತ್ವ ೩–೩೫; ಪ್ರಕಾಶರೂಪತ್ವದ ಅರಿವು ದೃಢವಾದರೆ ಪುನರಾವೃತ್ತಿರಹಿತಕೈವಲ್ಯ ೩–೩೭; ಪ್ರಕಾಶಶಕ್ತಿಯಿಂದ ಪರಮಾತ್ಮನು ಎಲ್ಲವನ್ನೂ ಬೆಳಗುತ್ತಾನೆ ೧೦–೨೪.

**ಪ್ರಣವ :** 'ಸೋऽಹಂ' ಮಂತ್ರದಿಂದ ಇದರ ಉತ್ಪತ್ತಿ ೯–೪೩; ಇದರ ಐದಕ್ಷರಗಳು ೯–೪೪; ಇವುಗಳ ದೇವತೆಗಳು ೯–೪೫.

**ಪ್ರತ್ಯಕ್ತ್ವ :** ಪ್ರತ್ಯಕ್ತ್ವ, ಪರಾಕ್ತ್ವ – ಎರಡನ್ನೂ ಬಿಟ್ಟು ಜೀವಾತ್ಮಪರಮಾತ್ಮರ ಐಕ್ಯವನ್ನು ಲಕ್ಷಣೆಯಿಂದ ಹೇಳುತ್ತದೆ ೩–೧೪; ಇದಕ್ಕೆ 'ಸೋऽಯಂ ಪುರುಷಃ' ಎಂಬ ವಾಕ್ಯದ ದೃಷ್ಟಾಂತ ೩–೧೦ರಿಂದ ೧೩.

**ಪ್ರತ್ಯಕ್ಷಾದಿ :** ಚಾರ್ವಾಕರು ಪ್ರತ್ಯಕ್ಷ, ಕಣಾದಸುಗತರು ಪ್ರತ್ಯಕ್ಷ, ಅನುಮಾನ, ಶಬ್ದವನ್ನು ಸೇರಿಸಿ ಸಾಂಖ್ಯರು, ಉಪಮಾನವನ್ನು ನೈಯಾಯಿಕರು, ಅರ್ಥಾಪತ್ತಿಯನ್ನು ಸೇರಿಸಿ ಪ್ರಾಭಾಕರ, ಅಭಾವವೂ ಸೇರಿ ಆರು ಪ್ರಮಾಣಗಳನ್ನು ಭಾಟ್ಟರೂ ವೇದಾಂತಿಗಳೂ ಒಪ್ಪಿರುತ್ತಾರೆ. ಸಂಭವ, ಐತಿಹ್ಯ – ಇವೆರಡನ್ನೂ ಹೆಚ್ಚಾಗಿ ಪೌರಾಣಿಕರು ೨–೧೭ರಿಂದ ೧೯.

**ಪ್ರತ್ಯಭಿಜ್ಞಾ :** ಸುಷುಪ್ತಿಯಿಂದೆಚ್ಚತ್ತಾಗ ಸುಖವಾಗಿ ನಿದ್ರಿಸಿದೆನು – ಎಂದೀ ಪರಿಯಲ್ಲಿ ಸಚ್ಚಿದಾನಂದರೂಪವನ್ನು ಗುರುತಿಸುವ ಜ್ಞಾನ ೬–೨೧, ೨೨ ; ಇದರ ಲಕ್ಷಣ ೭–೩ ; ಆತ್ಮನ ಪ್ರತ್ಯಭಿಜ್ಞೆಗೆ ದೃಷ್ಟಾಂತ, ಅವನೇ ಇವನು ಎಂಬ ರೂಪದ ಜ್ಞಾನ ೭–೪ ; ಆತ್ಮನ ಪ್ರತ್ಯಭಿಜ್ಞಾನ ೭–೫ ; ಪ್ರತ್ಯಭಿಜ್ಞೆಗೆ ಉಪಪತ್ತಿ ೭–೬, ೭, ೮ ; ಪ್ರತ್ಯಭಿಜ್ಞೆ ಹೇಗೆ ಆಗುತ್ತದೆ ? ೭ ೧೨, ೧೩, ೧೪ ; ಪ್ರಮಾಣಗಳಿಗೆ ಪ್ರತ್ಯಭಿಜ್ಞೆಯೇ ಸಾಧನ ೭–೧೩ ; ಮೋಹವನ್ನು ತೊಲಗಿಸುವದೇ ಪ್ರತ್ಯಭಿಜ್ಞೆ ೭–೧೯ ; ಪ್ರಮಾಣಗಳಿಗೆಲ್ಲ ಮೋಹಾಪಸರಣವೇ ವ್ಯಾಪಾರ ೭–೨೦.

**ಪ್ರತಿಬಿಂಬ :** ಬುದ್ಧಿಯು ಆತ್ಮನ ಪ್ರತಿಬಿಂಬದಿಂದ ಹೊಳೆಯುತ್ತಾ ಜಗತ್ತನ್ನು ತೋರಿಸುತ್ತದೆ, ಆದ್ದರಿಂದ ಅದು ಆತ್ಮನಲ್ಲ ೫–೨೩.

**ಪ್ರವೃತ್ತಿ :** ಸೂರ್ಯನು ಜಗತ್ತಿನ ಪ್ರವೃತ್ತಿಗೆ ಕಾರಣವಾಗಿರುವಂತೆ ಆತ್ಮನು ದೇಹಾದಿಗಳ ಪ್ರವೃತ್ತಿಗೆ ಕಾರಣ ೫–೧೨.

**ಪ್ರವೇಶ :** ಈಶ್ವರನು ಜೀವರೂಪದಿಂದ ಸೃಷ್ಟಿಯಲ್ಲಿ ಹೊಕ್ಕಿರುತ್ತಾನೆಂದು ಶ್ರುತಿಯಲ್ಲಿದೆ. ತತ್ತ್ವಮಸಿವಾಕ್ಯವು ಜೀವನಲ್ಲಿ ಔಪಚಾರಿಕವಾಗಿ ತಚ್ಛಬ್ದವನ್ನು ಪ್ರಯೋಗಿಸಿಲ್ಲ ೩–೨೪, ೨೫. ಅನ್ನಮಯಕೋಶದಲ್ಲಿ ಪ್ರವೇಶವಾಗಿರುವದರಿಂದ ಸ್ಥೂಲನು, ಬಾಲನು ಎಂದುಮುಂತಾಗಿ ಕಲ್ಪಿತನಾಗಿರುತ್ತಾನೆ ೩–೨೭ ; ನೀರಿನಲ್ಲಿ ಹೊಕ್ಕ ಸೂರ್ಯನು ಬಹುಪ್ರಕಾರವಾಗಿ ಕಾಣುವಂತೆ ಶರೀರಗಳಲ್ಲಿ ಹೊಕ್ಕಿರುವದರಿಂದ ಈಶ್ವರನು ಬಹುಪ್ರಕಾರದಿಂದಿರುವಂತೆ ಕಾಣಿಸುತ್ತಾನೆ ೩–೩೧, ೩೨ ; ಈಶ್ವರನು ಸೃಷ್ಟಿಯಲ್ಲಿ ಹೊಕ್ಕಿರುವದರಿಂದ ಘಟಾದಿಗಳು ಬೆಳಗುತ್ತಿಲ್ಲ ಎಂಬ ವಾದ ೪–೧ ; ಜಗತ್ತನ್ನು ಪ್ರವೇಶಿಸಿ ಈಶ್ವರನು ಬೆಳಗುತ್ತಿರುವದರಿಂದಲೇ ಸೂರ್ಯಾದಿಗಳು ಕೂಡ ಬೆಳಗುತ್ತಾರೆ ೪–೨೮, ೨೯ ; ದೇಹಾದಿಗಳು ಜಡವಾಗಿರುವದರಿಂದ ಈಶ್ವರನ ಪ್ರವೇಶವಿಲ್ಲದೆ ನಾನು ಎಂದು ತೋರಲಾರವು; ೫–೯, ೧೦ ; ಒಳಗೆ ಹೊಕ್ಕ ಜನರನ್ನು ಕಟ್ಟುಮಾಡುತ್ತಿದಾನೆ, ಒಬ್ಬನೇ ಬಹುವಿಧನಾಗಿರುತ್ತಾನೆ ಎಂದು ತೈ. ಆ. ಶ್ರುತಿ ೫–೩೨, ೩೩.

**ಪ್ರಮಾಣಗಳು :** ಇವುಗಳ ಸಂಖ್ಯೆಯ ವಿಷಯಕ್ಕೆ ಮತಭೇದ ; **ಪ್ರತ್ಯಕ್ಷಾದಿ** ಎಂಬ ಶಬ್ದವನ್ನು ನೋಡಿರಿ. ಪ್ರಮಾಣಗಳನ್ನು ವ್ಯಾಪಾರಗೊಳಿಸುವದರಿಂದ ಈಶ್ವರನು ಜ್ಞಾತೃವೆನಿಸಿಲ್ಲ ೨–೪೯ ; ಕರಣಗಳನ್ನಾಗಲಿ ಪ್ರಮಾಣಗಳನ್ನಾಗಲಿ ಪ್ರಯೋಗಿಸುವದರಿಂದ ಪ್ರತ್ಯಭಿಜ್ಞೆಯಾಗುವದಿಲ್ಲ ೭–೧೯.

**ಪ್ರಧಾನಮ್ :** ಇದಕ್ಕೆ ಬೇರೆಬೇರೆಯ ಹೆಸರುಗಳು ೨–೩೧.

**ಪ್ರಾಕಾಮ್ಯ :** ಆಕಾಶಗಮನವೇ ಮುಂತಾದ ಸಿದ್ಧಿಗಳು ಇಚ್ಛಾಮಾತ್ರದಿಂದ ಸಿದ್ಧಿಸುವವು ೧೦–೧೪ ; ಇದಕ್ಕೆ ಪ್ರಾಕಾಶ್ಯವೆಂಬ ಮತ್ತೊಂದು ಹೆಸರೂ

ಉಂಟು. ತನ್ನ ಶರೀರದ ಪ್ರಕಾಶದಿಂದಲೇ ಎಲ್ಲವನ್ನೂ ಬೆಳಗಿಸಿ ತೋರಿಸುವದು ಎಂದು ಅದಕ್ಕೆ ವಿವರ ೧೦-೧೫.

**ಪ್ರಾಣ :** ಆತ್ಮಸಂಪರ್ಕದಿಂದ ಇದರಲ್ಲಿ ಆತ್ಮತ್ವಭ್ರಾಂತಿ ೩-೨೫, ೨೬; ಪ್ರಾಣಕೋಶದಿಂದ ಆತ್ಮ(ಜೀವ)ನಿಗೆ ಹಸಿವುಬಾಯಾರಿಕೆಗಳು ೩-೨೪; ಪ್ರಾಣವು ಸುಷುಪ್ತಿಗೆ ಹೋದಾಗ ನಾದಗಳು ಕೇಳಬರುತ್ತವೆ ೯-೩೯; ಅಲ್ಲಿ ಬಿಂಬರೂಪವು ಕಾಣಿಸುತ್ತದೆ ೯-೪೦; ಚಿತ್ತವು ನಿಶ್ಚಲವಾದರೆ ಪ್ರಾಣವು ನಿಶ್ಚಲ ೯-೩೧; ಪ್ರಾಣಾತ್ಮವಾದ ೫-೬, ೭; ಇದರ ಖಂಡನೆ ೫-೧೪ರಿಂದ ೨೧; ಪ್ರಾಣಾದಿದಶವಿಧವಾಯುಗಳಿಂದ ಶರೀರಧಾರಣೆ ೯-೧೨; ಪ್ರಾಣಾಪಾನಾದಿಗಳ ಸ್ಥಾನಕೃತ್ಯಾದಿಗಳು ೯-೧೩ರಿಂದ ೧೪.

**ಫಲ :** ಸ್ತೋತ್ರದ ಫಲ ೧೦-೧ರಿಂದ ೧೪; ಆನುಷಂಗಿಕವಾದ ಪರಿಚ್ಛಿನ್ನಾಹಂಭಾವವನ್ನು ಬಿಟ್ಟು ಪೂರ್ಣಾಹಂಭಾವವನ್ನು ಪಡೆಯುವದೇ ಮುಖ್ಯಫಲ ೧೦-೧.

**ಬ್ರಹ್ಮ :** ಪರಮಾತ್ಮನ ಸಾಕ್ಷಾತ್ಕಾರವಾದರೆ ಬ್ರಹ್ಮಾದಿಸ್ತಂಬಪರ್ಯಂತವೂ ಸ್ವಪ್ನದಂತೆ ಕಾಣಿಸುತ್ತದೆ ೯-೨೪; ಬ್ರಹ್ಮನು ಅಕಾರಕ್ಕೆ ಅಧಿದೇವತೆ ೯-೪೫; ಬ್ರಹ್ಮವಿಷ್ಣುಶಿವಾದಿಗಳು ಸದಾಶಿವನೆಂಬ ಆತ್ಮನ ಐಶ್ವರ್ಯದ ನೀರುಹನಿಗಳು ೧೦-೬; ಬ್ರಹ್ಮನಾಡಿ ಎಂಬ ಸುಷುಮ್ನೆಯನ್ನು ಪ್ರಾಣನು ಹೊಕ್ಕಾಗ ಆಗುವ ಫಲ, ಬಿಂಬದರ್ಶನ ೯-೪೦; ಬ್ರಹ್ಮವಿಷ್ಣುಶಿವಾದಿಗಳ ಚಿಂತನೆಯೇ ಧ್ಯಾನ ೯-೨೯.

**ಬ್ರಹ್ಮರಂಧ್ರ :** ಮೂಲಾಧಾರದಿಂದ ಇದರವರೆಗೂ ಲೋಕಗಳಿವೆಯೆಂದು ಉಪಾಸನೆ ೯-೭.

**ಭ್ರಮೆ, ಭ್ರಾಂತಿ :** ಮಾಯೆಯಿಂದ ಭ್ರಾಮಿತನಾದ ಜೀವನು ವಿಶ್ವವು ನಾನಾಕಾರವಾಗಿ ಚಲಿಸುವಂತೆ ಕಾಣುತ್ತಿರುತ್ತಾನೆ ೮-೨೪; ಇದರ ಪ್ರತ್ಯಭಿಜ್ಞಾ ಮೋಹವು ಹೋದಾಗ ೭-೩೦; ಆತ್ಮನಿಗೆ ಕರ್ತೃತ್ವ, ಮುಕ್ತಿ - ಇವುಗಳೆರಡೂ ಭ್ರಮೆಯೇ ೮-೨೧; ಜಡಾನೃತಪರಿಚ್ಛಿನ್ನದೇಹಧರ್ಮವನ್ನು ಆತ್ಮನಲ್ಲಿಯೂ ಸತ್ಯಜ್ಞಾನಸುಖಾತ್ಮತ್ವವನ್ನು ದೇಹದಲ್ಲಿಯೂ ಕಲ್ಪಿಸಿರುವದು ೭-೨೧; ಶುಕ್ತಿರಜತಾದಿಭ್ರಾಂತಿಯ ಲಕ್ಷಣ, ಸತ್-ಅಸತ್ ಎಂದು ಮುಂತಾಗಿ ಹೇಳುವದಕ್ಕೆ ಬರುವದಿಲ್ಲ ೭-೨೨, ೨೬; ಯುಕ್ತಿಹೀನಪ್ರಕಾಶವೇ ಭ್ರಾಂತಿ ೭-೨೭; ಆತ್ಮನಲ್ಲಿ ಭ್ರಮೆಯಿಂದಾಗಿರುವ ಕಲ್ಪನಾಪ್ರಕಾರಗಳು ೭-೨೮ರಿಂದ ೩೦; ಆತ್ಮನ ಸದ್ರೂಪಕ್ಕೆ ಭ್ರಾಂತಿಬಾಧೆಗಳಿಲ್ಲ ೭-೩೦.

**ಮಾಯೆ :** ಇಚ್ಛಾಜ್ಞಾನಕ್ರಿಯಾರೂಪಮಾಯೆಯಿಂದ ವಿಕಲ್ಪಗಳೆಲ್ಲ ಆಗಿವೆ ೨-೪೩; ಈಶ್ವರನ ಕರ್ತೃತ್ವವು ಮಾಯಿಕ ೨-೫೬; ಸುಷುಪ್ತಿಯಲ್ಲಿ

**ವ್ಯಷ್ಟ್ಯುಪಾಸನೆ :** ವ್ಯಷ್ಟಿಯಾದ ಶರೀರದಲ್ಲಿ ಸರ್ವಾತ್ಮತ್ವಭಾವನೆಯನ್ನು ಮಾಡಿದರೆ ಸಮಷ್ಟಿಪ್ರಾಪ್ತಿಯಾಗುತ್ತದೆ ೯-೬.

**ಶಕ್ತಿ :** ಈಶ್ವರನ ಕ್ರಿಯಾಶಕ್ತಿಜ್ಞಾನಶಕ್ತಿಗಳು ಅಂತಃಕರಣದಲ್ಲಿ ತೋರುವದರಿಂದ ಈಶ್ವರನು ಕರ್ತೃ, ಜ್ಞಾತೃ – ಎನಿಸಿಕೊಳ್ಳುತ್ತಾನೆ. ಈಶ್ವರನ ಜ್ಞಾನಕ್ರಿಯಾಶಕ್ತಿಗಳು ಜೀವರಲ್ಲಿ ಸೇರಿರುವದರಿಂದ ಜೀವರೂ ಈಶ್ವರರೇ ೧-೬೧ ; ಈಶ್ವರನಿಗೆ ಅನಂತಶಕ್ತಿಗಳಿರುವದರಿಂದ ಇಚ್ಛೆಯಿಂದ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ ೨-೪೮ ; ಈಶ್ವರನಿಗೆ ಮಾಯೆ, ವಿದ್ಯೆ – ಎಂಬ ಸೂರ್ಯನ ಪ್ರಭೆ ಮತ್ತು ನೆರಳುಗಳಂತೆ ಇರುವ ಎರಡು ಶಕ್ತಿಗಳಿವೆ ೭-೧೫ ; ಕ್ರಿಯಾಶಕ್ತಿ, ಕಾಲರೂಪ, ಜ್ಞಾನಶಕ್ತಿಯಿಂದ ಜಗತ್ತು ಜ್ಞಾತೃ, ಜ್ಞಾನ, ಜ್ಞೇಯ ರೂಪವಾಗಿದೆ ೨-೧೪ ; ಈಶ್ವರತ್ವವು ಅನಂತಶಕ್ತಿಗಳನ್ನು ಕೊಡುವದು ೧೦-೫.

**ಶಬ್ದಾದಿಗಳು :** ಶಬ್ದ, ಸ್ಪರ್ಶ, ರೂಪ, ರಸ, ಗಂಧ – ಇವು ಆಕಾಶಾದಿಗಳ ಗುಣಗಳು. ಇಂದ್ರಿಯಗಳಿಗೆ ವಿಷಯಗಳು ; ಸದಾಶಿವ, ಈಶ, ರುದ್ರ, ವಿಷ್ಣು, ಬ್ರಹ್ಮ – ಇವರು ಇವಕ್ಕೆ ದೇವತೆಗಳು ೨-೩೪.

**ಶಿವ, ಈಶ್ವರ, ಪರಮೇಶ್ವರ :** ಸದಾಶಿವಾದಿಗಳು ಭೂತಗಳಿಗೂ ಇಂದ್ರಿಯಗಳಿಗೂ ಅಧಿಷ್ಠಾತೃಗಳು ೨-೩೪ ; ಶೈವಾಗಮದಲ್ಲಿ ಹೇಳಿರುವ ಒಂದು ತತ್ತ್ವ ೨-೪೨ ; ಈಶ್ವರನ ಜಗತ್ಕರ್ತೃತ್ವವೂ ಜೀವನ ಬಂಧಮೋಕ್ಷಾದಿ ವ್ಯವಹಾರಗಳೂ ಮಾಯೆಯಿಂದಲೇ ೨-೫೬ ; ಸದಾಶಿವನು ನಿರಾಲಂಬನು ೯-೨೬ ; ಬ್ರಹ್ಮವಿಷ್ಣುಶಿವಾದಿಗಳ ಚಿಂತನೆಯೇ ಧ್ಯಾನ ೯-೨೯ ; ಸದಾಶಿವನು ನಾದಕ್ಕೆ ಅಧಿದೇವತೆ ೯-೪೫ ; ಯೋಗಸಿದ್ಧಿಯು ಶಿವನಿಂದ ೯-೪೬.

**ಶುಕ್ತಿರಜತ :** ಶುಕ್ತಿರೂಪ್ಯವು ಯಾವ ರೂಪವೆಂಬ ಬಗ್ಗೆ ವಿಕಲ್ಪಗಳ ಪ್ರತಿಷೇಧ ೭-೨೦ರಿಂದ ೨೬ ; ಯುಕ್ತಿಹೀನಪ್ರಕಾಶನವೇ ಲಕ್ಷಣ ೭-೨೭.

**ಶೈವಾಗಮ :** ಈ ಆಗಮದವರು ಮೂವತ್ತಾರು ತತ್ತ್ವಗಳನ್ನು ಒಪ್ಪಿರುತ್ತಾರೆ ೨-೪೨.

**ಷಟ್ತ್ರಿಂಶತ್ ತತ್ತ್ವಗಳು :** ಶೈವಾಗಮದವರು ಪೌರಾಣಿಕರ ಮೂವತ್ತಕ್ಕೆ ಬಿಂದುನಾದಗಳು, ಶಕ್ತಿಶಿವರು, ಶಾಂತಾತೀತರು – ಇವನ್ನು ಸೇರಿಸಿ ಮೂವತ್ತಾರು ತತ್ತ್ವಗಳನ್ನು ಒಪ್ಪಿರುತ್ತಾರೆ ೨-೪೨, ೯-೨ ; ಇವು ವಿರಾಟ್‌ಶರೀರದಲ್ಲಿಯೂ ಜೀವಶರೀರದಲ್ಲಿಯೂ ಇವೆ ೯-೪.

**ಸಂಸ್ಕಾರ್ಯ :** ಜ್ಞಾನಕ್ರಿಯೆಯ ಫಲಗಳು ನಾಲ್ಕು : ಉತ್ಪಾದ್ಯ, ವಿಕಾರ್ಯ, ಆಪ್ಯ, ಸಂಸ್ಕಾರ್ಯ ೧-೨೫.

**ಸಮಾಧಿ :** ಧ್ಯಾನದಿಂದ ಬುದ್ಧಿ ಅಲುಗಾಡದಿರುವದು ೯-೨೯ತ್ತ ; ಧ್ಯಾನ

ಚಿಂತನೆಯೂ ಇಲ್ಲದ್ದು ಅಮನಸ್ಕಸಮಾಧಿ ೯-೩೦; ಸಮಾಧಿಪರಿಪಕ್ವವಾದವರಿಗೆ ಸರ್ವಸಿದ್ಧಿಗಳು ೧೦-೧೯.

**ಸಮ್ಯಗ್ಜ್ಞಾನ :** ಸರಿಯಾದ ತಿಳಿವಳಿಕೆ ೧-೧೨.

**ಸರ್ವಜ್ಞ, ಸರ್ವಕರ್ತಾ :** ಈಶ್ವರ. ಇದರ ವಿಷಯಕ್ಕೆ ಪ್ರಶ್ನೆ ೧-೭; ನಾನೇ ಈಶ್ವರನೆಂದು ಅರಿತುಕೊಂಡಾಗ ಸರ್ವಜ್ಞನೂ ಸರ್ವಕರ್ತನೂ ಆಗುವನು ೪-೩೫.

**ಸರ್ವಾತ್ಮತ್ವ :** ಇದರ ವಿಷಯಕ್ಕೆ ಪ್ರಶ್ನೆ ೧-೫; ರುದ್ರೋಪನಿಷತ್ತಿನಲ್ಲಿ ಶಿವನು ಸರ್ವಾತ್ಮಕನೆಂದಿದೆ ೧-೨೯; ಪ್ರಕಾಶಮಾತ್ರತ್ವವೇ ಸರ್ವಾತ್ಮತ್ವ ೪-೩೬; ಜೀವನು ಪ್ರಕಾಶಾಭಿನ್ನನಾಗಿರುವದರಿಂದ ಸರ್ವಾತ್ಮನೆನ್ನುತ್ತಾರೆ ೩-೩೬; ಸರ್ವಾತ್ಮಭಾವನೆಯಲ್ಲಿ ಒಮ್ಮೆ ಪ್ರವೃತ್ತನಾದರೂ ಶಿವಲೋಕವನ್ನು ಪಡೆಯುತ್ತಾನೆ ೩-೩೮; ಸರ್ವಾತ್ಮಭಾವನೆಯು ಪರಿಪಕ್ವವಾದವನು ಪರಮೇಶ್ವರನೇ ೩-೩೮; ಶರೀರವು ಸರ್ವಾತ್ಮವೆಂದು ಚಿಂತಿಸಬೇಕು ೯-೫; ಶರೀರದಲ್ಲಿ ಸರ್ವಾತ್ಮಭಾವನೆಯ ಪ್ರಕಾರ ೯-೭ರಿಂದ ೧೯; ಈ ಸ್ತೋತ್ರವನ್ನು ಪಠಿಸುತ್ತಲೂ ಸರ್ವಾತ್ಮತ್ವವನ್ನು ಭಾವನೆಮಾಡುತ್ತಲೂ ಇರುವವನಿಗೆ ಆತ್ಮಸಾಮ್ರಾಜ್ಯಫಲ, ಸರ್ವಸಿದ್ಧಿಪ್ರಾಪ್ತಿ ೧೦-೨೦, ೨೧, ೨೨.

**ಸಾಕ್ಷಾತ್ಕಾರ :** ಅನವಚ್ಛಿನ್ನಪ್ರಕಾಶನಾದ ಪರಮಾತ್ಮನ ಸಾಕ್ಷಾತ್ಕಾರದಿಂದ ಬ್ರಹ್ಮಾದಿಸ್ತಂಬಪರ್ಯಂತವಾಗಿ ಎಲ್ಲವೂ ಸ್ವಪ್ನದಂತೆ ೧-೨೮; ಸದಾಶಿವನ ಸಾಕ್ಷಾತ್ಕಾರವಾದಾಗ ಆತನಲ್ಲಿಯೇ ಮಾಯೆಯು ಲಯವಾಗುವದು ೫-೩೪.

**ಸಾಕ್ಷೀ :** ಮನಸ್ಸು ಅವಸ್ಥಾತ್ರಯವಶದಿಂದ ಕರ್ಮಗಳನ್ನು ಮಾಡಿ ಬದ್ಧವಾಗುತ್ತದೆ; ಪರಮಪುರುಷನು ಸಾಕ್ಷಿ ೮-೧೯; ಮನಃಕೃತಕರ್ಮಗಳಿಂದ ಸಾಕ್ಷಿಯಾದ ಆತ್ಮನಿಗೆ ಬಂಧವಿಲ್ಲ ೮-೨೦.

**ಸಾತ್ತ್ವಿಕಾಹಂಕಾರ :** ಅಂತಃಕರಣಜ್ಞಾನೇಂದ್ರಿಯಗಳು ಇದರಿಂದಾಗುವ ಕಾರ್ಯಗಳೆಂದು ಸಾಂಖ್ಯರು ಒಪ್ಪಿರುತ್ತಾರೆ. ಇವುಗಳ ದೇವತೆಗಳು ೨-೩೫, ೩೬, ೩೭.

**ಸಿದ್ಧಿಗಳು :** ಸ್ತೋತ್ರದಿಂದಾಗುವ ಪ್ರಾಸಂಗಿಕಸಿದ್ಧಿಗಳು ೧೦-೨, ೩; ಈಶ್ವರತ್ವಸಿದ್ಧಿಯಿಂದ ಅಣಿಮಾದಿಗಳು ತಾವೇ ಸಿದ್ಧವಾಗುವವು ೧೦-೪, ೫; ಅಣಿಮಾದಿಸಿದ್ಧಿಗಳ ವಿವರ ೧೦-೮ರಿಂದ ೧೩; ಸರ್ವಾತ್ಮಭಾವಪರಿಪಾಕದಿಂದ ಎಲ್ಲವೂ ಸಿದ್ಧವಾಗುವವು ೧೦-೧೯.

**ಸುಷುಪ್ತಿ :** ಸ್ವಪ್ನವಿಲ್ಲದ ನಿದ್ರೆ. ಇಲ್ಲಿ ಮಾಯಾಚ್ಛನ್ನನಾಗಿ ಆತ್ಮನು ಸನ್ಮಾತ್ರನಾಗಿರುತ್ತಾನೆ. ಎಚ್ಚತ್ತಮೇಲೆ ಸಚ್ಚಿದಾನಂದರೂಪದಿಂದ ಚೆನ್ನಾಗಿ ತೋರು

ತ್ತಾನೆ ೪–೨೬, ೨೭; ೬–೨೧; ಇಲ್ಲಿ ಒಂದು ದೃಷ್ಟಿಯಿಂದ ಆತ್ಮನು ಅಪ್ರಕಾಶನು, ಮತ್ತೊಂದು ದೃಷ್ಟಿಯಿಂದ ಸ್ವಪ್ರಕಾಶನು ೬–೨೩.

**ಸೃಷ್ಟಿ :** ಈಶ್ವರನು ಜೀವರೂಪದಿಂದ ಸೃಷ್ಟಿಯಲ್ಲಿ ಪ್ರವೇಶಿಸಿರುತ್ತಾನೆಂಬ ಶ್ರುತಿ ೧-೩; ೩–೨೦.

**ಸೋಽಹಮ್ :** ಈ ಮಂತ್ರವನ್ನು ಪ್ರತಿದಿನವೂ ಆತ್ಮನು ೨೧,೬೦೦ ಸಲ ಉಚ್ಚರಿಸುತ್ತಾನೆ ೯–೪೨; ಇದರಿಂದ ಪ್ರಣವದ ಉತ್ಪತ್ತಿ ೯–೪೩.

**ಸ್ಕಂಧ :** ಬೌದ್ಧರ ಪಂಚಸ್ಕಂಧವಾದ ೬–೫ರಿಂದ ೮; ಇದರ ಖಂಡನೆ ೬–೧೬.

**ಸ್ವಪ್ನ :** ಜಾಗ್ರತ್ತಿಗೆ ಸ್ವಪ್ನದ ಹೋಲಿಕೆ ೧–೧೨ರಿಂದ ೧೩; ಪರಮಾತ್ಮ ಸಾಕ್ಷಾತ್ಕಾರವಾದರೆ ಜಗತ್ತೆಲ್ಲವೂ ಸ್ವಪ್ನದಂತೆ ೧–೨೮.

**ಸ್ವಪ್ರಕಾಶ :** ಸ್ವಪ್ನದಲ್ಲಿನ ವಸ್ತುಗಳ ಪ್ರಕಾಶವು ಆತ್ಮನದೇ; ಎಚ್ಚರದಲ್ಲಿಯೂ ಹಾಗೆಯೇ ಎಂದು ಬಲ್ಲವರು ನಿಶ್ಚಯಿಸಿರುತ್ತಾರೆ ೧–೧೧.

**ಸ್ವಯಂಪ್ರಕಾಶ :** ಜ್ಞಾನವು ಘಟಾದಿಗಳನ್ನು ತೋರಿಸುವಾಗ ತಾನೇ ಬೆಳಗುತ್ತದೆ ೧–೨೨; ಆತ್ಮನು ಸ್ವಯಂಪ್ರಕಾಶನಾದ್ದರಿಂದ ತನ್ನನ್ನು ತಾನೇ ಅರಿತುಕೊಳ್ಳುತ್ತಾನೆ ೬–೨೨: ಸ್ವಯಂಪ್ರಕಾಶನೂ ಸದ್ರೂಪನೂ ಆಗಿರುವ ಪರಮೇಶ್ವರನಲ್ಲಿ ಕಾರ್ಯಕಾರಣಭಾವವೇ ಮುಂತಾದ ಕಲ್ಪನೆಗಳು ರಾಹುವಿನ ತಲೆ ಎಂಬಂತೆ ವಿಕಲ್ಪಮಾತ್ರ ೮-೫, ೬.

**ಸ್ವಯಂಸಿದ್ಧ :** ಜ್ಞಾನವು ಸ್ವಯಂಸಿದ್ಧವಲ್ಲನೆ ಇದ್ದರೆ ಜಗತ್ತೇ ತೋರಲಾರದು; ೧–೨೩.

**ಸ್ವರೂಪಲಕ್ಷಣ :** ಚಂದ್ರನನ್ನು 'ಮಹಾಪ್ರಕಾಶ'ನೆಂದು ಕರೆಯುವಂತೆ ಜೀವ-ಪರಮಾತ್ಮರಿಗೆ ಸಚ್ಚಿದಾನಂದರೂಪತ್ವವನ್ನು ಹೇಳುವದು ಸ್ವರೂಪಲಕ್ಷಣವು ೩–೩೩.

**ಸ್ವಾತ್ಮಬೋಧ :** ಶ್ರುತ್ಯಾಚಾರ್ಯರ ಉಪದೇಶ, ಯೋಗಾಭ್ಯಾಸ, ಈಶ್ವರಾನುಗ್ರಹ – ಇವುಗಳಿಂದ ತನ್ನ ಆತ್ಮನ ಜ್ಞಾನವಾದರೆ ವಿಶ್ವವು ತನ್ನಲ್ಲಿಯೇ ಅಡಕವಾಗುವದು ೧–೧೪.

**ಸ್ವಾರಾಜ್ಯ :** ಆತ್ಮನಲ್ಲಿ – ತನ್ನ ಸ್ವರೂಪದಲ್ಲಿ – ಆಗುವ ಸಾಮ್ರಾಜ್ಯವೇ ನಿಜವಾದ ಸಾಮ್ರಾಜ್ಯ ೧೦–೨೧.

———೦———

# ಶುದ್ಧಪಡಿ

| ಪುಟ | ಸಾಲು | ಇರಬೇಕಾದದ್ದು |
|---|---|---|
| ೯ | ೧ | ೧೯ನೆಯ ಶ್ಲೋಕವು ಆರಂಭವಾಗುವ ಮೊದಲು ಇರಬೇಕಾದ ತಲೆಬರಹ: 'ಈಶ್ವರನ ಜ್ಞಾನಕ್ರಿಯಾಶಕ್ತಿಗಳು ಜೀವರಲ್ಲಿ ಬಂದು ಸೇರಿವೆ'. |
| ೨೩ | ಕೆಳಗಿನಿಂದ ೩ | ತಲೆಬರಹ: 'ವೈಶೇಷಿಕರ ಮತದಲ್ಲಿ ಪ್ರಮೇಯಭೇದಗಳು'. |
| ೨೬ | ೧೪ | ತಲೆಬರಹ: 'ಸಾಂಖ್ಯರ ಮತದಂತೆ ಪ್ರಕೃತಿ' ಎಂದು ಸೇರಿಸಿಕೊಳ್ಳಬೇಕು. |
| ೨೯ | ೧ | ವಿವೇಚನೆ: 'ಇಲ್ಲಿರುವ ವಿವರಣೆಯನ್ನು ಸಾಂಖ್ಯಕಾರಿಕೆಯೇ ಮುಂತಾದ ಕಡೆಗಳಲ್ಲಿ ಹೇಳಿರುವ ವಿವರಕ್ಕೆ ಹೋಲಿಸಬೇಕು' ಎಂದು ಸೇರಿಸಿಕೊಳ್ಳಿ. |
| ,, | ೪೨ನೆಯ ಶ್ಲೋಕ | 'ಶೈವಾಗಮದಂತೆ' ಎಂಬ ತಲೆಬರಹವನ್ನು ಸೇರಿಸಿಕೊಳ್ಳಿ. |
| ೩೩ | ಕೆಳಗಿನಿಂದ ೨ | 'ಚೇದಸ್ಯ' ಇದಕ್ಕೆ ಟಿಪ್ಪಣಿ: 'ನಿಮಿತ್ತಂ ಚೇದ್ಭವೇದಸ್ಯ' ಎಂಬ ಪಾಠಕ್ಕಿಂತ ಇದೇ ಮೇಲು. |
| ೪೬ | ೧೧ | 'ತಟಸ್ಥ' ಲಕ್ಷಣ. |
| ೬೧ | ೧ | 'ದೇಹಾತ್ಮವಾದ ಖಂಡನೆ' ಎಂದು ತಲೆಬರಹವಿರಲಿ. |
| ೬೨ | ೨ | 'ವೀಣಾದಿವಾದ್ಯವತ್'– ಇದಕ್ಕೆ ಟಿಪ್ಪಣಿ 'ವೀಣಾವಾದನವತ್' ಪಾ|| |
| ೭೪ | ಕೆಳಗಿನಿಂದ ೩ | 'ಪ್ರತ್ಯಭಿಜ್ಞಾವಾದದ ಸಮರ್ಥನೆ' ಎಂದು ತಲೆಬರಹವಿರಲಿ. |
| ೮೦ | ೩ | ತಲೆಬರಹ: 'ಪ್ರತ್ಯಭಿಜ್ಞೆಯ ವಿಷಯದ ಅವತರಣಿಕೆ' |
| ೮೬ | ೧೩ | ,, 'ಪ್ರತ್ಯಭಿಜ್ಞೆಯ ಸ್ವರೂಪದ ವಿವರಣೆ' |
| ೯೫ | ಶ್ಲೋಕ ೨೮ | ,, 'ಆತ್ಮನಲ್ಲಾಗಿರುವ ಕಲ್ಪನೆಗೆ ದೃಷ್ಟಾಂತಗಳು' |
| ೧೨೦ | ,, ೩೯ | ,, 'ನಾದಶ್ರವಣ, ಬಿಂಬದರ್ಶನ' |
| ,, | ,, ೪೧ | ,, 'ಹಂಸಮಂತ್ರ, ಪ್ರಣವ' |

15-3-1973, 1000. ಅಧ್ಯಾತ್ಮಪ್ರಕಾಶಮುದ್ರಣಾಲಯ, ಹೊಳೆನರಸೀಪುರ.

(ರಕ್ಷಾಪತ್ರದ 2ನೆಯ ಪುಟದಿಂದ ಮುಂದುವರಿದದ್ದು)

6 **ಮಾಂಡೂಕ್ಯೋಪನಿಷತ್ತು :** ಎಚ್ಚರ, ಕನಸು, ತನಿನಿದ್ರೆ – ಎಂಬ ಮೂರು ಅವಸ್ಥೆಗಳ ಸೋಂಕೂ ಇಲ್ಲದೆ ನಿರ್ಮಲವಾಗಿರುವ ನಮ್ಮೆಲ್ಲರ ಆತ್ಮನಾಗಿರುವ ಅದ್ವಿತೀಯಬ್ರಹ್ಮದ ಸ್ವರೂಪವನ್ನು ಅನುಭವಾನುಸಾರ ವಾಗಿ ವರ್ಣಿಸಿರುವ ಅಮೂಲ್ಯವಾದ ಉಪನಿಷತ್ತಿದು. ಇದರ ಮೇಲೆ ಶ್ರೀಶಂಕರಭಗವತ್ಪಾದರವರ ಪರಮಗುರುಗಳಾದ ಶ್ರೀಗೌಡಪಾದರವರು ಬರೆ ದಿರುವ ಅನರ್ಘವಾದ ಕಾರಿಕೆಗಳ ನಾಲ್ಕು ಪ್ರಕರಣಗಳೂ ಅವುಗಳ ಭಾಷ್ಯವೂ ಈ ಗ್ರಂಥದಲ್ಲಿವೆ. ವೇದಾಂತದ ಸಾರಸಂಗ್ರಹವನ್ನೂ ಬೌದ್ಧರ ಪ್ರಕ್ರಿಯೆಗೂ ವೇದಾಂತಪ್ರಕ್ರಿಯೆಗೂ ಇರುವ ತಾರತಮ್ಯವನ್ನೂ ಇದರಲ್ಲಿ ಕಾಣಬಹುದು.

7 **ಛಾಂದೋಗ್ಯೋಪನಿಷತ್ತು :** ಈ ಉಪನಿಷತ್ತು ಸಾಮವೇದಕ್ಕೆ ಸೇರಿದ್ದು. ಇದರಲ್ಲಿ ಮೊದಲನೆಯ ಐದು ಅಧ್ಯಾಯಗಳಲ್ಲಿ ಕ್ರಮವಾಗಿ ಉಪಾಸನೆಗಳ ವಿವರವನ್ನು ವಿಸ್ತಾರವಾಗಿ ತಿಳಿಸಿ ಅನಂತರ ಆರನೆಯ ಅಧ್ಯಾಯದಿಂದ ಮುಂದೆ ಆತ್ಮಜ್ಞಾನವನ್ನು ಪ್ರತಿಪಾದಿಸಿದೆ. ಈ ಉಪನಿಷತ್ತಿನಲ್ಲಿರುವ ವಿಷಯವಾಕ್ಯಗಳು ಬ್ರಹ್ಮಸೂತ್ರಭಾಷ್ಯದಲ್ಲಿ ವಿಚಾರಕ್ಕೆ ಬಹಳವಾಗಿ ತೆಗೆದು ಕೊಳ್ಳಲ್ಪಟ್ಟಿವೆ. ತತ್ತ್ವಮಸಿಮಹಾವಾಕ್ಯದ ವಿಸ್ತಾರವಾದ ವಿವರವು ಇದರಲ್ಲಿಯೇ ಇರುವದು. ಭೂಮವಿದ್ಯೆ, ದಹರವಿದ್ಯೆ– ಮುಂತಾದ ಅನರ್ಘ ವಿಷಯಗಳೂ ಇದರಲ್ಲಿ ಅಡಕವಾಗಿವೆ. ಶಾಂಕರವೇದಾಂತದ ಅನೇಕ ವಿಚಾರಗಳ ಮನನಕ್ಕೆ ಅತ್ಯುತ್ತಮಗ್ರಂಥವಿದು.

8 **ಬೃಹದಾರಣ್ಯಕೋಪನಿಷತ್ತು** (೧-೨ನೆಯ ಭಾಗಗಳು) **:** ಹೆಸರಿಗೆ ತಕ್ಕಂತೆ ಉಪನಿಷತ್ತುಗಳೆಲ್ಲೆಲ್ಲ ದೊಡ್ಡದಾಗಿರುವ, ಶುಕ್ಲಯಜುರ್ವೇದಕ್ಕೆ ಸೇರಿರುವ ಈ ಉಪನಿಷತ್ತಿಗೆ ಆಚಾರ್ಯರು ವಿಸ್ತಾರವಾಗಿ ಭಾಷ್ಯವನ್ನು ಬರೆದಿರುತ್ತಾರೆ. **ಮಧುಕಾಂಡ**ವೆಂದು ಪ್ರಸಿದ್ಧವಾಗಿರುವ ಇದರ ಮೊದ ಲನೆಯ ಎರಡು ಅಧ್ಯಾಯಗಳಲ್ಲಿ ಆಗಮಪ್ರಧಾನವಾಗಿ ತತ್ತ್ವವನ್ನು ತಿಳಿಸಿರುತ್ತದೆ. ಮೂರು ನಾಲ್ಕನೆಯ ಅಧ್ಯಾಯಗಳು **ಮುನಿಕಾಂಡ** ವೆಂಬ ಹೆಸರಿನಿಂದ ತರ್ಕಪ್ರಧಾನವಾಗಿದ್ದು ಆಗಮೋಪಪತ್ತಿಗಳಿಂದ ತತ್ತ್ವ ವನ್ನು ವಿವರಿಸುತ್ತವೆ. ಕೊನೆಯ ಎರಡು ಅಧ್ಯಾಯಗಳು **ಖಿಲಕಾಂಡ** ವೆಂದು ಪ್ರಸಿದ್ಧವಾಗಿದ್ದು ಉಪಾಸನಾಭಾಗವನ್ನು ಒಳಗೊಂಡಿವೆ. ಆತ್ಮ ಸ್ವರೂಪವನ್ನು ಅವಸ್ಥಾತ್ರಯಪರೀಕ್ಷೆಯಿಂದ ಗೊತ್ತುಪಡಿಸುವ ವಿಚಾರ ಸರಣಿಯು ಇದರಲ್ಲಿ ಬಹಳ ಸುಂದರವಾಗಿದೆ. ಯಾಜ್ಞವಲ್ಕ್ಯ–ಮೈತ್ರೇಯಿಯ ಸಂವಾದ, ಜನಕ–ಯಾಜ್ಞವಲ್ಕ್ಯಸಂವಾದ – ಮುಂತಾದ ಕಥಾರೂಪಗಳಿಂದ ತತ್ತ್ವವನ್ನು ಹೃದಯಂಗಮವಾಗಿ ಪ್ರತಿಪಾದಿಸುವ ಉಪನಿಷತ್ತಿದು. ಆಚಾರ್ಯರು ಈ ಭಾಷ್ಯದಲ್ಲಿ ಅನೇಕ ವಿಷಯಗಳ ವಿಸ್ತಾರವಾದ ಚರ್ಚೆ ಯನ್ನು ಮಾಡಿ ಈ ಉಪನಿಷತ್ತಿನ ರಹಸ್ಯಗಳನ್ನೆಲ್ಲ ಹೊರಗೆಡವಿರುತ್ತಾರೆ. ಜಿಜ್ಞಾಸುಗಳು ಅವಶ್ಯವಾಗಿ ಸಂಗ್ರಹಿಸಬೇಕಾದ ಉಪನಿಷತ್ತಿದು.

# ಶ್ರೀ ಶಂಕರಾಚಾರ್ಯರ ಕೃತಿಗಳು

ಇವುಗಳಲ್ಲಿ ಮೂಲ, ಭಾಷ್ಯ, ಟಿಪ್ಪಣಿ, ಸಾರ, ಶಬ್ದಾನುಕ್ರಮಣಿಕೆ – ಇವೆಲ್ಲವೂ ಇವೆ. ಭಾಷ್ಯದ ಸಂಸ್ಕೃತಮೂಲವನ್ನು ಕನ್ನಡದ ಅಕ್ಷರದಲ್ಲಿ ಕೊಟ್ಟಿರುತ್ತದೆ. ಅನುವಾದವನ್ನು ಪರಿಷ್ಕರಿಸಿ ಪೀಠಿಕೆ, ಟಿಪ್ಪಣಿ – ಮುಂತಾದವುಗಳನ್ನು ಹೊಸದಾಗಿಯೇ ಸೇರಿಸಿ ಸಂಸ್ಕೃತ ಮೂಲಕ್ಕೆ ಬಿಂಬಪ್ರತಿಬಿಂಬದಂತೆ ಅನುವಾದವನ್ನು ಕೊಟ್ಟಿರುವದರಿಂದ ಮೂಲಸಂಸ್ಕೃತ ಭಾಷ್ಯವನ್ನು ಓದುವದಕ್ಕೆ ಪ್ರಯತ್ನಿಸುವವರಿಗೂ, ಶಾಂಕರಭಾಷ್ಯವನ್ನು ಪ್ರಸ್ಥಾನತ್ರಯ ಭಾಷ್ಯಗಳ ಮತ್ತು ಪ್ರಕರಣಗಳ ಪರಸ್ಪರ ಹೋಲಿಕೆಯಿಂದ ಅರ್ಥಮಾಡಿಕೊಳ್ಳಬೇಕೆನ್ನುವವರಿಗೂ ಈ ಗ್ರಂಥಗಳು ಅಮೂಲ್ಯವಾಗಿವೆ. ಶಂಕರಾಚಾರ್ಯರ ಸಂಪೂರ್ಣಗ್ರಂಥಗಳನ್ನು ಪುಸ್ತಕಭಂಡಾರದಲ್ಲಿ ಸಂಗ್ರಹಿಸಿಟ್ಟುಕೊಳ್ಳಬೇಕೆನ್ನುವವರಿಗೆ ಇದೊಂದು ಸುಸಂಧಿ. ಸ್ಕೂಲುಗಳೂ ಕಾಲೇಜುಗಳೂ ತಮ್ಮ ಪುಸ್ತಕಭಂಡಾರದಲ್ಲಿ ಅವಶ್ಯವಾಗಿ ಈ ಪುಸ್ತಕಗಳನ್ನು ಸಂಗ್ರಹಿಸಬೇಕು.

1. **ಈಶಾವಾಸ್ಯೋಪನಿಷತ್ತು :** ಇದರಲ್ಲಿ ಕರ್ಮ, ಉಪಾಸನೆ. ಜ್ಞಾನ – ಇವುಗಳ ಸಂಬಂಧವನ್ನು ಸ್ಪಷ್ಟಪಡಿಸಿರುತ್ತದೆ. ಮಾಧ್ಯಂದಿನಪಾಠವನ್ನೂ ಕೊಡಲಾಗಿದೆ. ತಿದ್ದಿದ ನೂತನ ಸಂಸ್ಕರಣ.

2. **ಕೇನೋಪನಿಷತ್ತು :** ಚೈತನ್ಯಸ್ವರೂಪವಾದ ಬ್ರಹ್ಮದ ಶಕ್ತಿಯಿಂದಲೇ ಎಲ್ಲವೂ ತಮ್ಮ ತಮ್ಮ ಕೆಲಸಗಳನ್ನು ಮಾಡುವವು – ಎಂಬುದನ್ನು ಸ್ಪಷ್ಟಪಡಿಸುತ್ತದೆ. ಹೊಸ ಸಂಸ್ಕರಣ.

3. **ಕಾಠಕೋಪನಿಷತ್ತು :** ಧರ್ಮಾಧರ್ಮಗಳಿಗೂ ಕಾಲತ್ರಯಕ್ಕೂ ಕಾರ್ಯಕಾರಣಭಾವಕ್ಕೂ ಕಟ್ಟುಬೀಳದ ಬ್ರಹ್ಮವೇ ನಮ್ಮ ಆತ್ಮನು – ಎಂದು ತಿಳಿಸುತ್ತದೆ. ಹೊಸ ಸಂಸ್ಕರಣ.

4. **ಮುಂಡಕೋಪನಿಷತ್ತು :** ವೇದೋಕ್ತವಾದ ವಿದ್ಯೆಯನ್ನು ಪರವಿದ್ಯೆ, ಅಪರವಿದ್ಯೆ – ಎಂದು ಎರಡು ವರ್ಗಗಳಾಗಿ ವಿಂಗಡಿಸಿ ಜಗತ್ಕಾರಣವಾದ ಅಕ್ಷರವೆಂಬ ಹೆಸರಿನ ಅದ್ವಿತೀಯಬ್ರಹ್ಮವನ್ನು ಅರಿತುಕೊಳ್ಳುವ ವಿದ್ಯೆಯೇ ಪರವಿದ್ಯೆ ಎಂದು ಇಲ್ಲಿ ತಿಳಿಸಿದೆ. ಎಲ್ಲವೂ ಬ್ರಹ್ಮವೊಂದೇ ಆಗಿರುವದರಿಂದ ಅದನ್ನು ಅರಿತುಕೊಂಡರೆ ಎಲ್ಲವನ್ನೂ ಅರಿತಂತೆ ಆಗುವದೆಂತಲೂ ಈ ಬ್ರಹ್ಮಜ್ಞಾನದಿಂದ ಜೀವನ್ಮುಕ್ತಿಯು ಲಭಿಸುವದೆಂತಲೂ ಪ್ರತಿಪಾದಿಸಿದೆ. ಜ್ಞಾನಕ್ಕೆ ಬೇಕಾದ ಸತ್ಯಾದಿಸಾಧನಗಳನ್ನು ಪ್ರತಿಪಾದಿಸಿರುವದೊಂದು ಇದರ ವಿಶೇಷ.

5. **ಪ್ರಶ್ನೋಪನಿಷತ್ತು :** ಮುಂಡಕೋಪನಿಷತ್ತಿನ ವಿಷಯವನ್ನು ಇಲ್ಲಿ ವಿವರಿಸಿದೆ. ಮುಂಡಕಪ್ರಶ್ನಗಳ ಸಂಬಂಧವನ್ನು ವಿಶದೀಕರಿಸಿ ಅಕ್ಷರಾಖ್ಯ ಪರಮಾತ್ಮನ ಜ್ಞಾನದಿಂದ ಸದ್ಯೋಮುಕ್ತಿಯೂ ಉಪಾಸನೆಯಿಂದ ಕ್ರಮಮುಕ್ತಿಯೂ ಆಗುವದೆಂದು ನಿರೂಪಿಸುವ ಪ್ರಸಂಗದಿಂದ ಈ ಉಪನಿಷತ್ತಿನ ಭಾಷ್ಯದಲ್ಲಿ ಆಚಾರ್ಯರವರು ಅವಸ್ಥಾತ್ರಯ, ಜ್ಞಾನಸ್ವರೂಪ, ಕರ್ತೃತ್ವ-ಭೋಕ್ತೃತ್ವ – ಎಂಬ ಮೂರು ವಿಷಯಗಳನ್ನು ವಿಸ್ತಾರವಾಗಿ ಚರ್ಚಿಸಿರುತ್ತಾರೆ.

(ರಕ್ಷಾಪತ್ರದ 3ನೆಯ ಪುಟವನ್ನು ನೋಡಿ